# ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ಪದ್ಧತಿಗಳು

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ

ಉಮೇಶ ಎಂ. ಹಡಗಲಿ

ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ



ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

೨೦೧೨

# ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ಪದ್ಧತಿಗಳು

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ
**ಉಮೇಶ ಎಂ. ಹಡಗಲಿ**

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**



**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ- ೫೮೩ ೨೭೬

೨೦೧೨

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಉಮೇಶ ಎಂ. ಹಡಗಲಿ ಇವರು **ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ಪದ್ಧತಿಗಳು** ಎಂಬ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು/ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ: ೧೬.೧೦.೨೦೧೨

# ಸಂಶೋಧಕರ ಪ್ರಮಾಣ ಪತ್ರ

**ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ಪದ್ಧತಿಗಳು** ಎಂಬ ಮಹಾಪ್ರಬಂಧವನ್ನು **ಡಾ. ವೀರೇಶ ಬಡಿಗೇರ** ಪ್ರಾಧ್ಯಾಪಕರು ಹಸ್ತಪ್ರತಿಶಾಸ್ತ್ರ ವಿಭಾಗ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Hadagali

ಉಮೇಶ ಎಂ. ಹಡಗಲಿ
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ: ೧೬.೧೦.೨೧೦೧೨

## ಮನದಾಳದ ಮಾತು

ನಾನು ಮೊದಲು ಎಂ.ಎ.ಪಿಎಚ್.ಡಿ. ವಿದ್ಯಾರ್ಥಿಯಾಗಿ ವಿಶ್ವವಿದ್ಯಾಲಯಕ್ಕೆ ಬಂದಾಗ ಕುಲಪತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಡಾ.ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ನಂತರದ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ, ಡಾ.ಎ.ಮುರಿಗೆಪ್ಪ ಅವರಿಗೆ, ಇಂದಿನ ಕುಲಪತಿಗಳಾದ ಡಾ.ಹಿ.ಚಿ.ಬೋರಲಿಂಗಯ್ಯ ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಎಫ್.ಟಿ.ಹಳ್ಳಿಕೇರಿ ಅವರುಗಳಿಗೆ,

ನನ್ನಲ್ಲಿ ಆತ್ಮಸ್ಥೈರ್ಯವನ್ನು ತುಂಬಿ ಸಂಶೋಧನಾ ಮನೋಭಾವವನ್ನು ಹುಟ್ಟುಹಾಕಿದ ಸದಾ ಶಾಂತಸ್ವಭಾವದ, ಸಜ್ಜನಶೀಲರು, ಸೃಜನಾತ್ಮಕ ವಿಚಾರವುಳ್ಳ ನನ್ನ ವಿದ್ಯಾಗುರುಗಳು ಮಾರ್ಗದರ್ಶಕರು ಆದ ಡಾ.ವೀರೇಶ ಬಡಿಗೇರ ಅವರಿಗೆ, ಅವರ ಧರ್ಮಪತ್ನಿ ಶ್ರೀಮತಿ ಅನಿತಾ ಬಡಿಗೇರ ಹಾಗೂ ಕುಟುಂಬದವರಿಗೆ, ನನ್ನ ನೆಚ್ಚಿನ ಗುರುಗಳಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಕುಲಪತಿಗಳು ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು ಅವರಿಗೆ, ಡಾ.ಕೆ.ವಿ. ನಾರಾಯಣ, ಡಾ.ರಹಮತ್ ತರೀಕೆರೆ, ನನ್ನ ಏಳ್ಗೆಯನ್ನು ಬಯಸಿದ ಗುರುಗಳಾದ ಡಾ.ಎಸ್.ಎಸ್.ಅಂಗಡಿ, ಡಾ.ಎಸ್.ಆರ್. ಚನ್ನವೀರಪ್ಪ ವಿಭಾಗದ ಮುಖ್ಯಸ್ಥರಾದ ಡಾ.ಕೆ.ರವೀಂದ್ರನಾಥ ಅವರುಗಳಿಗೆ ಮತ್ತು ವಿಭಾಗದ ಕಛೇರಿ ಸಿಬ್ಬಂದಿಯವರಿಗೆ,

ನನಗೆ ತಮ್ಮ ವಿಚಾರಧಾರೆಗಳನ್ನು ನೀಡಿದ ಡಾ.ವೈ.ಸಿ.ಭಾನುಮತಿ ಡಾ.ವಿಜಯಕುಮಾರಿ, ಡಾ.ಶಿವಾನಂದ ಎಸ್.ವಿರಕ್ತಮಠ, ಡಾ.ಡಿ.ಮೀನಾಕ್ಷಿ, ಡಾ.ಅಮರೇಶ ನುಗುಡೋಣಿ, ಡಾ.ಸುಬ್ಬಣ್ಣ ರೈ ಇನ್ನೂ ಮುಂತಾದವರು, ನನಗೆ ಗ್ರಂಥಾಲಯದಲ್ಲಿ ಗ್ರಂಥಗಳನ್ನು ಪರಾಮರ್ಶಿಸಲು ಅವಕಾಶ ನೀಡಿದ ಹಿಂದಿನ ಗ್ರಂಥಪಾಲಕರಿಗೆ ಹಾಗೂ ಇಂದಿನ ಗ್ರಂಥಪಾಲಕರಾದ ಡಾ.ಹೆಚ್.ನಾಗವೇಣಿ ಮತ್ತು ಗ್ರಂಥಾಲಯದ ಸಿಬ್ಬಂದಿಗಳಿಗೆ,

ನನ್ನ ಪೂಜ್ಯ ತಂದೆ ತಾಯಿಗಳಾದ ಶ್ರೀ ಮಹಾಂತೇಶ ಬ. ಹಡಗಲಿ, ಶ್ರೀಮತಿ ಸಂಗಮ್ಮ ಹಡಗಲಿ, ಸದಾ ಏಳ್ಗೆ ಬಯಸುವ ಅಣ್ಣ ಬಸವರಾಜ ಎಂ.ಹಡಗಲಿ, ಅತ್ತಿಗೆ ಹೇಮಾ, ಅಣ್ಣನ ಮಕ್ಕಳಾದ ಮೇಘಾ, ಕುಶಾಲ, ಹೆಂಡತಿ ವೀಣಾ, ಅಜ್ಜ ಮಲ್ಲನಗೌಡ ಹ. ಅಂಟರಠಾಣಿ ಮಾವರಾದ ಶ್ರೀ. ಶ್ರೀಶೈಲಪ್ಪ ಬ ಜೂಲಕಟ್ಟಿ ನಿವೃತ್ತ ಪ್ರಾಚಾರ್ಯರು, ಶ್ರೀ ಶಿವಲಿಂಗಪ್ಪ ಬ. ಜೂಲಕಟ್ಟಿ ನಿವೃತ್ತ ಎಸ್ಪಿ ಹಾಗೂ ಕುಟುಂಬ ವರ್ಗದವರೂ ನನ್ನ ಈ ಸಂಶೋಧನಾ ಕಾರ್ಯದಲ್ಲಿ ಬೆಂಬಲವಾಗಿ ನಿಂತು ಯಾವುದೇ ಸಮಸ್ಯೆಗೆ ಕಿಂಚಿತ್ತು ಬೇಸರವಿಲ್ಲದೆ ಸಹಕರಿಸಿದ ಇವರಿಗೆ.

ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘದ ಗೌರವಾನ್ವಿತ ಅಧ್ಯಕ್ಷರಾದ ಶ್ರೀ. ಅಲ್ಲಂ ಗುರುಬಸವರಾಜ್, ಉಪಾಧ್ಯಕ್ಷರಾದ ಶ್ರೀ.ಮಹೇಶ್ವರಸ್ವಾಮಿ, ಕಾರ್ಯದರ್ಶಿಗಳಾದ ಶ್ರೀ. ಹೆಚ್.ಎಂ.ಗುರುಸಿದ್ಧಸ್ವಾಮಿ ಖ್ಯಾತ ನ್ಯಾಯವಾದಿಗಳು ನನ್ನ ಸಂಶೋಧನೆಗೆ ಸದಾ ಹುರುದುಂಬಿಸಿ, ಪ್ರೋತ್ಸಾಹಿಸಿದ ಇವರಿಗೆ, ಹಾಗೂ ಕಾರ್ಯಕಾರಿ ಸಮಿತಿಯ ಪದಾಧಿಕಾರಿಗಳಿಗೆ, ಷಾ.ಭವರಲಾಲ್ ಬಾಬೂಲಾಲ್ ನಾಹರ್ ಶಿಕ್ಷಣ ಮಹಾವಿದ್ಯಾಲಯ ಹೊಸಪೇಟೆ ಆಡಳಿತ ಮಂಡಳಿಯ ಅಧ್ಯಕ್ಷರಾದ ಡಾ॥ ಜಿ. ಸಿದ್ಧಲಿಂಗಮೂರ್ತಿ ಹಾಗೂ ಸದಸ್ಯರಾದ ಶ್ರೀ.ಎನ್.ಎಸ್.ರೇವಣಸಿದ್ದಪ್ಪ, ಶ್ರೀ. ಹೆಚ್.ವಿ.ಶರಣುಸ್ವಾಮಿ ಪ್ರಾಂಶುಪಾಲರಾದ ಪ್ರೊ.ಪಿ.ಎಂ.ರಾಜಶೇಖರ ಅವರಿಗೆ, ಪಿಎಚ್.ಡಿ ಮಾಡಲು ಅನುಮತಿ ನೀಡಿದ ಷಾ.ಭ.ಬಾ.ನ.ಶಿಕ್ಷಣ ಮಹಾವಿದ್ಯಾಲಯ ಹೊಸಪೇಟೆಯ ಆಡಳಿತ ಮಂಡಳಿಯ ಹಿಂದಿನ ಅಧ್ಯಕ್ಷರಾದ ಶ್ರೀ. ಅಮರಾವತಿ ವಿರೂಪಾಕ್ಷರೆಡ್ಡಿ ಹಾಗೂ ಶ್ರೀ ಜಾಲಿಪ್ರಕಾಶ ವಿಜಯನಗರ ಮಹಾವಿದ್ಯಾಲಯ ಹೊಸಪೇಟೆಯ ಆಡಳಿತ ಮಂಡಳಿಯ ಅಧ್ಯಕ್ಷರಾದ ಶ್ರೀ. ಸಾಲಿ ಸಿದ್ಧಯಸ್ವಾಮಿಯವರಿಗೆ ಪ್ರಾಂಶುಪಾಲರಾದ ಪ್ರೊ.ಎಸ್.ಎಸ್. ಪೋಲಿಸ್‌ಪಾಟೀಲ, ಹಾಗೂ ಬಿ.ಇಡಿ. ಕಾಲೇಜಿನ ಸಿಬ್ಬಂದಿ ವರ್ಗದವರಿಗೆ ಹಾಗೂ ವಿದ್ಯಾರ್ಥಿಗಳಿಗೆ, ಮತ್ತು ಅಕ್ಷರ ಸಂಯೋಜಿಸಿ ಕೊಟ್ಟ ಶ್ರೀ ರವಿಕುಮಾರ ಎ. ಕಮಲಾಪುರ ಇವರುಗಳಿಗೆ,

*ಕೃತಜ್ಞತೆಗಳು*

**ಉಮೇಶ ಎಂ. ಹಡಗಲಿ**

# ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ಕ್ರಮ

೧. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ಕ್ರಮ

೨. ಕರ್ನಾಟಕ ಮತ್ತು ದಕ್ಷಿಣ ಭಾರತೀಯ ಸಂದರ್ಭದಲ್ಲಿ ಈ ಕುರಿತು ನಡೆದ ಅಧ್ಯಯನಗಳ ಸ್ಥೂಲ ಸಮೀಕ್ಷೆ

**ಪೀಠಿಕೆ**

ಪ್ರಾಚೀನ ಕಾಲದಲ್ಲಿ ಜ್ಞಾನ ಮತ್ತು ಅನುಭವಗಳನ್ನು ಮುಂದಿನ ತಲೆಮಾರುಗಳ ಪ್ರಯೋಜನಕ್ಕಾಗಿ ದಾಖಲಿಸುವ ಮತ್ತು ರಕ್ಷಿಸಿಸುವ ಪದ್ಧತಿ ರೂಢಿಯಲ್ಲಿತ್ತು. ಬಹುಮಟ್ಟಿಗೆ ಬಲ್ಲಭಾಷೆಯೊಂದರಲ್ಲಿ ತಿಳಿಯುವಂತೆ ಅಥವಾ ತಿಳಿಯಲು ಸಾಧ್ಯವಿರುವಂತೆ ಅರ್ಥವತ್ತಾಗಿ ರಚಿತವಾದ ಸಂಸ್ಕೃತಿಯೂ ಬೆಳೆದುಬಂದಿತು. ಗ್ರಂಥಗಳು ವಸ್ತುಸಂಗ್ರಹಾಲಯದ ಪ್ರದರ್ಶನ ವಸ್ತುಗಳಾಗದೇ ಬದುಕಿನ ಅಂಗವಾಗಿದ್ದವು. ದಿನಬಳಕೆಗೆ ಬೇಕಾಗುವ ಆಹಾರ ಧಾನ್ಯಗಳನ್ನು ರಕ್ಷಿಸಲು ನೈಸರ್ಗಿಕವಾಗಿ ಸಿಗುವ ಬೇವು, ಕಾಳಮೆಣಸು, ಹೊಂಗೆ ಇತ್ಯಾದಿ ವಸ್ತುಗಳನ್ನು ಬಳಸುತ್ತಿದ್ದರು. ಅದೇ ರೀತಿ ಗ್ರಂಥಗಳನ್ನು ಪಾಲನೆ ಪೋಷಣೆ ಮಾಡಲಾಗುತ್ತಿತ್ತು. ಅವುಗಳನ್ನು ಪೂಜ್ಯಭಾವನೆಯಿಂದ ಸರಸ್ವತಿ ಸ್ಥಾನ ನೀಡಿ ಪೂಜಿಸಲಾಗುತ್ತಿತ್ತು.

ಕಾಗದದ ಪ್ರವೇಶದ ಮೊದಲು ದಕ್ಷಿಣ ಏಷ್ಯಾದ ರಾಷ್ಟ್ರಗಳಲ್ಲಿ ಅದರಲ್ಲೂ ಮುಖ್ಯವಾಗಿ ದಕ್ಷಿಣ ಭಾರತದಲ್ಲಿ ತಾಳೆಎಲೆಗಳನ್ನು ಬರೆಯುವುದಕ್ಕಾಗಿ ಬಳಸುತ್ತಿದ್ದರು. ತಾಳೆಮರಗಳು ಉಷ್ಣವಲಯದ ಈ ಪ್ರದೇಶದಲ್ಲಿ ಯಥೇಚ್ಚವಾಗಿ ಸಿಗುತ್ತಿದ್ದವು. ಅವುಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿದರೆ ಹಾಗೂ ನಾಜೂಕಾಗಿ ನೋಡಿಕೊಂಡರೆ ಅವು ಹಲವಾರು ವರ್ಷಗಳವರೆಗೆ ಬಾಳ್ವಿಕೆ ಬರುತ್ತವೆ ಹಾಗೂ ಗಟ್ಟಿಯಾಗಿರುತ್ತವೆ. ಭಾರತದಂತ ದೇಶದಲ್ಲಿ ಬಿಸಿ ಮತ್ತು ತೇವಾಂಶದ ವಾತಾವರಣವಿರುವುದರಿಂದ ಅವು ತಾಳೆಗರಿಗಳ ದೀರ್ಘಬಾಳಿಕೆಯ ಮೇಲೆ ಪ್ರತಿಕೂಲ ಪರಿಣಾಮಗಳನ್ನು ಬೀರುತ್ತವೆ.

ಜ್ಞಾನವು ವ್ಯಕ್ತಿಕೇಂದ್ರದಿಂದ ಬರವಣಿಗೆಗೆ ಬಂದು ಗ್ರಂಥರೂಪ ಪಡೆದು ಸಾರ್ವತ್ರಿಕವಾಗಿ ಎಲ್ಲರಿಗೂ ತಲುಪಲು ಸಹಾಯಕವಾಯಿತು. ಜ್ಞಾನವನ್ನು ಕುರಿತು ಕೆಳಗಿನಂತೆ ಹೇಳಬಹುದು. ಜ್ಞಾನಕ್ಕಿಂತ ಪವಿತ್ರವಾದುದು ಯಾವುದು ಇಲ್ಲ. ಜ್ಞಾನವನ್ನು ಪಡೆಯಬೇಕಾದರೆ ನಾವು ಶ್ರದ್ಧಾವಂತರಾಗಿರಬೇಕು. ಶ್ರದ್ಧೆ ಇಲ್ಲದವನಿಗೆ ಜ್ಞಾನ ಲಭಿಸದು. ನಿಜವಾದ ಜ್ಞಾನದಿಂದ ಎಲ್ಲ ಬಗೆಯ ತಪ್ಪು ತಿಳುವಳಿಕೆಗಳು ನಾಶವಾಗಿ, ನಮ್ಮ ಬಗ್ಗೆ ನಮಗೆ ಸರಿಯಾದ ಅರಿವು ಮೂಡುತ್ತದೆ. ಜ್ಞಾನವೆಂದರೆ ಬೆಂಕಿಯ ಹಾಗೆ. ಅದು ನಮ್ಮ ಮನಸ್ಸಿನಲ್ಲಿರುವ ಎಲ್ಲ ಬಗೆಯ ಕೆಟ್ಟ ಸಂಗತಿಗಳನು ಭಸ್ಮಮಾಡಿ, ನಮ್ಮನ್ನು ಪರಿಶುದ್ಧವಾಗಿ ಮಾಡುತ್ತದೆ. ಆದ್ದರಿಂದಲೇ ಜ್ಞಾನಕ್ಕಿಂತ ಪವಿತ್ರವಾದುದು ಯಾವುದೂ ಇಲ್ಲ.

ಭಗವಂತನೇ ನಮ್ಮ ದೇಹದಲ್ಲಿ ಅಂತರ್ಯಾಮಿಯಾಗಿದ್ದಾನೆ. ಈ ದೇಹ ಅವನ ಆಲಯ ಎಂದು ತಿಳಿದುಕೊಳ್ಳುವುದೇ ಜ್ಞಾನ. ಆ ಜ್ಞಾನ ಪಡೆದುಕೊಳ್ಳಲು ವಿನಯ, ಜಂಬವಿಲ್ಲದಿರುವುದು, ಅಹಿಂಸೆ, ಸಹನೆ, ಸರಳ ಸ್ವಭಾವ, ಶೌಚ, ಸ್ಥೈರ್ಯ, ಅತ್ಮನಿಗ್ರಹ, ತನ್ಮಯತೆ, ಸಮಮನಸ್ಕತೆ ಭಗವಂತನಲ್ಲಿ ನಿಷ್ಠೆ ಹೊಂದಿದವನು ನಿಜವಾದ ಜ್ಞಾನಿಯಾಗಲು ಸಾಧ್ಯ. ಶ್ರದ್ಧೆ ಜ್ಞಾನಕ್ಕೆ ಸಾಧನ. 'ಜ್ಞಾನ' ಎಂಬುವುದಕ್ಕೆ ವಿಶಾಲವಾದ ಅರ್ಥದಲ್ಲಿ 'ತಿಳುವಳಿಕೆ' ಎಂದರ್ಥ. ಸ್ಥೂಲವಾದ ಅರ್ಥದಲ್ಲಿ ಲೌಕಿಕ ಜ್ಞಾನ. ಪಾರಲೌಕಿಕ ಜ್ಞಾನ ಎಲ್ಲವು ಅದರಲ್ಲಿ ಸೇರುತ್ತದೆ. ಈ ಎಲ್ಲ ಜ್ಞಾನದ ಸಂಕಥನಗಳು ಮೊದಲು ರೂಪ ತಾಳಿದ್ದೇ ಹಸ್ತಪ್ರತಿಗಳಲ್ಲಿ ಎನ್ನುವುದು ವಿಶೇಷ. ಅಂಥ ಜ್ಞಾನದ ಪರಿಕರಗಳನ್ನು ಕಾಲದಿಂದಲೂ ವಿವಿಧ ಮಾದರಿಗಳಲ್ಲಿ ಸಂರಕ್ಷಿಸಿ ಸಂವರ್ಧನೆಗೊಳಿಸುತ್ತಾ ಬಂದ ಸಂಪ್ರದಾಯ ಕುತೂಹಲಕರವಾದದ್ದು.

**ಅಧ್ಯಯನದ ಉದ್ದೇಶ**

ಕನ್ನಡ ಸಂಸ್ಕೃತಿಯು ಗ್ರಂಥಸಂರಕ್ಷಣೆ ಹಾಗೂ ಸಂವರ್ಧನೆಯನ್ನು ಮಾಡಿಕೊಂಡು ಬಂದ ವಿವಿಧ ನೆಲೆಗಳನ್ನು ಪರಿಭಾವಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಸಂರಕ್ಷಣೆಯ ಬಗ್ಗೆ ನಡೆದ ಅಧ್ಯಯನಗಳು ಬರಹದ ನಂತರದ ನೆಲೆಗಳ ಕುರಿತು ಸಿಗುತ್ತವೆ. ಆದರೆ ಬರಹಪೂರ್ವದಲ್ಲಿ ಬರಹದ ಸಾಧನಗಳನ್ನು ತಯಾರಿಸಿಕೊಳ್ಳುವ ವಿಧಾನದಲ್ಲಿಯೇ ಬಹುಕಾಲಿಕ ಬಾಳಿಕೆ ಬರುವ ತಾಂತ್ರಿಕತೆಯನ್ನು ನಮ್ಮ ಸಮುದಾಯಗಳು ಒಳಗೊಂಡಿದ್ದವು. ಅಂಥ ನೆಲೆಗಳಶೋಧ ನನ್ನ ಅಧ್ಯಯನದ ಮುಖ್ಯ ಭಿತ್ತಿಯಾಗಿದೆ.

ಸಾಂಪ್ರದಾಯಿಕ ಗ್ರಂಥ ಸಂರಕ್ಷಣೆ ಅನ್ನುವುದು ಬರೀ ಬಟ್ಟೆಯಲ್ಲಿ ಕಟ್ಟಿಡುವ ಅಥವಾ ಕ್ರಿಮಿಕೀಟ ನಾಶಕಗಳನ್ನು ಇಡುವ ಮೂಲಕ ಭೌತಿಕ ಸಂರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸುವ ಆಶಯಗಳನ್ನು ಹೊಂದಿರಲಿಲ್ಲ. ಸಂರಕ್ಷಣೆ ಎನ್ನುವಂತದ್ದು ಪುನರುತ್ಪತ್ತಿ ಮತ್ತು ಪುನರ್‌ಬಳಕೆ ಹಾಗೂ ಮುಂದುವರಿಕೆಯ ಹಂಬಲವನ್ನು ಹೊಂದಿತ್ತು. ಅದು ಪಾಲನೆ ಮತ್ತು ಪೋಷಣೆಯಂತಹ ಜೈವಿಕ ಬೆಳವಣಿಗೆಯ ಕ್ರಮಗಳನ್ನು ಹೊಂದಿತ್ತು. ಇಂತಹ ಉದ್ದೇಶಗಳೇ ಕನ್ನಡದಲ್ಲಿ ಆಕ್ಷರಿಕ ಆಕರಗಳ ವಂಶಸಂಬಂಧಿ ಸಂರಕ್ಷಣೆಗೆ ಮೂಲತತ್ವವಾಗಿದ್ದವು. ಈ ರೀತಿಯ ಸಾಂಸ್ಕೃತಿಕ ವಿನ್ಯಾಸಗಳನ್ನು ಪುನರ್‌ರಚಿಸಿಕೊಳ್ಳುವುದು ನನ್ನ ಅಧ್ಯಯನದ ಮುಖ್ಯ ಪ್ರಮೇಯವಾಗಿವೆ.

ಆಧುನಿಕ ರಾಸಾಯನಿಕ ಹಾಗೂ ತಾಂತ್ರಿಕ ಸಂರಕ್ಷಣಾ ಕ್ರಮಗಳು ಶೀಘ್ರಗತಿಯ ನಿರೋಧ ಶಕ್ತಿಯನ್ನು ಹೊಂದಿದ್ದರೂ ಅವು ಹಸ್ತಪ್ರತಿಗಳ ಜೈವಿಕ ಸಂರಕ್ಷಣೆಯಂತಹ ಪರಿಣಾಮಕಾರಿ ಗುಣವನ್ನು ಹೊಂದಿಲ್ಲ. ಹೀಗಾಗಿ ಆಧುನಿಕ ಸಂದರ್ಭದಲ್ಲಿ ರೂಪುಗೊಂಡ ಸಂರಕ್ಷಣಾ ಕ್ರಮಗಳು ಹಸ್ತಪ್ರತಿಗಳ ಭೌತಿಕ ಸಂರಕ್ಷಣೆಗೆ ಹೆಚ್ಚು ಒತ್ತುಕೊಡುತ್ತವೆ. ಹಸ್ತಪ್ರತಿಗಳ ನೈಸರ್ಗಿಕ ಗುಣಧರ್ಮಗಳಿಗೆ ಇವು ಹೆಚ್ಚು ಪರಕೀಯ ಎನಿಸುತ್ತವೆ. ಇವು ಹಸ್ತಪ್ರತಿಗಳ ಬಾಳಿಕೆಯ ಗುಣಗಳನ್ನು ಕಡಿಮೆ ಮಾಡುತ್ತವೆ ಎಂಬ ಆರೋಪಗಳಿವೆ. ಭಾರತದುದ್ದಕ್ಕೂ ಇತ್ತೀಚೆಗೆ ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳನ್ನು ಬಳಸಿಕೊಳ್ಳುವುದು ಕಂಡುಬರುತ್ತದೆ. ಇದರಿಂದ ಹಸ್ತಪ್ರತಿಗಳ ಮೇಲೆ ಆಗುವ ಅಡ್ಡ ಪರಿಣಾಮಗಳನ್ನು ಬಹುಮಟ್ಟಿಗೆ ಕಡಿಮೆ ಮಾಡಬಹುದಾಗಿದೆ.

ಹೀಗಾಗಿ ಒಟ್ಟು ನನ್ನ ಅಧ್ಯಯನವು ಹಸ್ತಪ್ರತಿಗಳಂತಹ ಬರಹ ಸಾಮಗ್ರಿಗಳ ಒಂದು ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡುವ ಉದ್ದೇಶವನ್ನು ಹೊಂದಿದೆ. ಇದೊಂದು ವಿನೂತನ ಸಂಗತಿ ಎನ್ನುವುದು ನನ್ನ ನಮ್ರತೆಯಾಗಿದೆ.

ಬರಹಕ್ಕೆ ಸಂಬಂಧಿಸಿದ ಹೆಚ್ಚಿನ ಅನ್ವೇಷಣೆಗಳು ಪೌರಾತ್ಯ ರಾಷ್ಟ್ರಗಳಿಂದಲೇ ಬಂದವಾಗಿವೆ. ಉದಾ: ಮುದ್ರಣ ವಿಧಾನ, ಕಾಗದ ತಯಾರಿಕೆ, ಮೃದು ಚರ್ಮಕಾಗದ, ಮಸಿ ಮತ್ತು ಲೆಕ್ಕಣಿಕೆಗಳು, ಪುಸ್ತಕಕ್ಕೆ ರಟ್ಟು ಕಟ್ಟುವ ವಿಧಾನ, ಪುಸ್ತಕದಲ್ಲಿ ಚಿತ್ರಗಳನ್ನು ಕೊಡುವ ವಿವಿಧ ರೀತಿ ಇವೆಲ್ಲಾ ಮೈದಳೆದಿದ್ದು ಏಷ್ಯದಲ್ಲಿ ಇಲ್ಲವೆ ಉತ್ತರ ಆಫ್ರಿಕದ ರಾಷ್ಟ್ರಗಳಲ್ಲಿ. ಒಂದೊಂದು ಕಾಲಕ್ಕೆ ಒಂದೊಂದು ಕಡೆಯಲ್ಲಿ ನಿರ್ದಿಷ್ಟ ಬಗೆಯ ಬರಹದ ಸಾಮಗ್ರಿಯನ್ನು ಬಳಸಿದ್ದು ತಿಳಿದುಬರುತ್ತದೆ. ಮುಖ್ಯ ಕಾರಣವೆಂದರೆ ಯಾವೊಂದು ಪ್ರದೇಶದ ಮಿತಿಯಲ್ಲಿ ದೊರೆಯುವ ಬರಹ ಸಾಮಗ್ರಿಯ ಪ್ರಮಾಣ ಮತ್ತು ಅಂದಂದಿನ ತಾಂತ್ರಿಕ ಪರಿಜ್ಞಾನ. ಚೀನಾ ದೇಶಕ್ಕೆ ಬಿದಿರು ಅನುಕೂಲವಾಗಿ ಕಂಡರೆ ಭಾರತ ದೇಶಕ್ಕೆ ತಾಳೆಗರಿ, ಮೆಸಪೊಟೆಮಿಯದಲಿ ಜೇಡಿ ಮಣ್ಣಿನ ಇಟ್ಟಿಗೆಗಳು, ಈಜಿಪ್ಟ್ ದೇಶದಲ್ಲಿ 'ಪೆಪಿರಿಸ್' ಎಂಬ ಸಸ್ಯವನ್ನು ಬಳಸುತ್ತಿದ್ದರು. ಆದರೆ ಚರ್ಮ, ಲೋಹ ಮುಂತಾದ ಕಚ್ಚಾ ಸಾಮಗ್ರಿಗಳನ್ನು ಪರಿಷ್ಕರಿಸಿ, ಪರಿವರ್ತಿಸುವ ಘಟ್ಟಕ್ಕೆ ತಲುಪಿದ ಮೇಲೆಯೇ ಇವೆಲ್ಲವೂ ಬಳಕೆಗೆ ಬಂದವು.

ಚರ್ಮದಿಂದ ತಯಾರಿಸಿದ ಚರ್ಮಕಾಗದ ಬಳಕೆ ಇರಾನ್ ದೇಶವನ್ನು ದಾಟಿ ಪೂರ್ವ ದಿಕ್ಕಿಗೆ ಬಂದಿರಲಿಲ್ಲ. ಇಂತಹ 'ಅಶುದ್ಧ' ಸಾಮಗ್ರಿಯ ಮೇಲೆ ಪವಿತ್ರವಾದ ಗ್ರಂಥಗಳನ್ನು ದಾಖಲಿಸಿ ರಕ್ಷಿಸುವುದನ್ನು ಭಾರತೀಯರು ನಿರಾಕರಿಸಿದರು. ಅವರ ಮನೋಭಾವನೆಯಲ್ಲಿ ಪ್ರಾಣಿಗಳ ಚರ್ಮವು ಅಪವಿತ್ರವೆಂದು ನಂಬಲಾಗಿತ್ತು. ಆಧುನಿಕತೆಯ ಪ್ರಭಾವ ಅಥವಾ ಮನುಷ್ಯನ ತಾಂತ್ರಿಕ ಪ್ರತಿಭೆಯ ಫಲವಾಗಿ ಕಾಲಕಾಲಕ್ಕೆ ಸೂಕ್ತವಾದ ಸಾಮಗ್ರಿಗಳನ್ನು ಹುಟ್ಟುಹಾಕಿ ಆ ಮೂಲಕ ವೈವಿಧ್ಯಪೂರ್ಣವಾದ ಬರಹ ಸಾಮಗ್ರಿಗಳನ್ನು ಬಳಸುತ್ತ ಬಂದರು.

ನಮಗೆ ಇಲ್ಲಿಯವರೆಗೂ ತಾಳೆಗರಿ ಗ್ರಂಥಗಳು ಶೇಕಡಾ ೭೫%ರಷ್ಟು ಕಾಗದ ಪ್ರತಿಗಳು ಶೇಕಡಾ ೨೫%ರಷ್ಟು ಸಿಗುತ್ತವೆ. ತಾಳೆಮರದಲ್ಲಿ ತಾಳೆ, ಶ್ರೀತಾಳೆ ಎರಡು ಪ್ರಕಾರಗಳಿವೆ. ತಾಳೆ ಗಾತ್ರದಲ್ಲಿ ಚಿಕ್ಕದಾಗಿದ್ದು ಬಿರುಸಾಗಿರುತ್ತದೆ. ಶ್ರೀತಾಳೆ ಮೃದುವಾಗಿರುತ್ತದೆ. ಗಾತ್ರದಲ್ಲಿ ದೊಡ್ಡದಾಗಿರುತ್ತದೆ. ಮತ್ತು ಹೆಚ್ಚಿಗೆ ಬಳಕೆಗೆ ಬರುತ್ತದೆ. ಇದು ಕರಾವಳಿ ಕರ್ನಾಟಕ ಪ್ರದೇಶದಲ್ಲಿ ಹೆಚ್ಚು ಸಿಗುತ್ತದೆ. ತಾಳೆ-ಶ್ರೀತಾಳೆ, ಹರತಾಳ, ಕರತಾಲ, ತಾಲಾ ಎಂದು ಕವಿರಾಜಮಾರ್ಗದಿಂದ ಹಿಡಿದು ಇಲ್ಲಿಯವರೆಗೆ ಗುರುತಿಸಲಾಗಿದೆ. ಇವು ಹಸ್ತಪ್ರತಿಗಳಿಗೆ ಇರುವ ಪರ್ಯಾಯ ಪದಗಳಾಗಿವೆ. ತಾಳೆಗರಿಯ ಮೇಲೆ ಬರೆಯಲು ಕಂಠವನ್ನು ಬಳಸುತ್ತಿದ್ದರು. ಅರಗು, ಇದ್ದಿಲು, ರಾಗಿಮಸಿ, ಅಳಲೆಕಾಯಿ, ದೀಪದ ಕಾಡಿಗೆ ಹೀಗೆ ವಿವಿಧ ಬಗೆಯ ಮಸಿಯನ್ನು ಬರೆಯುವುದಕ್ಕಾಗಿ ಉಪಯೋಗಿಸುತ್ತಿದ್ದರು.

ಈಗ ಲಭ್ಯವಿರುವ ಹಸ್ತಪ್ರತಿ ಗ್ರಂಥದಲ್ಲಿ ಮೈಸೂರು ವಿಶ್ವವಿದ್ಯಾಲಯ ಹಾಗೂ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಗ್ರಂಥಭಂಡಾರದಲ್ಲಿರುವ 'ನಾಮಲಿಂಗಾನು ಶಾಸನ' ಟೀಕೆಯ ಹಸ್ತಪ್ರತಿಯೇ

ಪ್ರಾಚೀನವಾದುದು. ಅದೇ ಭಂಡಾರದಲ್ಲಿರುವ ರನ್ನನ ಗದಾಯುದ್ಧದ ಹಸ್ತಪ್ರತಿಯು ೧೩೪೨ರಲ್ಲಿ ಪ್ರತಿಗೊಂಡಿದ್ದು. ಇದು ಕಾವ್ಯ ಪ್ರತಿಗಳಲ್ಲಿ ಅತ್ಯಂತ ಹಳೆಯದಾಗಿದೆ.

ಕಾಗದದ ಬಳಕೆ ೧೪ನೇ ಶತಮಾನದ ಅಂತ್ಯ ಅಥವಾ ೧೫ನೇ ಶತಮಾನದ ಆದಿಯಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಅಭಿನವ ಮಂಗರಾಜ (೧೩೯೮) 'ಪತ್ತಳಿಕೆಯನಲು ಕಾಗದಮಕ್ಕುಂ' ಕಾಗದ ಬಳಕೆಯು ಭಾರತದಲ್ಲಿ ಮೊದಲೆ ಇತ್ತು ಎಂಬುವುದಕ್ಕೆ ದೇಶಿಯ ಕಾಗದ ಅಥವಾ ಕೋರಿಕಾಗದ ಸ್ಥಳೀಯವಾಗಿ ರಚನೆ ಮಾಡಿದ್ದು. ೬ ಅಡಿಯಿಂದ ೧೨ ಅಂಗುಲದವರೆಗೆ ಸಿಗುತ್ತದೆ. ಕೆಲವನ್ನು ಪಕ್ಕದಲ್ಲಿ ಹೊಲೆದು ಅವುಗಳನ್ನು ಪುಸ್ತಕ ರೂಪದಲ್ಲಿ ಬಳಸುತ್ತಿದ್ದರು. ಅವುಗಳನ್ನು ವಹಿ ಎಂದು ಕರೆಯುತ್ತಿದ್ದರು. ಅರಿವೆ ಆಸ್ಥಾನ ಕವಿಗಳಿಗೆ ಸನ್ಮಾನಕ್ಕೆ ಮಾತ್ರ ಬಳಸುತ್ತಿದ್ದರು. ಇವುಗಳ ಬಳಕೆ ಪ್ರಮಾಣ ಕಡಿಮೆ. ಕಡತದ ಮೇಲೆ ಬಳಪದಿಂದ ಬರೆಯುತ್ತಿದ್ದರು. ಇವು ಮಠಗಳಲ್ಲಿ ದಾಖಲೆ ಇಡುವ ತಾತ್ಕಾಲಿಕವಾಗಿ ಇರುವ ಸಾಧನ ಹಾಗೆ ವಿಶೇಷವಾಗಿ ರಾಜರ ಆಸ್ಥಾನದಲ್ಲಿರುತ್ತಿದ್ದವು. ಶಾಸನಗಳಿಂದ ಕಡಿತವೆರ್ಗಡೆ, ಕಡತಚಾವಡಿ, ಕಡತಗಳ ಮೇಲ್ವಿಚಾರಕ, ಕಡತ ಸಂಗ್ರಹದ ಸ್ಥಳದ ಬಗ್ಗೆ ತಿಳಿಯುತ್ತದೆ.

ಇವು ರಾಜ ನಿರೂಪದ ಹಾಗೂ ಅಧಿಕಾರ ಕೇಂದ್ರದ ಸಾಕ್ಷಿಗಳಾಗಿದ್ದವು. ಇವುಗಳ ಪೋಷಣೆಯೂ ಇದ್ದಂತೆ ಅನ್ಯಧರ್ಮ ಹಾಗೂ ಇನ್ನಿತರ ಕಾರಣಗಳಿಗಾಗಿ ವಿನಾಶಕ್ಕೂ ಒಳಗಾದದ್ದು ಇದೆ. ಇಂಥ ಹಸ್ತಪ್ರತಿಗಳಿಗೆ ಹಲವು ರೀತಿಯ ಆತಂಕಗಳು ಎದುರಾಗಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ.

ಗ್ರಂಥಗಳಿಗೆ ಒದಗುವ ಆಪತ್ತುಗಳನ್ನು

ಅ) ಮಾನವನಿಂದ ಒದಗುವ ಆಪತ್ತುಗಳು

ಆ) ನೈಸರ್ಗಿಕ ಆಪತ್ತುಗಳು

ಇ) ಕೀಟಗಳಿಂದ ಬರುವ ಆಪತ್ತುಗಳು ಎಂದು ಪಟ್ಟಿ ಮಾಡಬಹುದು.

ರಾಜರ ದಾಳಿಗಳು ಪ್ರಮುಖವಾಗಿ ರಾಜ್ಯ ವಿಸ್ತರಣಾ ಉದ್ದೇಶಗಳೇ ಆಗಿದ್ದರು, ಇಂಥ ದಾಳಿಗಳ ಸಮಯದಲ್ಲಿ ನಡೆಯುತ್ತಿದ್ದ ರಕ್ತಪಾತ, ಸುಲಿಗೆ, ಅಪಹರಣಾದಿಗಳಿಂದ ಮೊದಲು ಜೀವ ಉಳಿಸಿಕೊಳ್ಳಬೇಕೆಂಬ ಭಾವನೆಯಿಂದ ಮನೆ–ಮಾರು, ಮಠ–ಮಾನ್ಯ, ಅರಮನೆ, ದ್ರವ್ಯ ಜ್ಞಾನಾದಿ ಭಂಡಾರಗಳನ್ನು ತೊರೆದು ಸಿಕ್ಕ ದಾರಿ ಹಿಡಿದು ಹೋಗುತ್ತಿದ್ದರು. ಶಾತವಾಹನರಿಂದ ಹಿಡಿದು ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ ವಿಜಯನಗರಗಳಂತಹ ಪ್ರಮುಖ ರಾಜ್ಯಗಳು ಸಾಮಂತರು ಸಣ್ಣಪುಟ್ಟ ಮನೆತನಗಳು ಪತನಗೊಂಡಾಗ ಅಮೂಲ್ಯವಾದ ಎಷ್ಟೋ ಜ್ಞಾನ ಭಂಡಾರಗಳು ನಾಶವಾಗಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ. ಹಂಪೆಯ ಓಲೆ ಭಂಡಾರ ಇಂದಿಗೂ ಈ ಅರ್ಥದಲ್ಲಿ ಪ್ರಸಿದ್ಧ.

ಕರ್ನಾಟಕ ಧಾರ್ಮಿಕ ಚರಿತ್ರೆಯಲ್ಲಿಯೂ ಮತಪ್ರಾಬಲ್ಯ ಸಂದರ್ಭ, ಮತಮತಗಳ ಜಗಳಗಳು ಇವೆ. ಇಂಥ ಸಂದರ್ಭಗಳಲ್ಲಿ ಮತಾಂತರಗಳು ಜರುಗಿ ವಿಹಾರ, ಬಸದಿ, ಮಠ, ದೇವಾಲಯಗಳು ನೆಲಸಮಗೊಂಡು ಒಂದೊಂದು ಕಾಲಕ್ಕೆ ಒಂದೊಂದು ಮತದ ಗ್ರಂಥಗಳ ಭಂಡಾರಗಳಿಗೆ ಆಪತ್ತು

ಎದುರಾಗಿರಬಹುದು. ಮತಾಭಿಮಾನಿಗಳ ಪ್ರಾಣತೆತ್ತು ರಕ್ಷಿಸಲು ಪ್ರಯತ್ನಿಸಿರಬಹುದು. ಜೈನ, ಶೈವ, ವೀರಶೈವ, ವೈಷ್ಣವ ಮುಂತಾದ ಪ್ರಮುಖ ಧರ್ಮಗಳು ಆಯಾ ಮತಗಳ ಪ್ರಾಬಲ್ಯದ ಕಾಲದಲಿ ಆಯಾ ಮತದ ಗ್ರಂಥಗಳನ್ನು ಮಾತ್ರ ಹೆಚ್ಚು ಸುರಕ್ಷಿತವಾಗಿ ನೋಡಿಕೊಂಡು ಇನ್ನುಳಿದವುಗಳು ಅವಜ್ಞೆಗೊಳಗಾಗಿ ಅಳಿವಿನ ದಾರಿಹಿಡಿದಿರಬೇಕು. ಹೀಗಾಗಿ ಗ್ರಂಥ ಸಂರಕ್ಷಣೆಯ ಜೊತೆ ಜೊತೆಗೆ ಅವುಗಳ ಅಳಿವುಗಳಿಗೆ ರಾಜಕೀಯ ಮತ್ತು ಧಾರ್ಮಿಕ ಸಂಘರ್ಷಗಳಂಥ ಮಾನವ ನಿರ್ಮಿತ ಆಪತ್ತುಗಳು ಕಾರಣವಾಗಿದೆ.

ಜೀವಮಾನ ಪರ್ಯಂತ ತಮ್ಮಲ್ಲಿದ್ದ ಹಸ್ತಪ್ರತಿಗಳ ಗ್ರಂಥಗಳ ಉಪಯೋಗ ಪಡೆದು, ತಾವು ಸತ್ತ ಮೇಲೆ ಅವನ್ನು ಅಪವಿತ್ರಗೊಳಿಸಬಹುದು ಎಂಬ ಶಂಕೆಯಿಂದ ಪುಣ್ಯನದಿಗಳೆಂದು ಕರೆಯುವ ಗಂಗಾ, ಕಾವೇರಿ, ಕೃಷ್ಣ ಮುಂತಾದ ನದಿಗಳಲ್ಲಿ ತೇಲಿಬಿಡುತ್ತಿದ್ದರು. ಪಂಡಿತರು, ಪುರೋಹಿತರು, ಜೋಯಿಸ ಮನೆತನದವರು ಮುಂದಿನ ಪೀಳಿಗೆಯವರು, ಇಂದಿನ ಅರ್ಥದಲ್ಲಿ ವಿದ್ಯಾವಂತರಾದಾಗಲೂ ದೊಡ್ಡ ದೊಡ್ಡ ಹುದ್ದೆಗಳನ್ನು ಹಿಡಿದು ತಮ್ಮ ಪೂರ್ವಿಕರು ಗಳಿಸಿದ ಅಮೂಲ್ಯ ಗ್ರಂಥಸಂಪತ್ತನ್ನು ಹಳೆಯ ಸರಕಿನ ಕೋಣೆಯಲ್ಲಿ ಎಸೆದು ಕ್ರಿಮಿಕೀಟಗಳಿಗೆ ಆಹಾರವಾದ ಪುಡಿಯನ್ನು ತಿಪ್ಪೆಗೋ ಹೊಳೆಗೋ ಎಸೆಯುತ್ತಾರೆ. ಮಳೆಗಾಲದಲ್ಲಿ ಒಲೆ ಉರಿಯದಿದ್ದಾಗ ಓಲೆಯ ಗರಿಗಳನ್ನೋ ಕಾಗದದ ಪ್ರತಿಗಳನ್ನೋ ಒಲೆ ಹಚ್ಚಲು ಬಳಸುತ್ತಿದ್ದರು. ಅವರ ಅಜ್ಞಾನ ಅಂಧಶ್ರದ್ಧೆಯೂ ಅಮೂಲ್ಯವಾದ ಗ್ರಂಥ ಸಂಪತ್ತನ್ನು ನಾಶಮಾಡಿತು.

ನೈಸರ್ಗಿಕ ಆಪತ್ತುಗಳಲ್ಲಿ ೧. ಧೂಳು ಸೇರಿಕೊಳ್ಳುವುದು, ೨. ಸೂರ್ಯನ ಕಿರಣ ನೇರವಾಗಿ ಬೀಳುವುದು, ೩. ಅತಿಯಾದ ಉಷ್ಣತೆ, ೪. ಅತಿಯಾದ ತೇವಾಂಶ

ಕೀಟಗಳಿಂದ ಬರುವ ಆಪತ್ತುಗಳಲ್ಲಿ ಇಲಿ, ಜಿರಲೆ, ನುಸಿ, ಗೆದ್ದಿಲು, ಬೆಳ್ಳಿಮೀನು ಇಂತಹ ಕ್ರಿಮಿಕೀಟಗಳು ಗ್ರಂಥಗಳ ನಾಶಕ್ಕೆ ಕಾರಣವಾಗಿದ್ದವು. ಇಂಥ ಪ್ರಾಚೀನ ಸಂರಕ್ಷಣಾ ವಿಧಾನಗಳ ಅನನ್ಯತೆಯನ್ನು ಕುರಿತು ವಿವೇಚಿಸುವುದು ನನ್ನ ಪ್ರಮುಖ ಉದ್ದೇಶವಾಗಿದೆ.

## ವ್ಯಾಪ್ತಿ

ಗ್ರಂಥಗಳನ್ನು ಸಂರಕ್ಷಿಡಲು ಪ್ರಾಚೀನ ಕಾಲದಿಂದಲೂ ಹಲವಾರು ಸ್ಥಳೀಯ ಪರಿಕರಗಳನ್ನು ಉಪಯೋಗಿಸಲಾಗುತ್ತಿತ್ತು. ಅವರು ಹಸ್ತಪ್ರತಿ ಕೆಡುವ ನಾಲ್ಕು ಪ್ರಮುಖ ಕಾರಣಗಳನ್ನು ತಿಳಿದಿದ್ದರು. ಧೂಳು, ಸೂರ್ಯನ ಕಿರಣ, ಅತಿಯಾದ ಉಷ್ಣತೆ ಹಾಗೂ ತೇವಾಂಶ ಈ ಸಮಸ್ಯೆಯಿಂದ ಹೊರಬರಲು ಅವರು ಹಸ್ತಪ್ರತಿಗಳನ್ನು ಸಾಮಾನ್ಯವಾಗಿ ಕೆಂಪು ಬಣ್ಣದ ಬಟ್ಟೆಯಿಂದ ಅಥವಾ ಹತ್ತಿ ಬಟ್ಟೆಯಿಂದ ಸುತ್ತಿಡುತ್ತಿದ್ದರು. ಅವು ಧೂಳು, ಬೆಳಕು, ಉಷ್ಣತೆ ಮತ್ತು ತೇವವನ್ನು ತಡೆಗಟ್ಟುತ್ತಿದ್ದವು. ಕೆಂಪು ಬಣ್ಣದ ಬಟ್ಟೆಯ ಬಣ್ಣವೇ ಕ್ರಿಮಿಕೀಟಗಳನ್ನು ಎದುರಿಸುವಷ್ಟು ಸಾಮರ್ಥ್ಯ ಹೊಂದಿದ್ದರಿಂದಾಗಿ ಅವರು ಅದನ್ನೇ ಉಪಯೋಗಿಸುತ್ತಿದ್ದರು. ಭಾರತದ ಗ್ರಂಥಾಲಯಗಳಲ್ಲಿ ಹಳೆಯ ಗ್ರಂಥಗಳು ಕೆಂಪು ಬಣ್ಣದ ಬಟ್ಟೆಯಿಂದ ಸುತ್ತಿಡುತ್ತಿದ್ದರು.

ಹುಳುಗಳ ಪ್ರವೇಶವನ್ನು ತಡೆಗಟ್ಟಲು ಅರಿಷಿಣದ ಪುಡಿಯನ್ನು ಅಥವಾ ನೀರನ್ನು ಗರಿಗಳಿಗೆ ಲೇಪಿಸಲಾಗುತ್ತಿತ್ತು. ಕ್ರಿಮಿಕೀಟಗಳನ್ನು ದೂರ ಇಡಲು ಬಳಸಲಾಗುವ ಕೆಲವೊಂದು ಸ್ಥಳೀಯ ಗಿಡಮೂಲಿಕೆ ಸಾಮಗ್ರಿಗಳು. ಕ್ರಿಮಿಕೀಟಗಳಿಂದ ಸಂರಕ್ಷಿಸಲು ತಂಬಾಕು, ಕರ್ಪೂರ, ಕರಿಜೀರಿಗೆ, ಸಿಹಿಜಂಬು, ಹಾವಿನಪೊರೆ ಮತ್ತು ನವಿಲುಗರಿಗಳನು ಉಪಯೋಗಿಸಲಾಗುತ್ತಿತ್ತು. ಇವತ್ತಿಗೂ ಈ ಸ್ಥಳೀಯ ಸಾಮಗ್ರಿಗಳನ್ನು ಭಾರತದ ಕೆಲವು ಗ್ರಂಥಾಲಯ ಮತ್ತು ವಸ್ತುಸಂಗ್ರಹಾಲಯಗಳಲ್ಲಿ ವೈಯಕ್ತಿಕ ಸಂಗ್ರಹಗಳಲ್ಲಿ ಉಪಯೋಗಿಸುತ್ತಿದ್ದಾರೆ. ಉದಾ: ತಂಜಾವೂರಿನಲ್ಲಿರುವ ತಂಜಾವೂರು ಮಹಾರಾಜ ಸರ್ಪೋಜಿಯ ಸರಸ್ವತಿ ಮಹಲ್ ಗ್ರಂಥಾಲಯ.

ನೀರಿನಿಂದ, ತೈಲದಿಂದ, ಸಡಿಲ ಕಟ್ಟಿನಿಂದ ಮೂರ್ಖರ ಕೈಯಲ್ಲಿ ಕೊಡದಂತೆ ಗ್ರಂಥವನ್ನು ರಕ್ಷಿಸುವುದು ಮುಖ್ಯವಾಗಿತ್ತು. ಅಲ್ಲದೇ ಅವುಗಳನ್ನು ಪುತ್ರರ ರೀತಿಯಲ್ಲಿ ಸಂಪತ್ತಿನ ರೀತಿಯಲ್ಲಿ ಸಂರಕ್ಷಿಸಬೇಕೆಂದು ಸಂಪ್ರದಾಯವಿತ್ತು.

"ವಸ್ತ್ರಯುಗ್ಮೇನ ಸಂವೀತಂ ಪುಸ್ತಕಂ ಪ್ರತಿಪಾದಾಯೇತ್" ಎಂದು ಭವಿಷ್ಯ ಪುರಾಣದಲ್ಲಿ ಹೇಳಲಾಗಿದೆ. ಅರಸರ 'ಸಪ್ತ ಸಂತಾನದ ಕರ್ತವ್ಯಗಳಲ್ಲಿ ಗ್ರಂಥ ಸಂರಕ್ಷಣ ಒಂದಾಗಿತ್ತು. ಶಾಸ್ತ್ರದಾನ, ಗ್ರಂಥಪ್ರತಿಷ್ಠೆ ಪುಣ್ಯ ಪ್ರತಿಕವೆಂದೇ ಭಾವಿಸಲಗಿತ್ತು. ಧರ್ಮ ಪೀಠಾರೋಹಣ ಪರಸಂಗದ ಜ್ಞಾನದುಡುಗೊರೆಗಳೆಂದೋ ಬದುಕಿನ ಸ್ವಸುಖದ- ಪರಮಸುಖದ ಕಾಮಧೇನುಗಳೆಂದೋ ಭಾವಿಸಿ ಅವುಗಳನ್ನು ಪುಜ್ಯಭಾವನೆಯಿಂದ ಸಂರಕ್ಷಿಸಿಕೊಂಡು ಬರುತ್ತಿದ್ದಾರೆ. ಉದಾ: ಮಠಮಾನ್ಯಗಳು, ವಿಶ್ವವಿದ್ಯಾಲಯಗಳು, ಸಂಘ-ಸಂಸ್ಥೆಗಳು, ಆಸಕ್ತ ವಿದ್ವಾಂಸರು ಅಲ್ಲದೇ ಕೆಲವು ಮನೆಗಳಲ್ಲಿ ಇಂಥ ಗ್ರಂಥಗಳನ್ನು ಕಾಣಬಹುದು.

ಎಚ್. ದೇವಿರಪ್ಪನವರು- 'ಬೇವಿನ ಎಲೆ, ಹೊಂಗೆ ಎಲೆ, ಶ್ರೀಗಂಧದ ಹುಡಿ, ಕರ್ಪೂರದ ಹಳಕುಗಳನ್ನು ಅರಿಷಿಣದ ಪುಡಿ, ಗೋದವಚ(ಉಗ್ರಗಂಧ) ಮುಂತಾದವುಗಳನ್ನು ಅನುಕೂಲಕ್ಕೆ ತಕ್ಕಂತೆ ಸದುವು ನೋಡಿ ಹಸ್ತಪ್ರತಿ ಗ್ರಂಥಗಳ ಒಳಗೋ ಅಥವಾ ಪಕ್ಕದಲ್ಲಿ ಇಟ್ಟು ಕಟ್ಟುತ್ತಿದ್ದರು. ಆ ಕಟ್ಟುಗಳನು ಹುಳುಗಳು ಮುಟ್ಟಲಾಗದ ಕೆಂಪು ಬಣ್ಣದ ಇಲ್ಲವೆ ಹಳದಿ ಬಣ್ಣದ ಬಟ್ಟೆಗಳಲ್ಲಿ ಸುತ್ತಿ ಮತ್ತೆ ಮೇಲೆ ದಾರವನ್ನು ಬಿಗಿಯಾಗಿ ಕಟ್ಟುತ್ತಿದ್ದರೆಂದು ಹೇಳುತ್ತಾರೆ. ಇದು ಸಾಂಪ್ರದಾಯಿಕ ಗ್ರಂಥ ಸಂಪಾದನೆಯ ಒಂದು ಕ್ರಮವಾಗಿದೆ. ಕ್ರಿಮಿಕೀಟಗಳು ಪ್ರವೇಶಿಸಿದ ಹಾಗೆ ಸಂದುಬಿಡದ, ಮುಚ್ಚಳವಿರುವ ಮರದ ಪೆಠಾರಿಗಳಲ್ಲಿ ಗ್ರಂಥಗಳನ್ನು ಓರಣವಾಗಿ ಇಟ್ಟು, ಪ್ರತಿಯೊಂದು ಗ್ರಂಥ ಕಟ್ಟನ್ನು ಕೆಂಪು ಇಲ್ಲವೆ ಹಳದಿ ಬಣ್ಣದ ರೇಷ್ಮೆ ವಸ್ತ್ರಗಳಿಂದ ಸುತ್ತಿಡುತ್ತಿದ್ದರು. ಈ ಬಣ್ಣದ ಬಟ್ಟೆಗಳು ನುಸಿ, ಹುಳುಗಳಿಂದ ಗ್ರಂಥಗಳನ್ನು ರಕ್ಷಿಸುತ್ತವೆ ಎಂಬ ಮನೋಭಾವನೆ ಬಟ್ಟೆಗಳ ಒಳಗಡೆ ಗ್ರಂಥದ ಸುತ್ತಲು ಬೇವಿನ ಮರದ ಎಲೆಗಳ ಪುಡಿಯನ್ನು ಒಣಗಿದ ಹೊಂಗೆಯ ಎಲೆಗಳ ಪುಡಿಯನ್ನು ಹಾಕುತ್ತಿದ್ದರು ಎಂದು ಎಂ.ವಿ.ಸೀ ಅವರ ಅಭಿಪ್ರಾಯವಾಗಿದೆ.

ದಕ್ಷಿಣ ಕನ್ನಡದಲ್ಲಿ ತಾಡವೋಲೆ ಗ್ರಂಥಗಳನ್ನು ಸಂರಕ್ಷಿಸುವ ವಿಧಾನವನ್ನು ಎಸ್. ಅನಂತರಂಗಾಚಾರ್ ಅವರು ಹೀಗೆ ಹೇಳತ್ತಾರೆ. "ಕಲ್ಲಿನ ಕಪಾಟುಗಳಲ್ಲಿ ಒಂದು ಪದರ ಮೇಣಸು ಮತ್ತೊಂದು ಪದರ ಓಲೆಯ ಪುಸ್ತಕಗಳನ್ನು ಜೋಡಿಸಿ ಪುನಃ ಮೇಣಸಿನ ಕಾಳಿನಿಂದ ಅಚ್ಛಾದಿಸಿ ಅವುಗಳ ಮೇಲೆ ಹಲಗೆಗಳನ್ನು ಹೊದಿಸಿ ಅವುಗಳನ್ನು ಹುಳು-ಹಂಬಲು ಶೈತ್ಯಗಳಿಂದ ರಕ್ಷಿಸುವ ಕ್ರಮ" ವಿತ್ತೆಂದು ಹೇಳುತ್ತಾರೆ.

ಗೆದ್ದಲು ಮುಂತಾದ ಕೀಟಾದಿಗಳಿಂದ ಹಸ್ತಪ್ರತಿಗಳನ್ನು ರಕ್ಷಿಸಿಕೊಳ್ಳುವ ಪ್ರಯತ್ನಗಳು ಪುರಾತನ ಕಾಲದಿಂದಲೂ ನಡೆದಿವೆ. ಮೆಸಿಡೋಣಿಯದ ಆಂಟಿ ಫೇನ್ಸ್ ಅಸೋಸಿಯೇಸ್ ಮುಂತಾದವರು ಕೀಟಾದಿಗಳಿಂದ ಒದಗುವ ಅಪಾಯದ ಬಗ್ಗೆ ಆತಂಕ ವ್ಯಕ್ತಪಡಿಸಿದರೆ, ಅರಿಸ್ಟಾಟಲ್ ಮುಂತಾದವರು ಇಂತಹ ಕೆಲವು ಕೀಟಾದಿಗಳನ್ನು ಕಂಡಿದ್ದಾಗಿ ಹೇಳುತ್ತಾರೆ. ೧೮-೧೯ನೇ ಶತಮಾನದಿಂದ ಈ ಕುರಿತು ಅಧ್ಯಯನಗಳು ಪ್ರಯೋಗಗಳು ಬೇರೆ ಬೇರೆ ದೇಶಗಳು ಸಂಸ್ಥೆಗಳು ನಡೆಸಿದ್ದು ಕಟ್ಟಡಗಳ ಅಡಿಪಾಯದಲ್ಲಿ ವಿಷಪದಾರ್ಥಯುಕ್ತ ರಾಸಾಯನಿಕಗಳನ್ನು ಬಳಸುತ್ತ ಬಂದಿರುವುದು ಕಂಡುಬರುತ್ತದೆ. ಮುದ್ರಣ ಯಂತ್ರಗಳ ಮುಂಚೆ ತಾಳೆಗರಿ/ ಕಾಗದ, ಚರ್ಮ, ಕೋರಿಕಾಗದ, ಭೂರ್ಜ್ವಪತ್ರ, ಕಡತಗಳು ಲೇಖನ ಸಾಮಗ್ರಿಗಳಾಗಿದ್ದವು. ತಾಳೆಗರಿ/ ಕಾಗದ ಹಸ್ತಪ್ರತಿ ಕಟ್ಟುಗಳನ್ನು ರಕ್ಷಿಸಿಕೊಳ್ಳಲು ಕಂಡುಕೊಂಡ ಭಿನ್ನ ಭಿನ್ನವಿಧಾನಗಳು. ಇಲಿ, ಜಿರಲೆ, ಬೆಳ್ಳಿಮೀನು, ಗೆದ್ದಿಲು, ನುಸಿ ಹತ್ತುವ ಹಾವಳಿಯಿಂದ ಗ್ರಂಥಗಳನ್ನು ರಕ್ಷಿಸುತ್ತಿದ್ದರು. ಇಷ್ಟೆಲ್ಲ ರಕ್ಷಣೆಯ ನಡುವೆ ದಿನಗಳಿದಂತೆ ಓಲೆಗರಿಗಳು, ಕಾಗದಗಳು ತಮ್ಮ ಸತ್ವವನ್ನು ಕಳೆದುಕೊಳ್ಳುವುದು ಸ್ವಾಭಾವಿಕವಾಗಿದೆ.

ಡಾ.ಜಿ. ವರದರಾಜರಾವ್ ಅವರು ಗುರುತಿಸುವಂತೆ "ಓಲೆಗರಿಗಳು ಹಾಳಾಗದಂತೆ ವಿಶಿಷ್ಟತೆರನಾದ ಎಣ್ಣೆಯನ್ನು ತಯಾರಿಸಿ ಬಳಸುತ್ತಿದ್ದರು. ರಕ್ಷಣೆಯ ಕ್ರಮಗಳನ್ನು ಕೈಗೊಳ್ಳುತ್ತಿದ್ದಿದ್ದು ನವರಾತ್ರಿ, ಯುಗಾದಿ ಮತ್ತು ದೀಪಾವಳಿಗಳಲ್ಲಿ ಹಸ್ತಪ್ರತಿಗಳ ಸಂಗ್ರಹವಿದ್ದ ಎಲ್ಲರೂ 'ಸರಸ್ವತಿ ಪೂಜೆ' ಎಂಬ ನೆಪದಲ್ಲಿ ಇದನ್ನೊಂದು ಧಾರ್ಮಿಕ ವಿಧಿಯನ್ನಾಗಿ ಪರಿಪಾಲಿಸಿಕೊಂಡು ಬಂದಿದ್ದಾರೆ. ಗ್ರಂಥ ಸಂರಕ್ಷಣೆಗೆ ನೈಸರ್ಗಿಕವಾಗಿ ಸಿಗುವ ವಸ್ತುಗಳಾದ ಬೇವು, ಹೊಂಗೆ, ಹಾವಿನ ಪೊರೆ, ಕರ್ಪೂರ, ಶ್ರೀಗಂಧ, ಮೆಣಸು, ಅರಿಷಿಣ, ಕೆಂಪು ಹಳದಿ ರೇಷ್ಮೆ ಬಟ್ಟೆಯನ್ನು ಬಳಸಿದರೆ ಕಾಗದ ಪ್ರತಿಯ ಗ್ರಂಥಗಳನ್ನು ದೇವದಾರು ಎಣ್ಣೆ, ಹರಿದಳು, ಹುಣಸೆ ಬೀಜದ ಮಿಶ್ರಣದ ತೆಳುವಾದ ಲೇಪನ ಪಟಕದ ಸಂಸ್ಕಾರ ಕಾಗದದ ಗ್ರಂಥಗಳಿಗೆ" ಬಳಸುತ್ತಿದ್ದರೆಂದು ಹೇಳುತ್ತಾರೆ.

ಬಿ. ಭಟ್ಟಚಾರ್ಯ ಅವರು ತಾಳೆ ಓಲೆಗಳನ್ನು ಬರಹಕ್ಕೆ ಹದಗೊಳಿಸುವ ಕ್ರಮವನ್ನು ಕುರಿತು ಈ ಕೆಳಗಿನಂತೆ ಹೇಳಿದ್ದಾರೆ. ತಾಳೆ ಗಿಡದಿಂದ ಕತ್ತರಿಸಿ ತಂದ ಎಲೆಗಳನ್ನು ೭ ದಿನಗಳವರೆಗೆ ಒಣಗಿಸಿ, ನಂತರ ೩ ತಿಂಗಳವರೆಗಾದರೂ ನೆಲದಲ್ಲಿ ಹೂಳಿಡಬೇಕು. ನಂತರ ಅಡುಗೆ ಮನೆ ಅಟ್ಟದಲ್ಲಿಟ್ಟು ಹೊಗೆಯಿಂದ ಹದಗೊಳ್ಳುವಂತೆ ಮಾಡಿ ಉಪಯೋಗಿಸಬೇಕು ಎನ್ನುತ್ತಾರೆ. ಹೂಳುವ ಹೊಗೆಗೆ ಒಡ್ಡುವ ಸಂಗತಿಗಳು ಹಸ್ತಪ್ರತಿ ರಕ್ಷಣೆಯ ಆಧುನಿಕ ವಿಧಾನಗಳಾದ ಹವಾನಿಯಂತ್ರಣ ಹಾಗೂ ಧೂಮ್ರಿಕರಣಗಳನ್ನು ಹೋಲುತ್ತದೆ.

ಈಗ ನಾವು ಬರೆಯಲಾದ ಮತ್ತು ಅಚ್ಚಾದ ಗ್ರಂಥಗಳನ್ನು ರಕ್ಷಿಸಿಕೊಳ್ಳಲು ವಹಿಸುತ್ತಿರುವ ಕಾಳಜಿಯನ್ನು ನಮ್ಮ ಹಿರಿಯರು ಮುಂಜಾಗ್ರತೆಯಾಗಿ (Preventive) ಬಳಸುತ್ತಿದ್ದರು. ತಾಳೆಗರಿ/ ಕಾಗದ ಮೊದಲಾದ ಬರವಣಿಗೆಗೆ ಬಳಸುವ ಪ್ರತಿಗಳ ಜೊತೆಗೆ ಆ ಗ್ರಂಥವನ್ನು ಸಂರಕ್ಷಿಸುವ, ಸಂಕಲಿಸುವ ಹಾಗೂ ಮೂಲ ಕೃತಿಗೆ ದಕ್ಕೆಯಾಗದ ರೀತಿಯಲ್ಲಿ ಪರಿಷ್ಕರಿಸಿ ಪ್ರಕಟಿಸುವ ಕೆಲಸವು ಒಂದು ರೀತಿ ಸಂರಕ್ಷಣೆಯೇ.

"ಅಗ್ನಿ ಮೂಶಿಕ ಚೋರೇಭ್ಯೋಶಿವೋ ರಕ್ಷಂತು ಪುಸ್ತಕಂ"॥

"ತ್ರೈಲಾದ್ರಕ್ಷೇಜ್ಜದ್ರಕ್ಷೇಚ್ಛಿಥಿಲ ಬಂಧನಾತ್

ಮೂರ್ಖಹಸ್ತೇನ್ ದಾತವ್ಯಮೇವಂ ವದತಿ ಪುಸ್ತಕಂ"॥

ಅಗ್ನಿ, ಮೂಶಿಕ, ತೈಲ, ಜಲ, ಚೋರ, ಶಿಥಿಲ ಬಂಧನ, ಮೂರ್ಕಹಸ್ತ, ಅಶಿವ-ಇವುಗಳಿಂದ ಹಸ್ತಪ್ರತಿಯ ಗ್ರಂಥವನ್ನು ರಕ್ಷಂತು ರಕ್ಷೇತ್ನ ದಾತವ್ಯಂ ಎಂದು ಹೇಳಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದ ಗ್ರಂಥದಲ್ಲಿ

ಗೃಹೆಯಸ್ಯೆದಮಾಖ್ಯಾನ ಪುಸ್ತಕಂ ತಿಷ್ಟತಿ ಧೃವಂ।

ತಸ್ಮೈಶ್ವರ್ಯ ಸಮೃದ್ಧಿಸ್ಯಾನ್ನಾಗಿ ಚೋರಭಯಂ ಭವೇತ್॥

ಯಾವ ಗೃಹದಲ್ಲಿ ಆಖ್ಯಾನ ಗ್ರಂಥವಿದೆಯೋ ಅಲ್ಲಿ ಐಶ್ವರ್ಯ-ಸಮೃದ್ಧಿಗಳು ನೆಲೆಸಿರುತ್ತವೆ. ಆದರೆ ಅಗ್ನಿ, ಚೋರ ಭಯವೂ ನಿಶ್ಚಿತ ಎಂದು ಹೇಳಲಾಗಿದೆ. ಕೈಗಾರಿಕೋದ್ಯಮದ ಪ್ರಪಂಚದಲ್ಲಿ ಗಂಧಕಾಮ್ಲ ನೈಟ್ರೋಜನ್ ಡೈಆಕ್ಸೈಡ್ ಮತ್ತು ಓಜೋನ್ ಎಂಬ ಮುಖ್ಯ ಮೂರು ಅನಿಲರೂಪದ ಮಾಲಿನ್ಯಗಳಿಂದ ಗ್ರಂಥಗಳನ್ನು ಸಂರಕ್ಷಿಸಲಾಗುತ್ತಿದೆ.

ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿಯನ್ನು ಲಿಪಿಕಾರ ಲಿಪಿ ಮಾಡುವ ಸಮಯದಲ್ಲಿ ಈ ಕೆಳಗಿನಂತೆ ಹೇಳಿದ್ದಾನೆ. ಶ್ರೀ ಗಣಾಧಿಪತಿಯೇ ನಮಃ॥ ಶ್ರೀ ಶಾರದಾಂಬಾಯನಮಃ॥ ಶುಭಮಸ್ತು॥ ಶ್ರೀ ಲಕ್ಷ್ಮೀ ವೆಂಕಟಾಚಲಾಸ್ವಾಮಿ ದಿವ್ಯ ಚರಣಾರವಿಂದಲೇ ಗತಿಃ॥ ಶ್ರೀ ಗಂಗಾಧರ ನಮಃ॥ ಶ್ರೀ ಪ್ರಮಾತಿನಾಮ ಸಂವತ್ಸರದ ಮಾಘ ಬ ೨ರಲ್ಲು ಶಿವಗಂಗೆ ರಾಮಯ್ಯನವರ ಪುತ್ರ ಹರಿದಾಸನು ನರಸಿಂಗಪ್ಪನವರಿಗೆ ಬರೆದುಕೊಟ್ಟ ಕರ್ನಾಟಕ ಭಾರತ ಕಥಾವಸ್ತುಕ್ಕೆ ಶುಭಮಸ್ತು॥

ಸರ್ವಾಚಾರ ಸಂಪನ್ನ ಏಕಲಿಂಗಾನಿಷ್ಟಾಪರ ವೀರಶೈವ ಸಂಪನ್ನ ಗುಮಳಾಪುರದ ಸಿಂಹಾಸನಕ್ಕೆ ಕರ್ತೃರಾದ ವಿರಕ್ತ ಸಿದ್ಧಲಿಂಗದೇವರಿಗೆ ಹದಿನಾಡ ಯಳಂದೂರ ಅರಸು ಚೆನ್ನೊಡೆಯರು ಈ ಶೂನ್ಯ ಸಂಪಾದನೆಯ ವಚನ ಸಂಗ್ರಹವನ್ನು ಬರೆಸಿದರು ಎಂದು ಹೇಳಲಾಗಿದೆ. ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯಲ್ಲಿ ಪ್ರಚಲಿತವಿರುವ ಇಂಥ ಸಂಗೋಪನ ಹಾಗೂ ಸಂವರ್ಧನ ಕ್ರಮಗಳನ್ನು ಹಸ್ತಪ್ರತಿಗಳ ಮುಖೇನ ಚರ್ಚಿಸುವುದು ನನ್ನ ಅಧ್ಯಯನದ ವ್ಯಾಪ್ತಿಯಾಗಿದೆ.

## ಅಧ್ಯಯನದ ಕ್ರಮ

ಜೈವಿಕ ಸಂರಕ್ಷಣೆಯಲ್ಲಿ ನೈಸರ್ಗಿಕ ಪದಾರ್ಥಗಳನ್ನು ಬಳಸಿ ಗ್ರಂಥಗಳನ್ನು ಸಂರಕ್ಷಿಸಲಾಗುತ್ತದೆ. ರಾಸಾಯನಿಕ ಬಳಕೆಯಲ್ಲದೇ ಬೆಳಕಿನ ಪ್ರಮಾಣ ತೇವಾಂಶ ಪ್ರಮಾಣವನ್ನು ವೈಜ್ಞಾನಿಕವಾಗಿ ಪ್ರಯೋಗಾಲಯದ ಮೂಲಕ ತಂತ್ರಜ್ಞಾನ ಬಳಸಿ ಮಾಡಲಾಗುತ್ತದೆ. ಗ್ರಂಥಗಳಿಗೆ ಬೆಳಕಿನ ಪ್ರಮಾಣವನ್ನು ನೀಡಲು ಕೃತಕವಾಗಿ ಬಲ್ಬಗಳನ್ನು ಬಳಸಲಾಗುತ್ತದೆ. ತೇವಾಂಶ ಪ್ರಮಾಣವನ್ನು ನಿಯಂತ್ರಿಸಲು ತಂತ್ರಜ್ಞಾನ ಬಳಕೆ ಅವಶ್ಯಕವಾಗಿದೆ. ಗಾಳಿಯಲ್ಲಿರುವ ತೇವಾಂಶವು ಸಜೀವ ಮತ್ತು ನಿರ್ಜೀವ ವಸ್ತುಗಳಿಗೆ ಅವಶ್ಯ. ಗಾಳಿಯಲ್ಲಿರುವ ನೀರಿನ ಅಂಶಗಳು ತೇವಾಂಶಕ್ಕೆ ಸಂಬಂಧಿಸಿದ್ದಾಗಿದೆ. ಮೂಲಭೂತ ವಸ್ತುಗಳಿಗೆ, ಮೂಲಭೂತ ವಸ್ತುಗಳನ್ನಾಗಿ ಬಳಸಿ ತಯಾರಿಸಲಾದ ಎಲ್ಲಾ ವಸ್ತುಗಳನ್ನು ಅವುಗಳ ಮೂಲ ಆಕರ ಮತ್ತು ಗಾತ್ರದಲ್ಲಿ ಸುಸ್ಥಿತಿಯಲ್ಲಿ ಇರಿಸಿ ಕಾಪಾಡಲು ತೇವಾಂಶ ನಿಯಂತ್ರಣದಲ್ಲಿ ಇರಬೇಕು.

ವಸ್ತುಸಂಗ್ರಹಾಲಯದಲ್ಲಿ ಥರ್ಮೋ-ಹೈಗ್ರೋಮೀಟರ್‌ಗಳನ್ನು(Thermo Hygro Meter) ಸಾಮಾನ್ಯವಾಗಿ ಕಾಣಬಹುದು. ತೇವ ಮತ್ತು ಒಣ ಬಲ್ಬಗಳು ಹೈಗ್ರೋಮೀಟರ್ ಇದು ಅತ್ಯಂತ ಸರಳ ಮತ್ತು ಕಡಿಮೆ ಬೆಲೆಯ ಸಾಧನವಾಗಿದ್ದು, ಅವುಗಳನ್ನು ತೂಗು ಅಥವಾ ತಿರುವಣೆ ಹೈಗ್ರೋಮೀಟರ್ ಎಂತಲೂ ಕೆಲವೊಮ್ಮೆ ತೂಗು(Swing) ಸೈಕ್ರೋಮೀಟರ್(Psychrometer) ಎಂದು ಕರೆಯಲಾಗುತ್ತದೆ. ತೂಗು ಹೈಗ್ರೋಮೀಟರ್‌ಗಳನ್ನು ಬಳಸುವಾಗ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕು.

೧. ಬತ್ತಿಗೆ(Wick) ಯಾವಾಗಲೂ ಡಿಸ್ಟಿಲ್ಡ್ ನೀರನ್ನೇ ಬಳಸಬೇಕು. ನೀರನ್ನು ಶುದ್ಧವಾಗಿರಿಸಿ, ನಿಯಮಿತವಾಗಿ ಬದಲಾಯಿಸುತ್ತಿರಬೇಕು.

೨. ಮಾಪಕವನ್ನು ತೂಗುವವರ ದೇಹದಿಂದ ದೂರವಿಟ್ಟು ತೂಗಬೇಕು ಹಾಗೂ ಕೊಠಡಿಯಲ್ಲಿ ನಿಧಾನವಾಗಿ ಸಾಗಬೇಕು.

೩. ದೇಹದ ಉಸಿರಿನಿಂದ ಮತ್ತು ಕೈಗಳನ್ನು ಉಷ್ಣಮಾಪಕದ ಬಲ್ಬ್‌ನಿಂದ ದೂರವಿರುವಂತೆ ಎಚ್ಚರವಹಿಸಬೇಕು.

೪. ಪ್ರಖರವಾದ ಬೆಳಕಿನಿಂದ ದೂರವಿರಬೇಕು.

೫. ತೇವ ಬಲ್ಬು(Wet bulb) ಒಣಗದಂತೆ ನೋಡಿಕೊಳ್ಳಬೇಕು.

೬. ಮಾಪಕ ತೂಗುವಿಕೆಯಿಂದ ತೇವ ಬಲ್ಬನ ಉಷ್ಣತೆಯು ತಗ್ಗುತ್ತದೆ. ಆದ್ದರಿಂದ ಸತತ ಮಾಪನದಿಂದಲೇ ನಿಖರವಾದ ಮಾಪನವು ತಿಳಿಯಲು ಸಾಧ್ಯವಾಗುತ್ತದೆ.

೭. ತೇವ ಬಲ್ಬನ ಪಾದರಸ ಈ ಏರುವಿಕೆಯ ಮುನ್ನವೇ ಮಾಪನವನ್ನು ದಾಖಲಿಸಿಕೊಳ್ಳಬೇಕು.

ಸಾಧ್ಯವಾದಷ್ಟು ಮಟ್ಟಿಗೆ ೧/೪* ಅಯಲ್ಲೇ ಮಾಪನವನ್ನು ದಾಖಲಿಸುವುದು ಸೂಕ್ತ. ಶೇಕಡ ೭೦%ಕ್ಕಿಂತ ಕಡಿಮೆ ಸಾಪೇಕ್ಷ ತೇವಾಂಶ ಮಟ್ಟವನ್ನು ಕಾಯ್ದುಕೊಂಡರೆ ಮೋಲ್ಡ್(Mold) ಹಾಗೂ ಬೂಸ್ಟುಗಳು ಬೆಳೆಯುವುದನ್ನು ತಡೆಗಟ್ಟಬಹುದು. ಸೂಕ್ಷ್ಮಾಣುಗಳು ಬೆಳೆಯಲು ಅಧಿಕ ತೇವಾಂಶದ

ನಿಯಂತ್ರಣದಿಂದ ಕ್ರಿಮಿಕೀಟಗಳ ಬೆಳವಣಿಗೆಯನ್ನು ನಿಯಂತ್ರಿಸಬಹುದು ಹೊರತು ಅದನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗುವುದಿಲ್ಲ.

ವಾಯುಮಾಲಿನ್ಯ ನಗರ ಪ್ರದೇಶಗಳಲ್ಲಿ ಹೆಚ್ಚುತ್ತಿದೆ. ಧೂಳಿನ ಕಣ, ಆಮ್ಲ ಆವಿಗಳು ಮತ್ತು ಕುಲುಮೆ ಅಥವಾ ಭಟ್ಟಿ ಮತ್ತು ವಾಹನಗಳು ಹೊರಸೂಸುವ ಹೊಗೆ ಹಾಗೂ ಆಕ್ಸಿಡಂಟ್ಸ್‌ನಂತಹ ಮಲಿನಕಾರಕಗಳು. ಇಂಧನವನ್ನು ಸುಡುವುದರಿಂದ ವಾಯುಮಾಲಿನ್ಯವಾಗುತ್ತಿದೆ. ಇದನ್ನು ತಡೆಯಲು ಮಾಲಿನ್ಯದ ಪ್ರಮಾಣವನ್ನು ಅಳೆಯಬೇಕು ಮತ್ತು ಮಾದರಿಗಳನ್ನು ಅಳವಡಿಸಿಕೊಂಡು ನಿಯಂತ್ರಿಸಬೇಕು. ನಿರ್ದಿಷ್ಟ ಅಳತೆಯ ಗಾಳಿಯಲ್ಲಿರುವ ಮಲಿನಂತೆ ಅಥವಾ ಮಲಿನಕಾರಕಗಳನ್ನು ತೂಕ ಮಾಡುವುದರ ಮೂಲಕ ಮಲಿನತೆಯ ಪ್ರಮಾಣವನ್ನು ಅಳೆಯಬಹುದು. ೧. ಕಣಗಳು(Particulater), ೨. ಅನಿಲ ಮಾಲಿನ್ಯಗಳು ಇತ್ಯಾದಿ ಒಟ್ಟು ಸಾಂಪ್ರದಾಯಿಕ ಹಾಗೂ ಆಧುನಿಕ ಸಂಗೋಪನ, ಸಂಗ್ರಹಣಾ ಹಾಗೂ ಸಂವರ್ಧನಾ ವಿಧಾನಗಳನ್ನು ಅದರ ಸಾಂಪ್ರದಾಯಿಕ ನೆಲೆಯೊಂದಿಗೆ ಆಧುನಿಕ ಮಾದರಿಗಳ ಮೂಲಕ ವ್ಯಾಖ್ಯಾನಿಸಿಕೊಳ್ಳುವ ಕ್ರಮ ನನ್ನದಾಗಿದೆ. ಇದಕ್ಕಾಗಿ ಕ್ಷೇತ್ರಕಾರ್ಯ, ಗ್ರಂಥಾಲಯ, ವಿದ್ವಾಂಸರೊಂದಿಗೆ ಸಂವಾದ ಚರ್ಚೆಯಂಥ ಕ್ರಮಗಳನ್ನು ಅಳವಡಿಸಿಕೊಳ್ಳಲಾಗಿದೆ.

ಒಟ್ಟಿನಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ, ತಲೆಮಾರಿನಿಂದ ತಲೆಮಾರಿಗೆ ಬಳುವಳಿಯಾಗಿ ಧರ್ಮದತ್ತಿಯಾಗಿ ಹಸ್ತಪ್ರತಿಗಳ ಮತ್ತು ಇನ್ನುಳಿದ ಬರಹ ರೂಪದ ಕಾಗದ ಪ್ರತಿಯ ಗ್ರಂಥಗಳನ್ನು ಸಂರಕ್ಷಿಸುತ್ತ ಬಂದಿದ್ದಾರೆ. ಪಾಶ್ಚಾತ್ಯ ಗ್ರಂಥ ಸಂರಕ್ಷಣೆ ವಿಧಾನವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ಜ್ಞಾನವು ವ್ಯಕ್ತಿಕೇಂದ್ರಿತದಿಂದ ಸಾರ್ವತ್ರಿಕವಾಗುತ್ತ ವ್ಯಕ್ತಿಯ ಸೃಜನಾತ್ಮಕತೆಯನ್ನು ವಿಮರ್ಶೆಯ ಮನೋಭಾವನೆಯನ್ನು ಬೆಳೆಸುತ್ತ ಬಂದಿದೆ. ಪ್ರಾಚೀನ ಕಾಲದಲ್ಲಿ ಮೊದಲು ಮೌಖಿಕ ಸಾಹಿತ್ಯ ಆ ವ್ಯಕ್ತಿಯ ಸಮ್ಮುಖದಲ್ಲಿ ಇದ್ದಾಗ ಮಾತ್ರ ಅವನು ಆ ಗುಂಪಿಗೆ ಅಥವಾ ಆ ಸಮುದಾಯದ ಜನಗಳಿಗೆ ಮಾತ್ರ ತಲುಪುತ್ತಿತ್ತು. ಬರುಬರುತ್ತ ಮಾತಿಗಿಂತ ಬರಹಕ್ಕೆ ಮನ್ನಣೆ ಬಂದಿತು. ಆಗ ಜ್ಞಾನವು ಮೌಖಿಕತೆಯಿಂದ ಲಿಖಿತರೂಪ ಪಡೆಯಿತು.

ಗ್ರಂಥವನ್ನು ರಚಿಸಲು ಸಂರಕ್ಷಿಸಲು ಅನೇಕ ರೀತಿಯ ಲೇಖನ ಸಾಮಗ್ರಿಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದವು. ಅನೇಕ ಸಂಸ್ಕೃತಿಯ ಭಾರತೀಯರು ಅವುಗಳನ್ನು ಸ್ವೀಕರಿಸಲು ಅನೇಕ ರೀತಿಯ ನಿರಾಕರಣೆಯ ಮನೋಭಾವನೆಯು ವ್ಯಕ್ತವಾಯಿತು. ವಿದೇಶಿ ವಿದ್ವಾಂಸರು ಕನ್ನಡ ಸಾಹಿತ್ಯದಲ್ಲಿ ಮುದ್ರಣ ಯಂತ್ರಗಳ ಬಳಕೆಯಿಂದ ಒಪ್ಪುವ ಗ್ರಂಥರಕ್ಷಣೆಯನ್ನು ಮಾಡಿ ಸಂಸ್ಕೃತಿಯ ಪುನರ್‌ರಚನೆಗೆ ಮುಂದಾದರು. ಗ್ರಂಥಗಳ ಅಧ್ಯಯನದಿಂದ ಪ್ರಾಚೀನ ಕನ್ನಡಿಗರ ಮನೋಧರ್ಮ, ಇತಿಹಾಸ, ಪರಂಪರೆ, ಸಂಸ್ಕೃತಿ, ಧರ್ಮ, ನೀತಿ, ತತ್ವ, ಆಚಾರ-ವಿಚಾರ, ನಡೆ-ನುಡಿ, ಶೀಲ-ಸಂಪ್ರದಾಯ ಮುಂತಾದ ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಳ್ಳಬಹುದು. ಅಲ್ಲದೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ಪುನರ್‌ರಚನೆ ಮಾಡಬಹುದು ಎನ್ನುವ ಆತ್ಮವಿಶ್ವಾಸ ನನ್ನದಾಗಿದೆ. ಇದಕ್ಕಾಗಿ ಕ್ಷೇತ್ರಕಾರ್ಯ, ಗ್ರಂಥಾಲಯ ಬಳಕೆ, ವಿವಿಧ ಹಸ್ತಪ್ರತಿ ಭಂಡಾರ ಹಾಗೂ ಗ್ರಂಥಾಲಯಗಳ ಭೇಟಿ, ಹಿರಿಯ ವಿದ್ವಾಂಸರೊಂದಿಗಿನ ಚರ್ಚೆ, ಸಾಂಪ್ರದಾಯಿಕ ಹಿರಿಯರ ಸಂದರ್ಶನ ರೂಪದಲ್ಲಿ ಅಧ್ಯಯನವನ್ನು ಪೂರೈಸಿಕೊಳ್ಳಲು ಪ್ರಯತ್ನಿಸಲಾಗುತ್ತದೆ.

## ೨. ಕರ್ನಾಟಕದ ಮತ್ತು ದಕ್ಷಿಣ ಭಾರತೀಯ ಸಂದರ್ಭದಲ್ಲಿ ಈ ಕುರಿತು ನಡೆದ ಅಧ್ಯಯನಗಳ ಸ್ಥೂಲ ಸಮೀಕ್ಷೆ

ಪ್ರಾಚೀನ ಜ್ಞಾನ ಸಾಮಗ್ರಿಗಳಲ್ಲಿ ಹಸ್ತಪ್ರತಿಗಳಿಂದ ಕವಿ ಲಿಪಿಕಾರರ ಚರಿತ್ರೆಯನ್ನು ಕನ್ನಡ ನಾಡು-ನುಡಿ ಸಂಸ್ಕೃತಿ ಕನ್ನಡಿಗರ ಧರ್ಮಾಭಿಮಾನ ವಿದ್ಯಾರ್ಜನೆಗೆ ನೀಡಿದ ಪ್ರೋತ್ಸಾಹ ಗ್ರಂಥಗಳ ಪ್ರತಿಕರಣದ ಹಿಂದಿನ ಉದ್ದೇಶ ಕನ್ನಡ ಕನ್ನಡಿಗರ ಸಂಸ್ಕೃತಿಯನ್ನು ಕಟ್ಟಿಕೊಡುವ ಬಹುಮುಖಿ ಆಯಾಮದ ಸಾಂಸ್ಕೃತಿಕ ಒಲಯವನ್ನು ಕನ್ನಡಿಗರ ಜೀವನೊಲವನ್ನು ಒಳಗೊಂಡ ಮಹತ್ವದ ಜ್ಞಾನ ಕೇಂದ್ರಗಳಾಗಿವೆ. ಹೀಗಾಗಿ ಹಸ್ತಪ್ರತಿಗಳ ಕುರಿತು ವಿದ್ವಾಂಸರು ಹಸ್ತಪ್ರತಿಗಳ ಸಂಗ್ರಹ, ಸಂಪಾದನೆ, ಪ್ರತೀಕರಣ, ಸೂಚೀಕರಣ, ವರ್ಗೀಕರಣ ಲಿಪಿಕಾರ ಪ್ರಶಸ್ತಿಗಳು ಹಸ್ತಪ್ರತಿಗಳ ವಿನ್ಯಾಸಗಳ ಕುರಿತು ಬೆಳಕು ಚೆಲ್ಲಲು ಹಲವು ಲೇಖನಗಳು ಹಲವು ಗ್ರಂಥಗಳು ರಚನೆಗೊಂಡವು.

ಒಟ್ಟು ಕರ್ನಾಟಕದ ಹಸ್ತಪ್ರತಿಯಲ್ಲಿನ ಚಟುವಟಿಕೆಗಳನ್ನು ಗಮನಿಸಿದರೆ ಹಸ್ತಪ್ರತಿಗಳ ಸಂರಕ್ಷಣೆಗಿಂತ ಸಂಪಾದನಾಶಾಸ್ತ್ರಕ್ಕೆ ಹೆಚ್ಚು ಒಲವು ತೋರಿದಂತಿದೆ. ಪ್ರತಿಗಳ ಸಂರಕ್ಷಣೆ ಹಾಗೂ ಶ್ರೇಷ್ಠತೆ ನೆಲೆಯಲ್ಲಿ ನಡೆದ ಅಧ್ಯಯನಗಳು ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ನಡೆದಿಲ್ಲ. ಪ್ರಾಚೀನ ಜ್ಞಾನ ಸಾಮಗ್ರಿಯಲ್ಲಿ ಒಂದಾದ ಹಸ್ತಪ್ರತಿಗಳ ಆಂತರಿಕ ಮತ್ತು ಬಾಹ್ಯ ಸಂರಕ್ಷಣೆಯೂ ಜನ ಬದುಕಿನ ಜೊತೆಗೆ ಹೊಂದಿಕೊಂಡ ಅವಿನಾಭಾವ ಸಂಬಂಧವಾಗಿದೆ. ಕನ್ನಡ ಸಂಸ್ಕೃತಿಯ ಹೆಚ್ಚು ಫಲಪ್ರದವಾದ ಸಂರಕ್ಷಣೆ ಮಾದರಿಯನ್ನು ಕಾಣುತ್ತೇವೆ.

ಭಾರತದಾದ್ಯಂತ ಹಸ್ತಪ್ರತಿಗಳಲ್ಲಿನ ಜ್ಞಾನ ಶಾಶ್ವತವಾಗಿರಲು ಹಸ್ತಪ್ರತಿಗಳ ಸಂರಕ್ಷಣೆ ಸಂವರ್ಧನೆ ಅಷ್ಟೆ ಮುಖ್ಯವಾಗಿ ನಡೆದುಕೊಂಡು ಬಂದಿದೆ. ಹಸ್ತಪ್ರತಿಗಳಲ್ಲಿನ ಜ್ಞಾನ ಶಾಶ್ವತ, ಆದರೆ ಆ ಜ್ಞಾನವನ್ನು ಹೊತ್ತು ತಂದ ಹಸ್ತಪ್ರತಿ ಸಾಮಗ್ರಿ ಶಾಶ್ವತವಾದುದಲ್ಲ. ಅಚ್ಚಾದ ಗ್ರಂಥಗಳಲ್ಲಿ ಆಯಾ ಹಸ್ತಪ್ರತಿಗಳಲ್ಲಿನ ಕಾವ್ಯ ಅಥವಾ ಶಾಸ್ತ್ರಗಳು ಸಿಗಬಹುದೇ ಹೊರತು ಹಸ್ತಪ್ರತಿಗಳ ಇನ್ನುಳಿದ ವಿವರಗಳು ಸಿಗಲಾರದು. ಹೀಗಾಗಿ ಹಸ್ತಪ್ರತಿ ಸಂರಕ್ಷಣೆ, ಸಂವರ್ಧನೆ ಪ್ರತೀಕರಣ ಮಾಡುವ ಮೂಲಕ ಅಮೂಲ್ಯವಾದ ಜ್ಞಾನವನ್ನು ಸಂರಕ್ಷಿಸಬೇಕಾಗಿದೆ.

ಮಹಾಪ್ರಬಂಧದ ವಿಷಯಕ್ಕೆ ಅನುಗುಣವಾಗಿ ಈ ನಿಟ್ಟಿನಲ್ಲಿ ಪ್ರಕಟಗೊಂಡ ಗ್ರಂಥಗಳು ಲೇಖನಗಳು ಕೆಲವನ್ನು ಇಲ್ಲಿ ಹೆಸರಿಸಿರುವೆ. ಎಸ್.ಎಂ.ಕತ್ರೆಯವರ ಭಾರತೀಯ ಗ್ರಂಥ ಸಂಪಾದನಾ ಪರಿಚಯ, ಡಿ.ಎಲ್.ನರಸಿಂಹಚಾರ್ ಅವರ ಕನ್ನಡ ಗ್ರಂಥಸಂಪಾದನೆ, ಡಾ.ಕಲಬುರ್ಗಿಯವರ ಕನ್ನಡ ಗ್ರಂಥಸಂಪಾದನಶಾಸ್ತ್ರ, ಗ್ರಂಥ ಸಂಪಾದನೆ ಕೃತಿಗಳು ಬಿ.ಎಸ್.ಸಣ್ಣಯ್ಯರ ಗ್ರಂಥ ಸಂರಕ್ಷಣೆ, ಹಸ್ತಪ್ರತಿಶಾಸ್ತ್ರ, ಮಾಧವ ಎನ್. ರಟ್ಟೀಹಳ್ಳಿಯವರ ಕನ್ನಡ ಗ್ರಂಥೋಧ್ಯಮ, ಬಿ.ಕೆ.ಹಿರೇಮಠರವರ ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ಡಾ.ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಎಚ್. ದೇವಿರಪ್ಪರವರ ಕನ್ನಡ ಹಸ್ತಪ್ರತಿಗಳ ಇತಿಹಾಸ, ಡಾ.ವೀರೇಶ ಬಡಿಗೇರರವರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು ಅಲ್ಲದೇ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಹಸ್ತಪ್ರತಿ ಅಧ್ಯಯನ, ಹಸ್ತಪ್ರತಿ ವ್ಯಾಸಂಗ ಮತ್ತು ಹಸ್ತಪ್ರತಿ ಸೂಚಿಗಳು.

ಡಾ.ಬಿ.ಕೆ. ಹಿರೇಮಠ ಅವರ ಲೇಖನ. ಕನ್ನಡ ಓಲೆಗರಿ ಗ್ರಂಥಗಳಲ್ಲಿ ಕಲಾತ್ಮಕತೆ ಇದು ಹರತಿಸಿರಿ ಎಂಬ ಗ್ರಂಥದಲ್ಲಿ ೧೯೮೭ರಲ್ಲಿ ಪ್ರಕಟವಾಗಿದೆ. ಈ ಲೇಖನ ಕನ್ನಡ ಓಲೆಗರಿಗಳ ಚಿತ್ರವಿನ್ಯಾಸದ ಬಗ್ಗೆ ಮಾಹಿತಿಯನ್ನು ನೀಡುವ ಪ್ರಾಚೀನರ ಕಲಾಪ್ರೌಢಿಮೆಯನ್ನು ತಿಳಿಸುತ್ತದೆ. ಬಿ.ಎಸ್.ಸಣ್ಣಯ್ಯ ಲೇಖನ: ಓಲೆಗ್ರಂಥಗಳು ಪ್ರಬುದ್ಧ ಕರ್ನಾಟಕ ಸಂಪುಟ ೫೨ ಸಂಚಿಕೆ ೧ರಲ್ಲಿದೆ. ಓಲೆಗ್ರಂಥಗಳ ಬೆಳೆದು ಬಂದ ವಿಧಾನವನ್ನು ತಿಳಿಸುವ ಲೇಖನವಾಗಿದೆ.

ಡಾ.ವೀರೇಶ ಬಡಿಗೇರ ಅವರ ಲೇಖನ: ಭಾರತದಲ್ಲಿ ಹಸ್ತಪ್ರತಿಗಳ ಅಧ್ಯಯನ ಪರಂಪರೆ(ಹಸ್ತಪ್ರತಿ ಅಧ್ಯಯನ ೨೦೦೯-೧೦) ಈ ಲೇಖನವು ಭಾರತದಲ್ಲಿ ವಿಶೇಷವಾಗಿ ದಕ್ಷಿಣ ಭಾರತದ ಹಸ್ತಪ್ರತಿ ಅಧ್ಯಯನ ಕ್ರಮವನ್ನು ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆಗೆ ಶ್ರಮಿಸಿದ ಪ್ರೋತ್ಸಾಹಿಸಿದ ವಿದ್ವಾಂಸರ ಮಾಹಿತಿಯನ್ನು ತಿಳಿಸುವ ಮಹತ್ವದ ಲೇಖನವಾಗಿದೆ.

ಡಾ.ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ೧೯೯೨ರಲ್ಲಿ ಪ್ರಕಟವಾದ ಈ ಕೃತಿ ಹಸ್ತಪ್ರತಿಗಳ ಕಲಾವಿನ್ಯಾಸ, ಕುಶಲಕರ್ಮಿಗಳ ಸಂಸ್ಕೃತಿ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಹಸ್ತಪ್ರತಿಗಳ ಪಾಲನೆ ಪೋಷಣೆಯ ದೃಷ್ಟಿಯಿಂದ ಸಂರಕ್ಷಣೆಗೊಂಡ ಅಧ್ಯಯನ ಮಾದರಿಯನ್ನು ತಿಳಿಸುವ ಕೃತಿಯಾಗಿದೆ.

ಡಾ.ಎಂ.ಎಂ.ಕಲಬುರ್ಗಿ ಹಸ್ತಪ್ರತಿಶಾಸ್ತ್ರ ಕನ್ನಡ ಹಸ್ತಪ್ರತಿಗಳನ್ನು ಶಾಸ್ತ್ರವಾಗಿ ನೋಡುವ ಪ್ರಾಚೀನ ಜ್ಞಾನ ಸಾಮಗ್ರಿಗಳಾದ ಹಸ್ತಪ್ರತಿಗಳ ಸಂಗ್ರಹ ವಿಧಾನ ಲಿಪಿಕಾರರ ಚರಿತ್ರೆಯನ್ನು ತಿಳಿಸುವ ಕೃತಿಯಾಗಿದೆ.

ಡಾ. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು ಈ ಕೃತಿ ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ ನೆಲೆಯಲ್ಲಿ ಕನ್ನಡ ಹಸ್ತಪ್ರತಿಗಳ ಸಾಂಸ್ಕೃತಿಕ ನೆಲೆಯಲ್ಲಿ ಬಹುಮುಖಿ ಆಯಾಮದ ಮೂಲಕ ಒಂದು ಪಠ್ಯದಲ್ಲಿಯೆ ಬಹುಪಠ್ಯವನ್ನು ನೋಡುವ ಮಹತ್ವದ ಕೃತಿಯಾಗಿದೆ.

ಬಿ.ಎಸ್.ಸಣ್ಣಯ್ಯ: ಗ್ರಂಥ ಸಂರಕ್ಷಣೆ ಗ್ರಂಥಗಳ ಆಂತರಿಕ ಮತ್ತು ಬಾಹ್ಯ ಸಂರಕ್ಷಣೆ ಕುರಿತು ತಿಳಿಸುವ ಕೃತಿಯಾಗಿದೆ. ಗ್ರಂಥಗಳನ್ನು ಸಂರಕ್ಷಣಾ ವಿಧಾನದ ಪರಿಕಲ್ಪನೆಗಳನ್ನು ತಿಳಿಸಲಾಗಿದೆ. ಇಷ್ಟೆಲ್ಲ ಗ್ರಂಥ ಸಂಪಾದನಾ, ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆ ಕೃತಿಗಳು ಲೇಖನಗಳು ಬಂದಿದ್ದರು. ಅವುಗಳು ಹಸ್ತಪ್ರತಿಗಳ ಮೂಲಕ ಸಂರಕ್ಷಣೆಯನ್ನು ಸಂವರ್ಧನೆಯನ್ನು ತಿಳಿಸುವುದಕ್ಕೆ ಒತ್ತು ನೀಡದೆ ಹಸ್ತಪ್ರತಿಗಳ ಸಂಗ್ರಹವನ್ನು ಅಧ್ಯಯನ ವಿಧಾನವನ್ನು ತಿಳಿಸುತ್ತಿವೆ.

ಪ್ರಾಚೀನ ಕಾಲದ ಕೇರಳದಲ್ಲಿ ತಾಳೆಓಲೆಯು ಹೆಚ್ಚು ಬಳಕೆಯಲ್ಲಿರುವ ಬರವಣಿಗೆ ಪ್ರಮುಖ ಸಾಮಗ್ರಿಯಾಗಿತ್ತು. ಕವಿ ಮತ್ತು ಲಿಪಿಕಾರರು ಬಳಸುತ್ತಿರುವ ಪರಿಣಾಮವಾಗಿ ತಾಳೆಓಲೆಯ ಬರಹಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಬರೀ ಸಾಹಿತ್ಯಕ ವಿಷಯವಲ್ಲದೇ ಸಾಹಿತ್ಯೇತರವಾದ ಶಾಸ್ತ್ರಗಂಥಗಳು ತಾಳೆಓಲೆಗಳ ಮೇಲೆ ಬರೆಯುಲ್ಪಟ್ಟವು. ಮಲಯಾಳಂನಲ್ಲಿನ ಹಸ್ತಪ್ರತಿಗಳ ಸಂಗ್ರಹದಲ್ಲಿ ತಿರುವಾಂಕೂರು

ಸಂಸ್ಥಾನದ ಹಿಂದಿನ ರಾಜರುಗಳು ಅರಮನೆಯಲ್ಲಿ ವಂಶಪಾರಂಪರ್ಯವಾಗಿ ಹಸ್ತಪ್ರತಿಗಳನ್ನು ಸಂಗ್ರಹಿಸಿಕೊಂಡು ಬಂದ ಅಪೂರ್ವವಾದ ಗ್ರಂಥ ಭಂಡಾರವಿದ್ದೀತು. ಹಸ್ತಪ್ರತಿಗಳನ್ನು ಕೇರಳ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಸಂರಕ್ಷಿಸಲಾಗಿದೆ. ವಿಶೇಷವೆಂದರೆ ರಾಜರುಗಳ ಆಡಳಿತ ಕಾಲದಲ್ಲಿ ಮೂಲಪ್ರತಿಗಳು ರಾಜನ ಮುಂದೆ ಓದಬೇಕಾಗಿದ್ದು, ಹೀಗೆ ಓದಲಾದ ಹಸ್ತಪ್ರತಿಗಳು ಪರಾಮರ್ಶನಕ್ಕೆ ಒಳಗಾಗುವ ಸಾಧ್ಯತೆ ಇದ್ದು ಅರಮನೆಯ ಗ್ರಂಥಾಲಯ ಸೇರುತ್ತಿದ್ದರು.

ಕೇರಳದಲ್ಲಿ ಹಸ್ತಪ್ರತಿ ಕ್ಷೇತ್ರದಲ್ಲಿ ಪರಿಣಿತರಾದ ಟಿ.ಗಣಪತಿಶಾಸ್ತ್ರಿ, ಸಾಂಬಶಿವಶಾಸ್ತ್ರಿ, ಮಾಧವಶಾಸ್ತ್ರಿ, ಕೇರಳವರ್ಮವರಿಯಕೋಯಿ ತಂಬೂರಾನ್ ಮೊದಲಾದವರ ಅಪೂರ್ವ ಸೇವೆಯ ಭಾಗವಾಗಿ ಕೇರಳ ವಿಶ್ವವಿದ್ಯಾಲಯದಲ್ಲಿ ಹಸ್ತಪ್ರತಿ ಗ್ರಂಥಾಲಯವು ಸಂರಕ್ಷಣೆಗೊಂಡಿವೆ. ಅಲ್ಲದೇ ಖಾಸಗಿ ವ್ಯಕ್ತಿಗಳ ಹತ್ತಿರವಿದ್ದ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿಡಲಾಗಿದೆ. ಕಾಲಿಕಟ್ ವಿಶ್ವವಿದ್ಯಾಲಯದ ಮಲೆಯಾಳಂ ವಿಭಾಗವು ೬೦೦೦ ಹಸ್ತಪ್ರತಿ ಸಂಗ್ರಹಿಸಿದೆ ಇದರಲ್ಲಿ ಸುಮಾರು ೨೨೦೦ ಹಸ್ತಪ್ರತಿಗಳು ಅಪ್ರಕಟಿತ.

ಹಸ್ತಪ್ರತಿ ತಯಾರಿಕ ವಿಧಾನ, ಬರವಣಿಗೆ ಸಾಧನ ಸಂರಕ್ಷಣೆಯ ವಿಧಾನವನ್ನು ಈ ಕೆಳಗಿನಂತೆ ಹೇಳಬಹುದು. ಹಸಿಯಾದ ತಾಳೆಗರಿಗಳು ಪಡೆಸಾಗಿದ್ದು ಬೂದುಬಣ್ಣದಲ್ಲಿರುತ್ತವೆ. ಇವುಗಳನ್ನು ಬರವಣಿಗೆಗೆ ಸಿದ್ಧಪಡಿಸಲು ಹಸಿಯಾದ ತಾಳೆಓಲೆಗಳನ್ನು ಬರವಣಿಗೆಗೆ ಅಳತೆಗೆ ತಕ್ಕಂತೆ ತುಂಡು ಮಾಡಿ ಒಣಗಿಸಬೇಕು. ಹೀಗೆ ಒಣಗಿಸಿದ ತಾಳೆಓಲೆಗಳನ್ನು ಅರಿಷಿಣ ನೀರು ಹಾಗೂ ಹಾಲು ಸೇರಿಸಿದ ಮಿಶ್ರಣದಲ್ಲಿ ಕುದಿಸುತ್ತಾರೆ. ನಂತರ ಅವುಗಳನ್ನು ನೆರಳಿನಲ್ಲಿ ಒಣಗಿಸಿ ಓಲೆಗಳ ೧/೪ ಭಾಗದಷ್ಟನ್ನು ಎರಡು ಅಂಚುಗಳಲ್ಲಿ ಬಿಟ್ಟು ಏಕರೂಪದ ಎರಡು ತೂತುಗಳನ್ನು ಮಾಡಿ ಎರಡು ಮರದ ಹಲಗೆ ತುಂಡುಗಳ ನಡುವೆ ಇವುಗಳನ್ನು ಇರಿಸಿ ತಾಳೆಓಲೆಗಳನ್ನು ದೃಢವಾಗಿ ಕಟ್ಟಲಾಗುತ್ತದೆ. ಈ ತಾಳೆಓಲೆಗಳನ್ನು ಬರವಣಿಗೆ ಬೇಕಾದಾಗ ತೆಗೆದುಕೊಂಡು ಚೂಪಾದ ಸಲಕರಣೆಯೊಂದರಿಂದ ತಾಳೆಗರಿಗಳ ಮೇಲೆ ಅಕ್ಷರಗಳನ್ನು ಕೊರೆಯಲಾಗುತ್ತದೆ. ಈ ಬರವಣಿಗೆ ಸಾಧನ ಇದರ ಒಂದು ತುದಿ ಹರಿತವಾಗಿದ್ದು ಇನ್ನೊಂದು ತುದಿಯಲ್ಲಿ ಹಿಡಿಕೆಯಿಂದ ಈ ಲೇಖನ ಸಾಮಗ್ರಿ ಕಬ್ಬಿಣದ ದಂಡದಂತಿರುತ್ತದೆ. ಶ್ರೀಮಂತರು ಕಂಚಿನ ದಂಡಕಗಳನ್ನು ಬಳಸಿದ ಉದಾಹರಣೆ ಸಿಗುತ್ತವೆ. ಇನ್ನೂ ಹಸ್ತಪ್ರತಿಗಳನ್ನು ಸಂರಕ್ಷಿಸಲು ೧) ಕೆಡದಂತೆ ಕಾಪಾಡುವುದು ೨) ಪುನಃ ರಚಿಸುವ ಕಾರ್ಯವನ್ನು ಕೈಗೊಳ್ಳುತ್ತಿದ್ದರು. ಹಸ್ತಪ್ರತಿಗಳನ್ನು ಸೂಕ್ತ ವಾತಾವರಣದಲ್ಲಿಟ್ಟು ಸಂರಕ್ಷಿಸುತ್ತಿದ್ದರು. ಕೇರಳದ ವಿಶ್ವವಿದ್ಯಾಲಯ ಗ್ರಂಥಾಲಯದಲ್ಲಿ ಹಸ್ತಪ್ರತಿಗಳನ್ನು ತೆರೆದ ಮರದ ಕಪಾಟುಗಳಲ್ಲಿ ಇರಿಸಲಾಗಿದ್ದು ಉಷ್ಣಾಂಶವನ್ನು ನಿಯಂತ್ರಿಸಲು ಎರಡು ಹವಾನಿಯಂತ್ರಕ ಯಂತ್ರಗಳನ್ನು ಅಳವಡಿಸಲಾಗಿದೆ. ಹಸ್ತಪ್ರತಿಗಳಿಗೆ ತೈಲಲೇಪನ ಮಾಡುವ ವಿಧಾನ ಮತ್ತು ಪಾರಂಪರಿಕ ನೆಲೆಯಲ್ಲಿ ಸಂರಕ್ಷಣೆ ಕ್ರಮಗಳನ್ನು ಕೈಗೊಳ್ಳಲಾಗಿರುವುದು ತಿಳಿದುಬರುತ್ತದೆ.

ತಮಿಳು ಹಸ್ತಪ್ರತಿಗಳ ಸಂಗ್ರಹ ಹಾಗೂ ಅಧ್ಯಯನದಲ್ಲಿ ಕರ್ನಲ್ ಮೆಕೆಂಜಿ, ಲಾರ್ಡ್ ಮಿಂಟೋ, ಸಿ.ಪಿ.ಬ್ರೌನ್ ಮುಂತಾದವರು ಪ್ರಮುಖರು ೧೮೨೯ರಲ್ಲಿ ಆರಂಭವಾದ ತಮಿಳುನಾಡಿನ ಸರಕಾರಿ ಪ್ರಾಚ್ಯ

ಹಸ್ತಪ್ರತಿ ಭಂಡಾರವು ದೇಶದಲ್ಲಿಯೇ ದೊಡ್ಡದಾದಂಥದ್ದು. ಇಲ್ಲಿ ೬೫೦೦೦ಕ್ಕೂ ಹೆಚ್ಚು ಸಂಸ್ಕೃತ ಹಸ್ತಪ್ರತಿಗಳಿರುವುದು ಗಮನಾರ್ಹ. ೧೯೬೧ರ ವರೆಗೆ ಕಂದಾಯ ಜಿಲ್ಲೆಗಳನ್ನು ಆಯ್ದುಕೊಂಡು ಆಯಾ ಜಿಲ್ಲಾಧಿಕಾರಿಗಳ ಮೂಲಕ ಹಸ್ತಪ್ರತಿ ಸಂಗ್ರಹ ಮಾಡಲಾಯಿತು. ತಮಿಳುನಾಡಿನ ೫೨ ವಿವಿಧ ಸ್ಥಳಗಳಲ್ಲಿ ೨೭, ೪೮೩ ಕಟ್ಟುಗಳಲ್ಲಿರುವ ೪೧೪೯೫ ಕೃತಿಗಳನ್ನು ಸಂರಕ್ಷಿಸಲಾಗಿದೆ. ತಮಿಳು ವಿಶ್ವವಿದ್ಯಾಲಯದಿಂದಲೂ ಸಂಗ್ರಹಕಾರ್ಯ ನಡೆದಿದೆ.

ತಮಿಳಿನಲ್ಲಿ ಅಸಂಖ್ಯಾತ ಸಾಹಿತ್ಯಿಕ ಬರಹಗಳಿಗೆ ತೊಲ್ಕಾಪ್ಪಿಯಂ ಎಂಬ ವ್ಯಾಕರಣ ಕೃತಿ ಜನಜೀವನಕ್ಕಾಗಿ ವ್ಯಾಕರಣವನ್ನು ಹೇಳುತ್ತದೆ. ತಮಿಳಿನಲ್ಲಿ ಚಿನ್ನದ, ಬೆಳ್ಳಿಯ, ತಾಮ್ರದ ಪಟ್ಟಿಗಳು, ಕಲ್ಲುಬಂಡೆ, ತಾಳೆಎಲೆ ಮತ್ತು ಬಟ್ಟೆಗಳನ್ನು ಉಪಯೋಗಿಸುತ್ತಿದ್ದದ್ದಕ್ಕೂ ಪುರಾವೆಯಾಗಿವೆ. ಅಲ್ಲದೆ ಆವೆ ಮಣ್ಣಿನ ಹಲಗೆಗಳನ್ನು ಚರ್ಮದ ಮರದ ತೊಗಟೆ, ಮರದ ಹಲಗೆಗಳು, ಸೀಳಿದ ಬೊಂಬೆಗಳನ್ನು ಬರಹಗಳಿಗೆ ಉಪಯೋಗಿಸುತ್ತಿದ್ದರು. ತಮಿಳು ರಾಜರ ಬಳಿ ತಾಳೆಓಲೆಗಳ ಮೇಲೆ ಬರೆಯುವವರಿದ್ದರು. ಅವರನ್ನು ಮುಖ್ಯನಾದವನು 'ಓಲೆಐನಾಯಕಮ್' ಎಂದು ಕರೆಯಲಾಗುತ್ತಿತ್ತು. ಕಣಕ್ಕುತ್ತರೈ ಮುರ್‍ರಿಯ ಕಟುಂಚೊಲೋಲೈ ಒಟ್ಟಿತ್ತಾನ್ ವಿಟುತ್ತ ಓಲೈ ಉಟ್ಪೊರುಳ್ ಉರೈಮಿನ್ ಎನ್ನ ಎಂಬ ಉಲ್ಲೇಖಗಳು ರಾಜನ ಸಂದೇಶ ಮತ್ತು ಆಜ್ಞೆಗಳಾಗಿವೆ.

ತಾಳೆಗಿಡಗಳ ವಿಧಗಳ ಕುರಿತು, ಎಲೆಗಳನ್ನು ಸಂಸ್ಕರಿಸುವ ವಿಧಾನವನ್ನು ಕುರಿತು ಹೇಳಲಾಗಿದೆ. ತಾಳೆಗಿಡಗಳಲ್ಲಿ ಕೂಂಟರ್ ಪಸ್ಯೆ ಅಥವಾ ಟಾಲಿಪ್ಪಣ್ಣೆ ಮತ್ತು ನುಂಕುಪ್ ಪಣ್ಯೆ ಎರಡು ವಿಧಗಳು ಹೆಸರಿಸಿದ್ದಾರೆ. ಗಿಡಗಳಿಂದ ಕೊಯ್ದು ಎಲೆಗಳನ್ನು ನೆರಳಿನಲ್ಲಿ ಒಣಗಿಸಲಾಗುವುದು. ಎಲೆಗಳು ತುಂಬಾ ಬಲಿತಿದ್ದರೆ ಅವುಗಳನ್ನು ಮೊದಲು ಮಣ್ಣಿನಲ್ಲಿ ಎರಡು ಮೂರು ದಿನ ಹೂತು ಅನಂತರ ನೆರಳಿನಲ್ಲಿ ಒಣಗಿಸಲಾಗುವುದು. ಅನಂತರ ಎಲೆಗಳನ್ನು ಮಧ್ಯದ ಕಡ್ಡಿ ಇರುವಂತೆ ಒಂದೇ ಅಳತೆಯಲ್ಲಿರುವಂತೆ ಕತ್ತರಿಸಿ ನೀರಿನಲ್ಲಿ ಕುದಿಸಲಾಗುವುದು. ಹೀಗೆ ಕುದಿಸಿದ ಎಲೆಗಳನ್ನು ಮತ್ತೆ ಒಣಗಿಸಲಾಗುವುದು. ಮಧ್ಯದ ಕಡ್ಡಿ ಇರುವ ಎಲೆಯ ತುಂಡನ್ನು ಚಟ್ಟಮ್ ಎಂದು ಕರೆಯಲಾಗುತ್ತದೆ. ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಸಮಯದಲ್ಲಿ ಈ ಚಟ್ಟಮ್ ಬಳಕೆಯಾಗುತ್ತಿದ್ದವು. ಇನ್ನೂ ಮಧ್ಯದ ಕಡ್ಡಿ ತೆಗೆದ ಪ್ರತಿಗಳನ್ನು ಏಟು ಎಂದು ಕರೆಯಲಾಗಿದ್ದು ಈ ಏಟುಗಳನ್ನು ಉದ್ದದ ಅಳತೆಗೆ ಅನುಗುಣವಾಗಿ ಕತ್ತರಿಸಿ ರಂಧ್ರಕೊರೆದು ಬರವಣಿಗೆಗೆ ಬಳಸಲಾಗುತ್ತಿರುವುದು ತಿಳಿದುಬರುತ್ತದೆ. ಬರವಣಿಗೆಗಾಗಿ ಕಂಠವನ್ನು ಬಳಸಲಾಗುತಿತ್ತು.

ತಂಜಾವೂರಿನ ಸರಸ್ವತಿ ಮಹಲ್ ಗ್ರಂಥಾಲಯದ ಸ್ಥಾಪಕ ಸರ್ಫೋಜಿಯನ ಕಾಲಕ್ಕಾಗಲೇ ತೆಲುಗು ತಾಡವೋಲೆ ಗ್ರಂಥಗಳು ಅಲ್ಲಿ ಸಂಗ್ರಹಗೊಂಡವು. ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರವಧಿಯಲ್ಲಿ ತಾಡವೋಲೆಗಳ ಸಂಗ್ರಹ ಕಾರ್ಯ ಭರದಿಂದ ಸಾಗಿತು. ಕರ್ನಲ್ ಮೆಕೆಂಜಿ ಹಾಗೂ ಸಿ.ಪಿ.ಬ್ರೌನ್ ಅವರು ಹಸ್ತಪ್ರತಿಗಳ ಸಂಗ್ರಹ ಹಾಗೂ ಸಂರಕ್ಷಣೆಗಾಗಿ ವಿಶೇಷ ಪರಿಶ್ರಮಪಟ್ಟರು. ಕರ್ನಲ್ ಮೆಕಂಜಿಯ ಸಂಗ್ರಹದ ಹಸ್ತಪ್ರತಿಗಳು ಹೆಚ್ಚಿನ ಸಂಖ್ಯೆಯ ಭೂದಾಖಲೆಗಳಾಗಿವೆ. ಸಿ.ಪಿ.ಬ್ರೌನ್ ಅವರು ತೆಲುಗು

ಭಾಷೆಯ ತಾಡವೋಲೆ ಹಾಗೂ ಕಾಗದದಲ್ಲಿ ಬರೆದಿರಿಸಿದ ಹಸ್ತಪ್ರತಿಗಳನ್ನು ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸಿದನು.

ತಾಳೆಮರದಿಂದ ಕತ್ತರಿಸಿ ತಂದ ತಾಳೆಗರಿಗಳನ್ನು ಗುಣಮಟ್ಟವನನು ಪರೀಕ್ಷಿಸಿ ನೆರಳಿನಲ್ಲಿ ಒಣಗಿಸಬೇಕು. ಆ ಬಳಿಕ ಅವುಗಳನ್ನು ಸೆಗಣಿ ನೀರಲ್ಲಿ ಅದ್ದಿ ನೆರಳಿನಲ್ಲಿ ಒಣಗಿಸಬೇಕು. ಆಗ ಅವುಗಳಿಗೆ ಬಂಗಾದ ಬಣ್ಣ ಬರುತ್ತವೆ. ಅವುಗಳನ್ನು ಅನುಕೂಲಕ್ಕೆ ತಕ್ಕಂತೆ ಕತ್ತರಿಸಬೇಕು. ತಾಡವೋಲೆ ಹಸ್ತಪ್ರತಿಯ ಅಡಿಭಾಗ ಮತ್ತು ಮೇಲ್ಭಾಗ ಅದೇ ಉದ್ದ ಅಗಲ ಅಳತೆಯ ಬಿದಿರಿನ ಪಟ್ಟಿಕೆಗಳನ್ನು ಇರಿಸಿ ನೂಲಿನಿಂದ ಕಟ್ಟಬೇಕು. ಕರತಾಲ ಮತ್ತು ಶ್ರೀತಾಲ ಎಂಬ ಎರಡು ರೀತಿಯ ಹಸ್ತಪ್ರತಿಗಳನ್ನು ಬರವಣಿಗೆಗೆ ಬಳಸಲಾಗುತ್ತಿತ್ತು. ತಾಡವೋಲೆಯ ಮೇಲೆ ಬರೆಯಲು ಕಬ್ಬಿಣದ ಲೇಖನಿ-ಕಂಠವನ್ನು ಬಳಸಲಾಗುತ್ತದೆ.

ವಿಜಯ ರಾಘವ ನಾಯಕ (ಕ್ರಿ.ಶ.,೧೬೩೩-೭೩) ರಘುನಾಥಾಭ್ಯುದಯಮು' ಎನ್ನುವ ಕೃತಿಯಲ್ಲಿ ವಿಜಯ ಭವನ ಎನ್ನುವ ಸಾಂಸ್ಕೃತಿಕ ಸಮುಚ್ಚಯದ ಕುರಿತು ಬರೆಯುತ್ತಾನೆ.

ವಿಜಯ ಚಿಹ್ನಮುಚ್ಚಚೇವೆಲಯುಚುನ್ನ

ವಿಜಯ ಭವನ ರಾಜಪಿದಿಕಾಸ್ಥಲಿನಿ

ವಿಜಯಭವನ ಎನ್ನುವುದು ವಿದ್ವಾಂಸರು ಹಾಗೂ ಕವಿಗಳಿಗೆ ಮೀಸಲಿಟ್ಟ ಸ್ಥಳವಾಗಿತ್ತು. ಇಲ್ಲಿ ಅರಸ ತನ್ನ ವಿಜಯ ಸ್ಮಾರಕ ಹಾಗೂ ಗ್ರಂಥಗಳನ್ನು ಇಡುತ್ತಿದ್ದ. ಈ ವಿಜಯಭವನಕ್ಕೆ ಮುಂದೆ ಸರಸ್ವತಿ ಮಹಲ್ ಎಂದು ಕರೆಯಲಾಯಿತು. ಸಾಹಜಿ ಎನ್ನುವವ ಪ್ರಾಚೀನ ಹಾಗೂ ಸಮಕಾಲೀನ ಕವಿಗಳ ಲಕ್ಷಕ್ಕೂ ಮಿಕ್ಕ ಹಸ್ತಪ್ರತಿಗಳನ್ನು ಇಲ್ಲಿ ಸಂಗ್ರಹಿಸಿಟ್ಟಿದ್ದನು. ಸರ್ಫೋಜಿಯ ಆಡಳಿತಾವಧಿಯನ್ನು (ಕ್ರಿ.ಶ.೧೭೧೨-೨೮) ಸರಸ್ವತಿ ಮಹಲ್‌ನ ಸುವರ್ಣಯುಗವೆಂದು ಕರೆಯಲಾಗುತ್ತದೆ. ಇಲ್ಲಿ ೧॥೬॥ ತೆಲುಗು ಹಸ್ತಪ್ರತಿಗಳಿರುವುದು ವಿಶೇಷ.

ಹಸ್ತಪ್ರತಿಗಳ ಕಟ್ಟುಗಳನ್ನು ಬಟ್ಟೆಯಲ್ಲಿ ಸುತ್ತಿ ಅವುಗಳನ್ನು ಅಡುಗೆಮನೆಯ ನೆಲುವುಗಳಲ್ಲಿ ತೂಗಹಾಕುತ್ತಿದ್ದರು. ಇನ್ನು ಕೆಲವೊಮ್ಮೆ ಅಡುಗೆ ಮನೆಯ ಒಲೆಮೇಲಿನ ಅಟ್ಟದಲ್ಲಿ ಕಟ್ಟಿ ಕೂಡಿಡುತ್ತಿದ್ದರು. ಈ ಮೂಲಕ ಹಸ್ತಪ್ರತಿಗಳನ್ನು ಬೆಳ್ಳಿಮೀನು, ಗ್ರಂಥಹುಳುಗಳಂತಹ ಕ್ರಿಮಿಕೀಟಗಳಿಂದ ಸಂರಕ್ಷಿಸುತ್ತಿದ್ದರು. ಹಸ್ತಪ್ರತಿ ಗರಿಗಳು ಪೆಡಸಾಗಿ ಹರಿದು ಹೋಗುವ ಸಾಧ್ಯತೆಯಿದೆ ಎಂದು ಗೊತ್ತಾದಾಗ ಗರಿಗಳಿಗೆ ಬೇವಿನ ಎಣ್ಣೆಯನ್ನು ಸವರುತ್ತಿರಬೇಕು. ಮೆದುವಾದ ಬಟ್ಟೆಚೂರನ್ನು ಈ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಪ್ರಾಚ್ಯ ಹಸ್ತಪ್ರತಿ ಭಂಡಾರ, ಗೌತಮಿ ಗ್ರಂಥಾಲಯ, ಆಂಧ್ರ ಸಾಹಿತ್ಯ ಪರಿಷತ್ತು, ಆಂಧ್ರ ವಿಶ್ವವಿದ್ಯಾಲಯ, ಉಸ್ಮೇನಿಯಾ ವಿಶ್ವವಿದ್ಯಾಲಯ, ತೆಲುಗು ವಿಶ್ವವಿದ್ಯಾಲಯ ಆಂಧ್ರಪ್ರದೇಶದ ಪ್ರಮುಖ ಹಸ್ತಪ್ರತಿ ಭಂಡಾರಗಳಾಗಿವೆ.

ಕ್ರಿ.ಶ.೧೫ನೆಯ ಶತಮಾನದ ನಂತರ ಮರಾಠಿ ಹಸ್ತಪ್ರತಿಗಳ ಇತಿಹಾಸ ಪ್ರಾರಂಭವಾಗುತ್ತದೆ. ಅದಕ್ಕಿಂತ ಮುಂಚೆ ಕ್ರಿ.ಶ.೧೨ನೆಯ ಶತಮಾನದಿಂದಲೇ ಹಸ್ತಪ್ರತಿಗಳ ರಚನೆ-ಬರಹ ಆರಂಭಗೊಂಡಿರಬಹುದೆಂಬ

ಅಂಶ ತಿಳಿಯುತ್ತದೆ. ೧೨ನೆಯ ಶತಮಾನದಿಂದ ಹಸ್ತಪ್ರತಿಗಳ ಉತ್ಪಾದನಾಕಾರ್ಯ ಪ್ರಾರಂಭವಾಗಿದ್ದರು. ೧೫ ರಿಂದ ೧೯ನೆಯ ಶತಮಾನದವರೆಗೆ ಮುದ್ರಣ ಪ್ರತಿಗಳು ಪ್ರಕಟಗೊಳ್ಳುವವರೆಗೆ ಮರಾಠಿಯಲ್ಲಿ ಹಸ್ತಪ್ರತಿಗಳು ಬಳಕೆಗೊಂಡವು.

ವಿ.ಕೆ.ರಾಜವಾಡೆ, ವಾಸುದೇವಶಾಸ್ತ್ರೀ ಎಸ್.ಕೆ.ದೇವ ಡಿ.ವಿ.ಪೋತದಾರ್, ಡಾ.ಪಿಸುರ್ಲಂಕರ್, ಎಸ್.ಎಂ.ಕತ್ರೆ ಸುಕ್ತಂಕರ್ ಮುಂತಾದವರು ಮರಾಠಿ ಹಸ್ತಪ್ರತಿಗಳ ಸಂಗ್ರಹ ಹಾಗೂ ಅಧ್ಯಯನದಲ್ಲಿ ತೊಡಗಿದ ಪ್ರಮುಖರು. ಮಹಾರಾಷ್ಟ್ರದಲ್ಲಿ ೨೦ ಸರಕಾರಿ ಮತ್ತು ಖಾಸಗಿ ಒಡೆತನದಲ್ಲಿ ಸುಮಾರು ಹನ್ನೆರೆಡು ಸಾವಿರ ಹಸ್ತಪ್ರತಿಗಳನ್ನು ಸಂರಕ್ಷಿಸಲಾಗಿದೆ. ೨ ಸೂಚಿಸಂಪುಟಗಳು ಪ್ರಕಟವಾಗಿವೆ. ಇಲ್ಲಿ ಪ್ರಾಚೀನ ಕೃತಿ ಎಂದರೆ ಜ್ಞಾನೇಶ್ವರಿ (೧೩೩೭) ವಿಶೇಷವಾಗಿ ೧೯೧೮ರ ಹೊತ್ತಿಗೆ ಪುನಾದಲ್ಲಿ ಸ್ಥಾಪಿತವಾದ Oriental Research Instituteನಲ್ಲಿ ಹಿಂದೂ ಪರಂಪರೆಯ ಸಂಘಟನೆ ಆರಂಭವಾಯಿತು. ರಾಮಾಯಣ, ಮಹಾಭಾರತ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂಪಾದನೆ ಆರಂಭವಾಯಿತು. ೧೯೨೫ರಲ್ಲಿ ಭಂಡಾರ್ಕರ್ ಸಂಸ್ಥೆಯ ಮೂಲಕ ಬಾಂಬೆಯ ಗೌಡ ಸಾರಸ್ವತ ಬ್ರಾಹ್ಮಣರಾದ ವಿಷ್ಣು ಸೀತಾರಾಮ್ ಸುಕ್ತಂಕರ್ ಅವರು ಈ ಕಾರ್ಯ ಆರಂಭಿಸುತ್ತಾರೆ. ಅದಕ್ಕಾಗಿ ೨೩೫ ಹಸ್ತಪ್ರತಿಗಳನ್ನು ಸಂಗ್ರಹಿಸುತ್ತಾರೆ. ಅದರಲ್ಲಿ ೧೦೭ ದೇವನಾಗರಿ ಲಿಪಿಯಲ್ಲಿದ್ದವು. ಇದರಲ್ಲಿ ಅವರಿಗೆ ೭೦ ಹಸ್ತಪ್ರತಿಗಳನ್ನು ಮಾತ್ರ ಅಭ್ಯಸಿಸಲು ಸಾಧ್ಯವಾಯಿತು.

ಕರ್ನಲ್ ಮೆಕೆಂಜಿ ಆಗಮನದಿಂದ ಇಡೀ ಭಾರತದಲ್ಲೇ ಕೈಬರಹಗಳ ಇತಿಹಾಸದಲ್ಲಿ ಹೊಸಯುಗ ಆರಂಭವಾಯಿತು. ೧೭೮೬ ರಿಂದ ೧೮೧೧ರ ವರೆಗೆ ಇಡೀ ದಕ್ಷಿಣ ಭಾರತವನ್ನು ತನ್ನ ಕಾರ್ಯಕ್ಷೇತ್ರ ಮಾಡಿಕೊಂಡು ಸಾವಿರಾರು ಹಸ್ತಪ್ರತಿಗಳನ್ನು ಪ್ರಾಚ್ಯವಸ್ತುಗಳನ್ನು ಕಂದಾಯ ಸಂಬಂಧಿ ದಾಖಲೆಗಳನ್ನು ಸಂಗ್ರಹಿಸಿದನು. ವಿಶೇಷವೆಂದರೆ ಈತನಿಗೆ ಸಹಾಯಕರಾಗಿ ದೇಸಿಯ ವಿದ್ವಾಂಸರಾದ ೧) ಕವಲಿ ವೆಂಕಟ ಬೋರಯ್ಯ, ೨)ಧರ್ಮಯ ಪುರುಷೋತ್ತಮ ೩) ವೆಂಕಟರಾಮ್ ೪) ನಾರಾಯಣರಾವ್ ೫) ಬಾಬುರಾವ್ ೬) ಅಬ್ದುಲ್ ಆಜೂರ್ ಎಂಬ ಪಂಡಿತರು ಕಾರ್ಯನಿರ್ವಹಿಸಿದರು. ಇವರು ದ್ವಿಭಾಷಿಕರಾಗಿದ್ದರು. ೧೬೧೫ರಲ್ಲಿ ಸರ್‌ತಾಮಸ್ ರೋ ಎನ್ನುವವನು ಮೊಗಲ್ ದರ್ಬಾರಿಗೆ ಬಂದಾಗ ಪರ್ಶಿಯನ್ ಗೊತ್ತಿಲ್ಲದೆ ಪಜೀತಿಗೊಳಗಾಗುತ್ತಾನೆ. ಹೀಗೆ ಬ್ರಿಟಿಷರು ಇಲ್ಲಿ ಭಾಷೆ–ಸಂಸ್ಕೃತಿಯನ್ನು ಕಲಿಯುವ ಅನಿವಾರ್ಯತೆಗೆ ಒಳಗಾಗುತ್ತಾರೆ.

ಮದರಾಸು ಸರಕಾರದ ಪ್ರಾಚೀನ ಹಸ್ತಪ್ರತಿ ಭಂಡಾರದಲ್ಲಿ ೧೫೦ ಕನ್ನಡ ಹಸ್ತಪ್ರತಿಗಳಿದ್ದವು. ಸಿ.ಪಿ.ಬ್ರೌನ್ ಮೊದಲಾದವರ ಪ್ರಯತ್ನದಿಂದ ಇದು ೧೫೪೮ಂಕ್ಕೇರಿತು. ೧೯೬೭ರಲ್ಲಿ ಮದ್ರಾಸ್ ಪ್ರಾಚ್ಯಗಾರ ಇಲಾಖೆ ಮೆಕೆಂಜಿ ಸಂಗ್ರಹದ ಹೊರತಾಗಿ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಿಗೆ ವರ್ಗಾವಣೆಗೊಂಡಿತು. ೧೮೮೦ರಲ್ಲಿ ಮೈಸೂರು ಪ್ರಾಚ್ಯವಸ್ತು ಸಂಶೋಧನಾಲಯ ಸ್ಥಾಪನೆಗೊಂಡಿತು. ಬಿ.ಎಲ್.ರೈಸರವರು ಇಲ್ಲಿ ಅಧಿಕಾರಿಯಾಗಿದ್ದರು. ಶಾಸನ, ಹಸ್ತಪ್ರತಿಗಳಲ್ಲದೆ ಶಬ್ದಾನುಶಾಸನ, ಪಂಪಭಾರತದಂತಹ ಕನ್ನಡ ಕೃತಿಗಲನ್ನು ಸಂಪದಾನ ಮಾಡಿದರೆ ದೇಶೀಯ ವಿದ್ವಾಂಸರಾದ ಆರ್.ನರಸಿಂಹಚಾರ್ಯರು

ಹಸ್ತಪ್ರತಿಗಳನ್ನು ಆಧರಿಸಿ ಕರ್ಣಾಟಕ ಕವಿಚರಿತೆಯಂತ ಸಂಪುಟಗಳನ್ನು ಹೊರತಂದರು. ಈ ಸಂಪುಟಗಳು ಕನ್ನಡ ಸಾಹಿತ್ಯ ಸಂಸ್ಕೃತಿಸ ಮಹತ್ವವನ್ನು ತಿಳಿಸುವ ಕೃತಿಗಳಾಗಿವೆ.

ಭಾರತ ಸರಕಾರದ ಪ್ರವಾಸೋದ್ಯಮ ಮತ್ತು ಸಂಸ್ಕೃತಿ ಅಡಿಯಲ್ಲಿ ಬರುವ ನ್ಯಾಷನಲ್ ಮಿಷನ್ ಫಾರ್ ಮ್ಯಾನ್ಯುಸ್ಕ್ರಿಪ್ಟ್ಸ್ ನವದೆಹಲಿ ಇವರು ಭಾರತದಾದ್ಯಂತ ಚದುರಿಹೋಗಿರುವ ಮತ್ತು ವಿನಾಶದ ಅಂಚಿನಲ್ಲಿರುವ ಹಸ್ತಪ್ರತಿಗಳನ್ನು ಸಂಗ್ರಹ, ಸಂರಕ್ಷಣೆ, ದಾಖಲೀಕರಣ ಹಾಗೂ ಗಣಕೀಕರಣ ಪ್ರಕ್ರಿಯೆಗೆ ಒಳಪಡಿಸುತ್ತಿರುವುದು ಸಂತಸದ ವಿಚಾರವಾಗಿದೆ. ಅದಕ್ಕಾಗಿ ಕೇಂದ್ರಗಳನ್ನು ತೆರೆದಿದೆ. ಕರ್ನಾಟಕದಲ್ಲೂ ಕೂಡಾ ಸುಮಾರು ೫ ಹಸ್ತಪ್ರತಿ ಸಂಪನ್ಮೂಲ ಕೇಂದ್ರಗಳು ಮತ್ತು ೬ ಹಸ್ತಪ್ರತಿ ಸಂರಕ್ಷಣಾ ಕೇಂದ್ರಗಳನ್ನು ತೆರೆದು ಲಕ್ಷಾಂತರ ಹಸ್ತಪ್ರತಿಗಳನ್ನು ಸಂರಕ್ಷಿಸಲು ಪ್ರೋತ್ಸಾಹ ನೀಡುತ್ತಿದೆ. ಡಾ.ವೀರೇಶ ಬಡಿಗೇರ ಅವರ ನೇತೃತ್ವದಲ್ಲಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸಂಪನ್ಮೂಲ ಸಂರಕ್ಷಣಾ ಕೇಂದ್ರವು ಉತ್ತರ ಕರ್ನಾಟಕದ ೧೧ ಜಿಲ್ಲೆಗಳಲ್ಲಿ ಸಂರಕ್ಷಣಾ ಕಾರ್ಯವನ್ನು ಕೈಗೊಂಡು ಸುಮಾರು ೧,೨೦,೦೦೦ ಹಸ್ತಪ್ರತಿಗಳನ್ನು ಸಂರಕ್ಷಣೆ ಮಾಡಿರುವುದು ಗಮನಾರ್ಹ ಸಂಗತಿಯಾಗಿದೆ. ಇದು ಅಲ್ಲದೇ ಕರ್ನಾಟಕದಲ್ಲಿ ಕನ್ನಡ ವಿಶ್ವವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ, ಧಾರವಾಡ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾಲಯ ಅಲ್ಲದೇ ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು ಶಿವಯೋಗ ಮಂದಿರ ಬದಾಮಿ ರುದ್ರಾಕ್ಷಿಮಠ ಬೆಳಗಾವಿ, ಹೊಸಪೇಟೆ ಕೊಟ್ಟೂರುಸ್ವಾಮಿ ಮಠ, ಗದಗಿನ ತೋಂಟದಾರ್ಯ ಮಠ ಹಸ್ತಪ್ರತಿಗಳನ್ನು ಸಂರಕ್ಷಣೆ ಮಾಡಿರುವುದು ಗಮನಿಸುವಂತದ್ದು.

ಒಟ್ಟು ಆಧುನಿಕ ಪೂರ್ವ ಹಾಗೂ ಆಧುನಿಕೋತ್ತರ ಭಾರತದಲ್ಲಿ ನಡೆದ ಗ್ರಂಥ ಸಂರಕ್ಷಣೆ ಸಂವರ್ಧನೆಯ ನೆಲೆಗಳ ಕುರಿತು ಕನ್ನಡ ಹಸ್ತಪ್ರತಿಗಳ ಮುಖೇನ ಅಭ್ಯಾಸ ಮಾಡುವುದು ಈ ಅಧ್ಯಯನದ ಮುಖ್ಯ ಕಾಳಜಿಯಾಗಿದೆ.

**ಅಡಿಟಿಪ್ಪಣಿಗಳು**

೧. ವೀರೇಶ ಬಡಿಗೇರ (ಲೇ)ಭಾರತದಲ್ಲಿ ಹಸ್ತಪ್ರತಿಗಳ ಅಧ್ಯಯನ ಪರಂಪರೆ(ಹಸ್ತಪ್ರತಿ ಅಧ್ಯಯನ (ಸಂ), ಡಾ.ಎಸ್.ಎಸ್.ಅಂಗಡಿ, ಸಂ.೨, ಸಂ.೧-೨ ಡಿಸೆಂಬರ್ ೨೦೦೯-೧೦) ಪು.೩೬ ರಿಂದ ೪೨, ೨೦೧೦

೨. ವೀರೇಶ ಬಡಿಗೇರ(ಸಂ), ಹಸ್ತಪ್ರತಿ ಅಧ್ಯಯನ ಸಂ.೨, ಸಂ.೨, ೨೦೦೫



ಸಂಸ್ಕೃತಿ ಕುರಿತು ಕಾಲದಿಂದ ಕಾಲಕ್ಕೆ ಚರ್ಚೆಗಳು ನಡೆಯುತ್ತಾ ಬಂದಿವೆ. ಸಂಸ್ಕೃತಿ ಕುರಿತು ಹೆಚ್ಚಿನ ವಿದ್ವಾಂಸರು ವಸಾಹತುಶಾಹಿ ಹಿನ್ನಲೆಯಲ್ಲಿ ಅಕ್ಷರ ಕೇಂದ್ರಿತ ವೈದಿಕ ಸಮುದಾಯಗಳ ವ್ಯಕ್ತಿಗಳ ಗುಣಸ್ವಭಾವಗಳನ್ನು ಆಧಾರವಾಗಿಟ್ಟುಕೊಂಡು ವಿಶ್ಲೇಷಿಸಲಾಗಿದೆ. ಸಂಸ್ಕೃತಿ ಎನ್ನುವುದು ವಿದ್ಯಾವಂತರಾಗಿಬೇಕು, ಒಳ್ಳೆಯ ಮನೆತನದಿಂದ ಬಂದಿರಬೇಕು. ಒಳ್ಳೆಯ ಸಂಸ್ಕಾರ ಹೊಂದಿದವರು. ಸುಸಂಸ್ಕೃತರು ಇಂತಹ ಮಾನದಂಡಗಳನ್ನು ಒಳಗೊಂಡ ವ್ಯಾಖ್ಯಾನಗಳು ಬಂದಿವೆ. ಕನ್ನಡ ಭಾಷಿಕರನ್ನು ಆಧಾರವಾಗಿಟ್ಟುಕೊಂಡು ಕನ್ನಡ – ಕನ್ನಡಿಗ – ಕರ್ನಾಟಕ ಎಂಬ ಕಲ್ಪನೆಯಡಿಯಲ್ಲಿ ಶ್ರಮಿಕರ ಜನಸಾಮಾನ್ಯರ ಸಮುದಾಯದ ಒಟ್ಟಾರೆ ಬದುಕನ್ನು ಅವರ ಜೀವನ ಕ್ರಮವನ್ನು ಕನ್ನಡ ಸಂಸ್ಕೃತಿ ಎಂದು ಗ್ರಹಿಸಿದ್ದೇನೆ.

ಜನಸಾಮಾನ್ಯರ ಸಂಸ್ಕೃತಿಯನ್ನು ಕುರಿತು ವಿಚಾರ ಮಾಡುವುದು ಅತ್ಯಂತ ಮಹತ್ವದ ವಿಷಯವಾಗಿದೆ. ನಮ್ಮ ಜನರ ಜೀವನ ಕ್ರಮ ಕಾಲದಿಂದ ಕಾಲಕ್ಕೆ ವಿಕಾಸ ಹೊಂದುತ್ತಾ ಬರುತ್ತಿದೆ. ಹೊಸದೊಂದು ರೀತಿಯಲ್ಲಿ ಜನಸಾಮಾನ್ಯರ ಸಂಸ್ಕೃತಿ ಕುರಿತು ಅಧ್ಯಯನ ಮಾಡುವುದು ಸೂಕ್ತವಾಗಿದೆ. ವಸಾಹತುಶಾಹಿ ಪ್ರಭಾವದಿಂದ ಜನಜೀವನ ಆಚಾರ – ವಿಚಾರಗಳು ಬದಲಾವಣೆಗೆ ಒಳಪಡುತ್ತಿವೆ. ಹೆಚ್ಚು ಅಕ್ಷರ ಪ್ರಧಾನವಾದ ನೆಲೆಯಲ್ಲಿಯೆ ಸಂಸ್ಕೃತಿಯ ವ್ಯಾಖ್ಯಾನಗಳು ಬರುತ್ತಿದ್ದು ಕವಿ/ಕೃತಿಯೇ ಮುಖ್ಯವಾಗಿದ್ದು ಕೃತಿಯನ್ನು ಪ್ರತಿಮಾಡುವ ಲಿಪಿಕಾರ, ಕುಶಲಕರ್ಮಿ, ಕೃಷಿಕ, ಪಾಮರರಂತಹ ಬಹುಸಂಖ್ಯೆಯ ಜನಸಮುದಾಯಗಳ ಮೇಲೆ ಗಮನಹರಿಸಬೇಕಾಗಿದೆ. ಸಂಸ್ಕೃತಿ ನಿರ್ಮಾಣದಲ್ಲಿ ಕವಿ ಮತ್ತು ಕೃತಿಯನ್ನು ಅಕ್ಷರಕೇಂದ್ರಿತ ಸಂಸ್ಕೃತಿಯನ್ನು ಲಿಪಿಕಾರರು, ಕುಶಲಕರ್ಮಿಗಳಾದ ಬಡಿಗ, ಕಮ್ಮಾರ, ಲೋಹಗಾರ ವಸ್ತ್ರದ, ಓಲೆಯವ, ಚಿತ್ರಗಾರ, ಬರಪಗಾರರಂತಹ ಹಲವು ಸಮುದಾಯಗಳು ಸಾಲಿಮಠ, ಓಲೆಮಠ, ಟೀಕಿನ ಮಠಗಳಂತಹ ಸಂಸ್ಥೆಗಳು ಕನ್ನಡ ಸಂಸ್ಕೃತಿಗೆ ಮಹತ್ವದ ಕಾಣಿಕೆಯನ್ನು ನೀಡುತ್ತಾ ಬಂದಿದ್ದಾರೆ. ಕನ್ನಡ ಹಸ್ತಪ್ರತಿ ಸಂಸ್ಕೃತಿ ಎಂದರೆ ಇವರೆಲ್ಲರ ಸಂಸ್ಕೃತಿಯೇ ಆಗಿದೆ.

ಸಂಸ್ಕೃತಿ ಎಂದರೆ ಯವುದು? ಯಾವಾಗ ಹುಟ್ಟಿಕೊಂಡಿತು? ಸಂಸ್ಕೃತಿ ಪ್ರಕೃತ್ತಿದತ್ತವೇ? ಅಥವಾ ಮನುಷ್ಯ ನಿರ್ಮಿತವೂ? ಇತರೆ ಜೀವಿಗಳಿಗಿಂತ ಮಾನವ ಜೀವನ ಕ್ರಮ ಹೇಗೆ ಭಿನ್ನವಾಗಿ ಮತ್ತು ವೈಶಿಷ್ಟ್ಯ ಪೂರ್ಣವೊ? ಕನ್ನಡ ಸಂಸ್ಕೃತಿ ಎನ್ನುವುದು ಕನ್ನಡ ಭಾಷಿಕರೋ, ಕನ್ನಡಿಗರೋ, ಕರ್ನಾಟಕ ಪ್ರದೇಶವೋ

ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುವುದು ಸಹಜ. ಎಲಿಯಟ್ ಎಂಬ ಸಂಸ್ಕೃತಿ ಚಿಂತಕನು "ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಸಮಗ್ರ ಜೀವನ ವಿಧಾನವೇ ಸಂಸ್ಕೃತಿ" ಎಂದು ಹೇಳಿದ್ದಾನೆ. ಕನ್ನಡ ಸಂಸ್ಕೃತಿ ಎನ್ನುವುದು ಕನ್ನಡ, ಕರ್ನಾಟಕ, ಕನ್ನಡಿಗರ ಸಮಗ್ರ ಜೀವನ ಪದ್ಧತಿಯೆ ಆಗಿದೆ. ಜನಸಾಮಾನ್ಯರು ಎಂದು ಕರೆಯಲಾಗುವ ಶ್ರಮಿಕ ಸಮುದಾಯಗಳು, ಲಿಪಿಕಾರರು, ಕುಶಲಕರ್ಮಿಗಳು, ಕೃಷಿಕರು ಅಕ್ಷರ ಕೇಂದ್ರದಾಚೆಯಿರುವ ಪಾಮರರಂತಹ ಸಮುದಾಯಗಳು ಇವರೆಲ್ಲರೂ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಬಿಂಬಿಸುವಂತಹ ಜೀವನ ಕ್ರಮವನ್ನು ಹೊಂದಿದ್ದಾರೆ.

ಸಂಸ್ಕೃತಿ ಎಂಬುದು ನಮ್ಮ ಧರ್ಮವನ್ನು ದೇಶವನ್ನು ಒಂದು ಸಾಂಕೇತಿಕ ಗುರುತಿನ ರೀತಿಯಲ್ಲಿ ಅಲ್ಲದೇ ಪವಿತ್ರವೂ, ಪ್ರಾಚೀನವೂ ಆದುದು ಎಂಬ ಭಾವನೆಯಿಂದ ಅನ್ಯರ ಆಕ್ರಮಣಗಳಿಂದ ರಕ್ಷಿಸಿಕೊಳ್ಳಬೇಕೆಂಬ, ಮನೋಭಾವನೆಯಿಂದ ನೋಡುತ್ತಾ ಬಂದಿದ್ದೇವೆ. ಸಂಸ್ಕೃತಿ ಎಂಬ ಪರಿಕಲ್ಪನೆ ಹುಟ್ಟಿಕೊಂಡದ್ದು ೧೯ನೆಯ ಶತಮಾನದಲ್ಲಿ. ಅದಕ್ಕೂ ಮುಂಚೆ ಸಂಸ್ಕೃತಿ ಇರಲಿಲ್ಲವೆ ಎಂಬ ಪ್ರಶ್ನೆ ಹುಟ್ಟುವುದು ಸಹಜ. ಸಂಸ್ಕೃತಿ ಎಂದರೇನು? ನಮ್ಮ ಹಿರಿಕರು ಸಂಸ್ಕೃತಿಯನ್ನು ವ್ಯಾಖ್ಯಾನಿಸಿದ ರೀತಿ ಯಾವುದು? ಪಾವಿತ್ರತ್ಯೆ, ಸಂಸ್ಕಾರ ಶುದ್ಧ ಚಾರಿತ್ರ್ಯತೆ, ಒಳ್ಳೆಯ ನಡುವಳಿಕೆ, ಸದುವಿನಯ ಸದಾಚಾರದ ರೀತಿಯನ್ನು ನೋಡುವ ಕ್ರಮ ಎಷ್ಟು ಸಮಂಜಸ. ಸಂಸ್ಕೃತಿಯೆಂಬುದು ಬರೀ ಸುಸಂಸ್ಕೃತರನ್ನು ಮಾತ್ರ ಒಳಗೊಂಡಿರುವುದೇ "ಹಿರೀಕರು ಮಾಡಿದ ಪವಿತ್ರ ಆದರ್ಶ ಮೌಲ್ಯಗಳ ಸಾಧನೆ ಎಂಬ ಭಾವನಾತ್ಮಕ ಮತ್ತು ಏಕರೂಪಿ ಅರ್ಥದಲ್ಲಿ ಗ್ರಹಿಸಲಾಗಿದೆ.[೧]

ಧರ್ಮದ ಹೆಸರಿನಲ್ಲಿ ಜಾತಿಯ ಹೆಸರಿನಲ್ಲಿ ದೇಶವಾಚಕವಾಗಿ ಭಾಷಾವಾಚಕವಾಗಿ ಮತ್ತು ನಗರ-ಗ್ರಾಮೀಣ ನೆಲೆಯಲ್ಲಿ ಸಂಸ್ಕೃತಿಯನ್ನು ಹೆಸರಿಸುತ್ತಾರೆ. ಸಂಸ್ಕೃತಿಗೆ ಪರ್ಯಾಯವಾಗಿ ಪ್ರತಿಸಂಸ್ಕೃತಿ-ಉಪಸಂಸ್ಕೃತಿ ಎಂಬ ಸಂಸ್ಕೃತಿಯನ್ನು ಕಟ್ಟಿಕೊಳ್ಳಲಾಗಿದೆ. ಕುವೆಂಪುರವರ "ಸಂಸ್ಕೃತಿ ಕ್ರಾಂತಿ" 'ಸಿದ್ಧಲಿಂಗಯ್ಯನವರ ಹೊಲೆಮಾದಿಗರ ಹಾಡು ಹಿನ್ನುಡಿಯಲ್ಲಿ "ಸ್ಥಗಿತ ಸಂಸ್ಕೃತಿ" ಕೃಷಿ ಸಂಸ್ಕೃತಿ, ಮುಸ್ತಕ ಸಂಸ್ಕೃತಿ, ಸಿನಿಮಾ ಸಂಸ್ಕೃತಿ, ಯುದ್ಧ ಸಂಸ್ಕೃತಿ, ಹಿಪ್ಪಿ ಸಂಸ್ಕೃತಿ, ಬಾಂಬ್ ಸಂಸ್ಕೃತಿ ಹೀಗೆ ಅನೇಕ ರೀತಿಯಲ್ಲಿ ಸಂಸ್ಕೃತಿಯನ್ನು ಗ್ರಹಿಸುವ ಮಾದರಿಗಳು ಹುಟ್ಟಿಕೊಂಡಿರುವುದು ಗಮನಾರ್ಹ.

ಶ್ರಮ ಪ್ರಧಾನವಾದ ಲಿಪಿಕಾರರ ಜೀವನ ಕ್ರಮವಾಗಿರಬಹುದು. ಹಾಡುಗಾರರು, ತತ್ವಪದಕಾರರು, ವಚನಕಾರರು ಗ್ರಂಥಗಳನ್ನು ಪಠಣೆ ಮಾಡುವವರು. ಅಕ್ಷರಜ್ಞಾನವಿಲ್ಲದ ಪಾಮರ ವರ್ಗದವರು ಜ್ಞಾನವನ್ನು ಮೌಖಿಕ ನೆಲೆಗಟ್ಟಿನಲ್ಲಿ ಮುಂದುವರಿಸಿಕೊಂಡು ಬಂದ ಒಂದು ದೊಡ್ಡ ಸಮುದಾಯದ ಜೀವನ ಕ್ರಮವಿದೆ. ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಪಂಡಿತರಿಗಿಂತ ಪಾಮರರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಪಂಡಿತ ಸಾಹಿತ್ಯದ ನೆಲೆಗಳಿಂದ ಕನ್ನಡ ಸಾಹಿತ್ಯ ಪ್ರೇರಣೆ ಪಡೆದಿದ್ದರೂ ಅದು ಅಂತಿಮವಾಗಿ ಆಶ್ರಯಿಸುವುದು ಮತ್ತು ಬೆಳೆದಿದ್ದು ಇಂಥ ಪಾಮರರ ಒಡಲಿನಿಂದ ಎಂಬುದು ಗಮನಾರ್ಹ.[೨] ಪಾಮರರು ಜ್ಞಾನಕ್ಕೆ ಅನರ್ಹರು ಚಾಕರಿಗೆ ಮಾತ್ರ ಮೀಸಲು ಎಂದು ಆರೋಪಿಸಲಾಗಿತ್ತು. ಆದರೆ ಅವರು ಆತ್ಮವಿಶ್ವಾಸಿಯಾಗಿ ಜ್ಞಾನಿಯಾಗಿ ತನ್ನ ಸಂಕಟ ಮತ್ತು ಅಭದ್ರ ಸ್ಥಿತಿಯೊಳಗಿಂದಲೇ

ಪರ್ಯಾಯ ಜ್ಞಾನದ ನೆಲೆಗಳನ್ನು ಶೋಧಿಸಿಕೊಟ್ಟ ಪ್ರಬುದ್ಧ ಪಾಮರರು ಎಂಬುದನ್ನು ಕನ್ನಡ ಸಂಸ್ಕೃತಿ ಸಂದರ್ಭದಲ್ಲಿ ವಿಶೇಷವಾಗಿ ಗ್ರಹಿಸಲಾಗಿದೆ.

ಅನಕ್ಷರಸ್ಥರ ಜೀವನ ಕ್ರಮಗಳನ್ನು ಶ್ರೇಷ್ಠ-ಕನಿಷ್ಠದ ಪಾತಳಿಯಲ್ಲಿಯೂ ಅಕ್ಷರಸ್ಥರ ಜೀವನ ಕ್ರಮಗಳನ್ನು ಶ್ರೇಷ್ಠ ಸಂಸ್ಕೃತಿಯ ಮೌಲ್ಯಗಳಾಗಿಯೂ ವ್ಯಾಖ್ಯಾನಿಸುತ್ತಾ ಬರಲಾಗಿದೆ. ಪಾಮರರು ಕನ್ನಡ ಸಂಸ್ಕೃತಿಯ ಪ್ರಮುಖ ವಾರಸುದಾರರು. ಅವರ ಮನೋವೈಜ್ಞಾನಿಕ ತಲ್ಲಣಗಳು ಪ್ರೀತಿ, ವಾತ್ಸಲ್ಯ, ಗೌರವ, ಮಮತೆಯಿಂದ ಸಮುದಾಯದ ಸಮಾಜದ ಜನಗಳಿಗೆ ಗ್ರಂಥಗಳ ವಾಚನಗಳ ಮೂಲಕ ಹಾಡಿನ ಮೂಲಕ ಸಭೆಯಲ್ಲಿ ಗೌರವದಿಂದ ವಂದಿಸಿ ಹೇಳುವ ಅವರ ವಿಚಾರಧಾರೆಗಳು ಪಂಡಿತರನ್ನು, 'ಜನಸಾಮಾನ್ಯರನ್ನು ಒಳಗೊಂಡಂತೆ ಎಲ್ಲರ ಮನಗಳನ್ನು' ತಲುಪುತ್ತಿದ್ದವು.

ಡಾ. ವೀರೇಶ ಬಡಿಗೇರ ಅವರು ಗುರುತಿಸುವಂತೆ "ಘನಪಂಡಿತರನ್ನುಳಿದ ಬಹುಸಂಖ್ಯಾತ ಜನ ಈ ಪಾಮರರು ಅನಕ್ಷರಸ್ಥರಿದ್ದರು ಆದರೆ ಅವರು ಅಜ್ಞಾನಿಗಳಾಗಿರಲಿಲ್ಲ. ಅಸಂಸ್ಕೃತರಂತೂ ಆಗಿರಲೇ ಇಲ್ಲ. ಸುಸಂಸ್ಕೃತರಾಗಿದ್ದರು. ಅಕ್ಷರ ಪ್ರಧಾನ ಪಾತಳಿಗಿಂತ ಮಿಗಿಲಾದ ಹೃದಯ ಸಂಸ್ಕಾರವನ್ನು ಹೊಂದಿದ ನಿಷ್ಕಲ್ಮಷ ಮನಸ್ಸುಳ್ಳವರೂ ಕ್ರಿಯಾಶೀಲ ಗುಣವುಳ್ಳವರು ಆಗಿದ್ದರು."[3] ಮನಸ್ಸುಗಳ ಆಳದಲ್ಲಿ ಆಧ್ಯಾತ್ಮವಾಗಿ ಕದಲುವ ಪ್ರಕೃತಿ ಮತ್ತು ಅದರ ಸಹಜ ತತ್ವಗಳೇ ಭೌತಿಕವಾದ ತಾತ್ವಿಕ ತಿರುಳಿನ ಮನಸ್ಥಿತಿ ಹೊಂದಿದವರಾಗಿದ್ದರು ಲಕ್ಷ್ಮಿಪತಿ ಕೋಲಾರ ಅವರು "ಕಾಲುದಾರಿ" ಎಂಬ ಕೃತಿಯಲ್ಲಿ ಬದುಕಿನ ತಾತ್ವಿಕತೆಯ ಮಹಾದ್ವಂದ್ವಗಳನ್ನು ಕತ್ತಲೊಳಗಿನ ಬೆಳಕನ್ನು ಲೌಕಿಕತೆಯೊಳಗಿನ ಅಲೌಕಿಕತೆಯನ್ನು ಒಡನಾಟ ಮತ್ತು ಮಾನಸಿಕ ಸಂಬಂಧಗಳಿಂದಲೇ ಪ್ರಭಾವ, ಅವಿನಾಭಾವ ಸಂಬಂಧ ಹೆಚ್ಚು ಹೆಚ್ಚು ಮಾನಸಿಕವಾದಷ್ಟು ನನ್ನ ಅನುಲಕ್ಷಣದ ನಡುವಳಿಕೆ, ನಿಲುವುಗಳ ನಿಷ್ಠುರ ಆತ್ಮಾವಲೋಕವೂ ಹೆಚ್ಚಾಯಿತು. ವೈದಿಕಕ್ಕಿಂತಲೂ ಪ್ರಾಚೀನವಾದ ನಿಸರ್ಗ ಸಹಜ ಬದುಕಿನ ಶೈಲಿಯನ್ನು ತಾತ್ವಿಕ ರೂಪದಲ್ಲಿ ಒಳಗೊಂಡಂತಿರುವ ಅವೈದಿಕ ಭೌತವಾದೀ ಸಂಸ್ಕೃತಿಯ ಆಳಗಳಿಗೆ ಎಳೆದೊಯ್ದಿತು ಎಂದು ಹೇಳುತ್ತಾರೆ.

ಮಾನವಶಾಸ್ತ್ರಜ್ಞರು ಸಂಸ್ಕೃತಿ ಎಂದರೆ ಸಮುದಾಯ ಒಂದರ ಸಮಗ್ರ ಜೀವನ ವಿಧಾನಗಳ ಮೊತ್ತ. ಆ ಸಮುದಾಯದ ಉಡುವ ಬಟ್ಟೆ, ಮಾಡುವ ಊಟ, ಆಡುವ ಮಾತು, ಆಚರಣೆ, ನಂಬಿಕೆ, ಹಬ್ಬ-ಹರಿದಿನಗಳು ಆಚಾರ-ವಿಚಾರಗಳು ಹೀಗೆ ಬಹುಮುಖಿ ನೆಲೆಯಲ್ಲಿ ಸಂಸ್ಕೃತಿಯನ್ನು ವ್ಯಾಖ್ಯಾನಿಸಲಾಗಿದೆ. ಇದು ಸಮುದಾಯ ಒಂದರ ಆಡುಭಾಷೆ, ಹುಟ್ಟಿದ ಜಾತಿ, ಅನುಸರಿಸಿದ ಧರ್ಮವನ್ನು ವಾಸಿಸುವ ಪ್ರದೇಶವನ್ನು ಒಳಗೊಂಡಿದೆ. ಮನುಷ್ಯನ ಭಾವನೆಗಳನ್ನು ವರ್ತನೆಯನ್ನು ಆಧಾರವಾಗಿ ಇಟ್ಟುಕೊಂಡು ರಚಿಸಿಕೊಂಡ ಸಂಸ್ಕೃತಿ ವ್ಯಾಖ್ಯಾನವಾಗಿದೆ. **ಹರ್‌ಸ್ಕೊವಿಟ್ಸ್** ಎಂಬ ಮಾನವಶಾಸ್ತ್ರಜ್ಞ "ಸಂಸ್ಕೃತಿಯು ಏಕಕಾಲದಲ್ಲಿ ಸ್ಥಗಿತತೆ ಮತ್ತು ಚಲನಶೀಲತೆಯನ್ನು ಪಡೆದಿರುತ್ತದೆ" ಎಂದು ಅಭಿಪ್ರಾಯಪಡುತ್ತಾನೆ. ಸಂಸ್ಕೃತಿಗೆ ಪ್ರಾಚೀನತೆಯನ್ನು ಉಳಿಸಿಕೊಂಡು ಹೊಸತನವನ್ನು ರೂಢಿಸಿಕೊಳ್ಳುವುದು ಮುಖ್ಯ ಲಕ್ಷಣವಾಗಿದೆ. "ಸಂಸ್ಕೃತಿ ಎನ್ನುವುದು ಜೀವನ ವಿಧಾನ: ಇದು(ಕಲಿಕೆ) ಕಲಿಯುವುದರಿಂದ ಬರುತ್ತದೆಯೆಂಬುದು ಬಹುಪಾಲು ಮಾನವ ಶಾಸ್ತ್ರಜ್ಞರ ಅಭಿಪ್ರಾಯ ಅಂತಾನೆ ಅನುವಂಶಿಕವಾಗಿ ಬರೆದ ವ್ಯಕ್ತಿಯೊಬ್ಬ ಬೆಳೆಯುವ

ವಾತಾವರಣದಿಂದ ಅವನ ಸಂಸ್ಕೃತಿಯ ರೂಪುಗೊಳ್ಳುತ್ತದೆ. ವಾಸ್ತವಾಗಿ ತಾನು ಬದುಕುತ್ತಿರುವ ಭಾಗವೇ ಸಂಸ್ಕೃತಿಯೇ ಅವನ ಸಂಸ್ಕೃತಿಯೂ ಆಗಿರುತ್ತದೆ."[೪]

ವಸಾಹತುಶಾಹಿ ಸಂದರ್ಭದಲ್ಲಿ ಬ್ರಿಟೀಷ್ ಮಾದರಿ ಶಿಕ್ಷಣದ ಪ್ರಭಾವದಿಂದ ವೈದಿಕರನ್ನು ಹೊರತುಪಡಿಸಿ ಉಳಿದ ಜನಾಂಗಗಳಿಗೆ ದೀರ್ಘಸಂಸ್ಕೃತಿ ಇಲ್ಲ ಎನ್ನುವ ಪಲಕಲ್ಪನೆ ಪಾಮರರನ್ನು ಚಾರಿತ್ರ್ಯ ಹೀನಗೊಳಿಸಿತು. ತನಗಿಂತ ಶ್ರೇಷ್ಠವೆಂದು ಬಿಂಬಿತವಾದ ವೈದಿಕಶಾಹಿ ಸಂಸ್ಕೃತಿಯ ನೆಲೆಗಟ್ಟಿನಲ್ಲಿಯೇ ಆದರ ಆಧೀನಕೊಳ್ಳಪಟ್ಟು ತಮ್ಮತನವನ್ನು ಕಳೆದುಕೊಳ್ಳುವಂತ್ತಾಯಿತು. ಲಿಪಿಕಾರ, ಹಾಡುಗಾರ, ಓದುಗ, ಕೇಳುಗರಂತ ಸಾಹಿತ್ಯ ಸೇವಕರು ಮತ್ತು ಆಶ್ವಾದಕರು ವೈದಿಕಶಾಹಿಯ ಸಂಸ್ಕೃತಿಯ ಅಧೀನಕ್ಕೆ ಒಳಪಟ್ಟು "ವಸಾಹತುಶಾಹಿ ತನ್ನ ಅಧೀನ ಸಂಸ್ಕೃತಿಗೆ ಇತಿಹಾಸ ಮತ್ತು ಮೂಲ ಸಂಸ್ಕೃತಿಗಳಿದ್ದವೆಂಬುದನ್ನೇ ಅಲ್ಲಗಳೆಯುತ್ತವೆ. 'ದೇಶಿಯರನ್ನು' ನಿರ್ಭರತೆಯ ಮೂರ್ತರೂಪವೆಂಬಂತೆ ಚಿತ್ರಿಸುತ್ತಾ ಕ್ರಮವಾಗಿ ಅವರಿಗೆ ಸಮಾಜದಲ್ಲಿ ಇಂದೇ ಅಲ್ಲದೆ ಹಿಂದೆಂದೂ ಮಾನವೀಯ ಮೌಲ್ಯಗಳ ಅರಿವು ಇರಲಿಲ್ಲವೆಂಬುದನ್ನು ದಾಖಲಿಸುತ್ತದೆ. ಇಷ್ಟೆ ಅಲ್ಲ ಅವರಿಗೆ ಸೌಂದರ್ಯಪ್ರಜ್ಞೆ, ನೈತಿಕತೆ ಗೊತ್ತೆಯಿರಲಿಲ್ಲ ಅಲ್ಲದೇ ಪ್ರೀತಿ ವಿಶ್ವಾಸದ ಗಂಧಗಳಿಲ್ಲದೇ ಇಡೀ ಬದುಕನ್ನು ಪ್ರಾಣಿಗಳಂತೆ ಕಳೆಯುತ್ತಿದರು. ಆದರೆ ಯಾವುದೇ ಜವಾಬ್ದಾರಿ ಬದುಕು ರೀತಿ-ನೀತಿಗಳೇ ತಿಳಿದಿರಲಿಲ್ಲ ಎಂದು ಹೇಳಲಾಗುತ್ತದೆ.

ಅಕ್ಷರ ಸಂಸ್ಕೃತಿ ತನ್ನ ಅಧೀನ ಸಂಸ್ಕೃತಿಯ ಸಾಂಸ್ಕೃತಿಕ ವಿನಾಶವನ್ನು ವ್ಯವಸ್ಥಿತ ರೀತಿಯಲ್ಲಿ ಹೆಣೆಯುತ್ತ ಅಧೀನ ಸಂಸ್ಕೃತಿ ಅಕ್ಷರಕೇಂದ್ರಿತದ ಆಚೆಯ ಸಂಸ್ಕೃತಿಗಳ ನಂಬಿಕೆಗಳು ಅನಧಿಕೃತವೆಂದೂ ಪೊಳ್ಳೆಂದು ಹೇಳುವದರ ಜೊತೆಗೆ, ಅಂಥ ಜನರನ್ನು ಸಂವೇದನಾರಹಿತರೂ ಅಸಂಸ್ಕೃತರೂ ಇತಿಹಾಸವಿಲ್ಲದ್ದವರೂ ದೈಹಿಕ ಸ್ಥಿತಿಯಿಂದ ಹಿಡಿದು ಮಾನಸಿಕ ಹಾಗೂ ಬೌದ್ಧಿಕ ಸ್ವರೂಪದವರೆಗೂ ಕೀಳಮಟ್ಟದವರೂ ಎಂದು ಆಪಾದಿಸುತ್ತಾ ಬರಲಾಗಿದೆ. ಧರ್ಮ, ದೇವರ ಹೆಸರಿನಲ್ಲಿ ಅಧೀನ ಸಂಸ್ಕೃತಿಗಳೆಂದು ಹೇಳುವುದರ ಜೊತೆಗೆ ಮತ್ತಷ್ಟು ಕೀಳಿರಿಮೆಯನ್ನು ಹೆಚ್ಚಿಸಿ ಅವು ಸಂಪನ್ನ ಸಂಸ್ಕೃತಿಗಳಾಗಿದ್ದರೂ ಅಕ್ಷರ ಸಂಸ್ಕೃತಿಗೆ ತನ್ನನ್ನು ತಾನು ಅಧೀನಗೊಳಿಸುವಂತೆ ಪ್ರೇರಪಿಸಲಾಯಿತು. ಚರಿತ್ರೆ ಯುದ್ಧಕ್ಕೂ ಈ ರೀತಿಯ ವ್ಯಾಖ್ಯಾನಗಳು ಸಂಸ್ಕೃತಿಯನ್ನು ಸೀಮಿತವಾಗಿ ವೈದಿಕಶಾಹಿ ಮತ್ತು ಅಕ್ಷರ ಜ್ಞಾನವುಳ್ಳವರನ್ನು ಮಾತ್ರ ಸುಸಂಸ್ಕೃತವಂತರೆಂದೂ ಹೇಳುವುದರೊಂದಿಗೆ ಜನಸಾಮಾನ್ಯರ ಸಂಸ್ಕೃತಿಯನ್ನು ಯಾವುದೇ ಬೆಲೆಯಿಲ್ಲದಂತೆ ಕಾಣುತ್ತಾ ಬರಲಾಗಿದೆ.

ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಪಂಡಿತರಿಗಿಂತ ಪಾಮರರೇ ಹೆಚ್ಚು ಚಲನಶೀಲತೆಯನ್ನು ಸೃಜನಾತ್ಮಕತೆಯನ್ನು ಉಳಿಸಿಕೊಂಡು ಬೆಳಸಿಕೊಂಡು ಬಂದಿದ್ದಾರೆ. ಯಾವುದೇ ಒಂದು ಭಾಷೆ ಅಥವಾ ಸಾಹಿತ್ಯ ಅದು ಎಷ್ಟು ಸಮಾಜಮುಖಿ ಎನ್ನುವುದರ ಮೇಲೆ ಅದರ ಉಳಿವಿನ ಪ್ರಶ್ನೆ ಅಡಗಿರುತ್ತದೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯ ಸಂಸ್ಕೃತಿಗಳು ಸ್ಥಿರ ಸಮಾಜದ ಉತ್ಪನ್ನಗಳಲ್ಲ ಸ್ಥಿತ್ಯಂತರ ಸಮಾಜದ ಉತ್ಪನ್ನಗಳು ಇದಕ್ಕೆ ಅಕ್ಷರ ಪಠ್ಯದ ಸಂವಹನಕ್ಕಿಂತ ಧ್ವನಿ ಸಂವಹನಿತ ಪಠ್ಯ ಬಹಳ ಮುಖ್ಯವಾಗುತ್ತದೆ. ಕನ್ನಡ ಪಠ್ಯಗಳು ಓದುವ ಪಠ್ಯಗಳಲ್ಲ ಕೇಳುವ ಪಠ್ಯಗಳು 'ಕೇಳು ಜನಮೇಜಯ ಧರಿತ್ರೀ ಪಾಲ' ತಿಳಿಯ

ಹೇಳುವೆ ಕೃಷ್ಣಕಥೆಯನು ಇಳಿಯ ಜಾಣರು ಮೆಚ್ಚುವಂತಿರೆ, ಅಕ್ಷರಸ್ಥರಿಗಿಂತ ಅನಕ್ಷರಸ್ಥ ಜನ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಕವಿರಾಜಮಾರ್ಗಕಾರ ಹೇಳುವಂತೆ 'ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎನ್ನುವಲ್ಲಿ ಮೌಖಿಕ ಪಠ್ಯದ ಸುಳಿವನ್ನು ಕಾಣಬಹುದಾಗಿದೆ. ಸಶಬ್ಧವಾಗಿ ಓದುವದು ಎಂದರೆ ಗಮಕ, ಕೀರ್ತನೆ, ಹಾಡು, ಪ್ರವಚನ, ಇತ್ಯಾದಿ ಮೂಲಕ ಸಶಬ್ದವಾಗಿ ಕೇಳುವಂಥ ಪಠ್ಯಗಳು ಪಾಮರರ ಸಂಸ್ಕೃತಿಯ ಪ್ರತಿಕವಾಗಿದೆ.

ಶ್ರಮ ಪ್ರಧಾನವಾದ ಸಂಸ್ಕೃತಿ ವಕ್ತಾರರಾದ ಲಿಪಿಕಾರರು, ಓದುವ, ಹೇಳುವ, ಕೇಳುವ ನೆಲೆಗೆ ಪ್ರಾಧ್ಯಾನತೆ ಕೊಡುತ್ತಾ ಬಂದಿದ್ದಾರೆ.

ಈ ಕಥೆಯ ಕೇಳ್ದ ಭವ್ಯಾ
ನೀ ಕಂಮಿದಂ ಬರೆವ ನೆನೆವ ವಂದಿಪ ಜನರುಂ
ಲೋಕಂ ಸುತ್ತಿಯಿಸೆ ನೆಗಳ್ದರ
ನೇಕರು ಸುರಲೋಕ ಮೋಕ್ಷ ಸುಖಮಂ ಪಡೆದರ್[೫]

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛ್ರಾದಿ ತಪಸ್ಸಿನ ಫಲವು ಜ್ಯೋತಿಷ್ಟೋಮ ಯಾಗಫಲ
ವೇದಿನಿಯನೊಲಿದಿತ್ತ ಫಲವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ[೬]

ಕೇಳಿದನು ಜನಮೇಜಯ ಕ್ಷಿತಿ
ಪಾಲ ವೈಂಶಪಾಯನನು ತಾ
ಕೀಳು ದುರಿತಂಗಳಿಗೆ ಪ್ರಾಯಶ್ಚಿತ್ತ ರೂಪದಲ್ಲಿ
ಕೇಳಿರೈ ಮನಿನಿಕರವೀ ಕಲಿ
ಕಾಲದಲ್ಲಿ ಫಲಿಸುವುದು ಲಕ್ಷ್ಮೀ
ಲೋಲ ನಾಮಸುತ್ತಿ ಮಹಾಭಾರತ ಕಥಾಶ್ರವಣ[೭]

ಕೃತಿಯೊಂದು ಕಾಲಕಾಲಕ್ಕೆ ಪ್ರತಿಗೊಳ್ಳುವಂತೆ ಮತ್ತು ಅರಿವಿನ ವಿಸ್ತರಣೆಗೆ ಅನುಗುಣವಾಗುವಂತೆ ಅದರ ನಿರಂತರ ಬಳಕೆಯನ್ನು ಅಪೇಕ್ಷಿಸುತ್ತದೆ. ಮೌಖಿಕ ರೂಪದ ಪಠ್ಯವು ಸದಾ ಚಲನಶೀಲತೆಯನ್ನು ಹೊಂದಿರುತ್ತದೆ. ಲಿಖಿತ ರೂಪಕ್ಕೆ ಬರುವ ಕೆಲವು ಪಠ್ಯಗಳು ಕೃತಿಯೊಂದರ ನಿರಂತರ ಬಳಕೆಯನ್ನು ಅಪೇಕ್ಷಿಸುವ ಕನ್ನಡ ಸಂಸ್ಕೃತಿಗೂ ಬಳಕೆಯನ್ನೂ ನಿರಾಕರಿಸಿ ಸ್ಥಿರ ಮತ್ತು ಶುದ್ಧ ಪಠ್ಯವೆಂದು ಶುದ್ಧ ಧಾರ್ಮಿಕ ತಳಹದಿಯನ್ನು ಹಾಕುವುದು. ಪಾಂಡಿತ್ಯದ ಸಿಮೀತತೆಯನ್ನು ಕೊಟ್ಟು ಆ ಕೃತಿಯನ್ನು ಜಡಗೊಳಿಸುವಂತ ಏಕಮುಖಿಯಾದ ಮಾನದಂಡದಲ್ಲಿ ನೋಡಲಾಗುತ್ತದೆ.

ಹರಿಹರನ ಬಸವರಾಜ ದೇವರ ರಗಳೆಯಲ್ಲಿ ಬರುವ "ಗೀತಮಂ ಪಾಡೆ ಮಹಾದೇವಿ ಸೆಟ್ಟಿಯರು ಕಂಪಿಸಿ ಕೌತುಕಂಗೊಂಡು ತಲೆಯಂ ತೂಗಿ ಗೀತಾರ್ಥಮಂ ಪರೀಕ್ಷಿಪಂ" ಪದ್ಮಣಾಂಕನ ಪುರಾಣದಲ್ಲಿ ಬರುವ "ತಾಳಲಯ ಸಂಗೀತ ವಾದ್ಯ ಯತಿಗಳ ಆಗತಿಗೆ ತಾಳ ತಪ್ಪದೆ ನರ್ತನಂಗೈಯದ ಕೇಳಿಸುವ ಕೇಳಿಕೆ ಬಸವೇಶ್ವರಾದಿಗಳ ಗೀತಗಳಂ ವರನಿಜೋಕ್ತಿಗಳು ಹರೀಶಾದ್ಯಖಿಲ ಶಿವೈಕ್ಯರ ಗದ್ಯಪದ್ಯ ಪರಿಯನಜಿದೋದುತುಂ" ಈ ಮೇಲಿನ ವ್ಯಾಖ್ಯೆಗಳು ಹೇಳುವ ಕೇಳುವ ಸಂಸ್ಕೃತಿಯಲ್ಲಿ ಶ್ರೇಣಿಕರಣದ ವ್ಯವಸ್ಥೆಯಿಲ್ಲದೇ ಎಲ್ಲರೂ ಪರಸ್ಪರ ಸಹಕಾರ ಮನೋಭಾವದಿಂದ ತಮ್ಮಗೆ ತಿಳಿದ ವಿಚಾರಗಳನ್ನು ಮುಕ್ತಮನಸ್ಸಿನಿಂದ ಅಭಿವ್ಯಕ್ತಿಗೊಳಿಸವ ಸ್ವಾತಂತ್ರ್ಯತೆ ಇತ್ತು. ಇಲ್ಲಿ ಕೇಳುವರು ಅಜ್ಞಾನಿಗಳಾಗಿರಲಿಲ್ಲ ಹೇಳಗರು ಪಂಡಿತರಾಗಿರಲಿಲ್ಲ. ಸಮಾನ ಮನಸ್ಕರರಾಗಿ ತಮ್ಮಗೆ ತಿಳಿದ ವಿಚಾರಧಾರೆಯನ್ನು ಹಂಚಿಕೊಳ್ಳುತ್ತಿದ್ದರು. "ನಿರಂಕುಶ ಸ್ವಭಾವಕ್ಕಿಂತ ಸುಧಾರಣಾ ಪರ ಹಾಗೂ ಪ್ರಜಾಪ್ರಭುತ್ವೀಕರಣ ಮನೋಧರ್ಮಗಳು ಎದ್ದು ಕಾಣುತ್ತವೆ. ಇಲ್ಲಿ ಹೇಳುವ ಕೇಳುವ ಮಾದರಿ ಬದುಕನ್ನು ಅರಿತು ಕ್ರಿಯಾಶೀಲಗೊಳಿಸಿಕೊಳ್ಳುವತ್ತ ಹೆಚ್ಚು ಕಾಳಜಿವಹಿಸುತ್ತದೆ.[೮] ಹೇಳುವ-ಕೇಳುವ ಸಂಸ್ಕೃತಿಯಲ್ಲಿ ಪಾಮರರು ಸಭೆಯಲ್ಲಿ ವಿನಯದಿಂದ ಸಭೆಯಲ್ಲಿರುವವರನ್ನು ಕುರಿತು ತಮ್ಮ ಹಾಡುಗಳಲ್ಲಿ ಹೇಳುತ್ತಿದ್ದರು.

ಮಂದಮತಿಯು ನಾನು ನಿಮ್ಮ ಕಂದನು ನಾನು
ವಂದಿಸಿ ಸಭಾದೊಳು ನಿಂತಿಹೆನಾ।
ಚಂದದಿ ವಂದನೆ ಮಾಡುವೆನಾ
ಏನೂ ಅರಿಯದ ಬಾಲಕನಾ ॥ಪಲ್ಲವಿ॥
ಸಣ್ಣವನಾಗಿ ನಾs ಬಂದಷ್ಟು ಹಾಡ್ತೀನಿ
ತಂದೆ ತಾಯಿಗೆ ಮಾಡುವೆ ಶರಣ ॥ಅನು ಪಲ್ಲವಿ॥[೯]

ಸಭಾ ಮರ್ಯಾದೆ ಒಂದು ಕಡೆಯಾದರೆ ಇನ್ನೊಂದು ಕಡೆ ತನಗಿಂತ ತಿಳಿದವರು ಅಕ್ಷರ ಜ್ಞಾನವುಳ್ಳವರನ್ನು ಸಾಂತ್ವಾನ ಮಾಡುವ ರೀತಿಯಾಗಿದೆ. ವಿದ್ವತ್ ಪೂರ್ಣವಾದ ಜ್ಞಾನವನ್ನು ಹೊಂದಿದ್ದರು ಅಕ್ಷರ ಪ್ರಧಾನವಾದ ಸಂಸ್ಕೃತಿಗೆ ಅಧೀನರಂತೆ ಭಾವಿಸಿಕೊಂಡಿದ್ದರು. "ಈ ಹಾಡುಗಾರರು ಇಂಥಹ ವಿನಯ ಹಾಗೂ ಭಯ ಮೂಲವಾದ ವಿದ್ಯಮಾನಕ್ಕೆ ಒಳಗಾದರು ಇವರಿಗೆ ಎದುರಿಗಿರುವ ಕೇಳುಗರೆಂದರೆ ಪಂಡಿತ ಸಭಾವಿದ್ದಂತೆ 'ಪಂಡಿತರೆಲ್ಲ ಬಂದ ಕೂಡಿರಿ ಸಣ್ಣ ದೊಡ್ಡವರೆಲ್ಲ ಎನ್ನುವ ವಿದ್ವತ್ ಸಭಾದ ಕಲ್ಪನೆ ಹಾಡುಗಾರರಲ್ಲಿರುತ್ತದೆ. ಯಾರಿರಲಿ ಬಿಡಲಿ ಅದೊಂದು ಪರಂಪರೆಯಾಗಿ ಬೆಳೆದು ಬಂದಿರುವುದು ಇಂಥ ಹಾಡುಗಾರರ ಹಾಡುಗಳಲ್ಲಿ ಕಾಣುತ್ತದೆ.[೧೦] ಪ್ರಾಚೀನ ಗ್ರಂಥಗಳಲ್ಲಿ ಅಷ್ಟಾದಶ ವರ್ಣನೆಯಂತೆ ಆಧುನಿಕ ಸಂದರ್ಭದಲ್ಲೂ ಸಭೆ ಸಮಾರಂಭಗಳಂತ ಕಾರ್ಯಕ್ರಮಗಳಲ್ಲಿ ನೇರವಾಗಿ ವಿಷಯಕ್ಕೆ ಬರದೇ ಮಾನ್ಯರೇ, ಮುಖ್ಯ ಅತಿಥಿಗಳೇ, ಅಧ್ಯಕ್ಷರೇ, ಮಹಾಜನಗಳೇ ಎಂದು ಹೇಳುವ ವಾಡಿಕೆಯೂ ಉಂಟು ಪ್ರಾಚೀನ ಕಾಲದಿಂದ ಲಿಖಿತ ಮತ್ತು ಮೌಖಿಕ ಸಾಹಿತ್ಯದಲ್ಲಿ ಒಳಗಡೆ ಒಂದು ಪರಂಪರೆಯಾಗಿ ಬೆಳೆದು ಬಂದಿದೆ. ಒಬ್ಬ ವ್ಯಕ್ತಿ ಎಷ್ಟೇ ಜ್ಞಾನಿಯಾಗಿದ್ದರು ಅವನು ಪರಿಪೂರ್ಣ

ಎನಿಸಿಕೊಳ್ಳಲಾರನು. ಅವನು ಸಮಾಜದ ಇತರ ಜನಗಳ ಮೂಲಕ ಕಲಿತು ಕೊಳ್ಳುವುದು ತುಂಬಾ ಇರುತ್ತದೆ. ಕಲಿಕೆ ಜನನದಿಂದ ಮರಣದವರೆಗೆ ನಿರಂತರ ನಡೆಯುವ ಪ್ರಕ್ರಿಯೆಯಾಗಿದೆ. ಈ ಸಿದ್ಧಾಂತವನ್ನು ಮನೋವಿಜ್ಞಾನಿಗಳು ಮನಃಶಾಸ್ತ್ರಜ್ಞರು ಒಪ್ಪಿಕೊಳ್ಳುವ ತತ್ವಸಿದ್ಧಾಂತವಾಗಿದೆ. "ಸರ್ವಜ್ಞನೆಂಬುವನು ಗರ್ವದಿಂದಾದವನೆ ಸರ್ವರೊಳಗೊಂದು ನುಡಿಗಲಿತು ವಿದ್ಯೆಯ ಪರ್ವತವೇ ಆದ ಸರ್ವಜ್ಞ" ಎಂಬ ಸರ್ವಜ್ಞನ ಮಾತು ಸಮಂಜಸವಾಗಿದೆ.

ಪಂಪನಿಂದ ಹಿಡಿದು ಮುದ್ದಣ್ಣನವರೆಗೂ ಹಾಗೂ ನವ್ಯರನ್ನು ಹೊರತುಪಡಿಸಿ ಇನ್ನಿತರ ಹೊಸಗನ್ನಡ ಕವಿಗಳ ಗ್ರಂಥಗಳು ಲಿಖಿತ ಪಠ್ಯಗಳ ಆಚೆಯಿರುವ ಪಾತಳಿಯನ್ನು ಒಳಗೊಂಡಿವೆ. ಕನಕದಾಸರು "ಬರಹನಾನರಿಯೆ ಪದವಿಟ್ಟು ಕಡಿತದೋಳು" ಎಂದು ಹೇಳಿದರೆ "ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ" ಎಂದು ಹೇಳುವುದು ಕನ್ನಡ ಕವಿ ಲಿಪಿಕಾರರು ಲಾಲಿತ್ಯಪೂರ್ಣವಾದ ಸಂವಹನಶೀಲ ಗುಣವುಳ್ಳ ಕಾವ್ಯವನ್ನು ರಚಿಸಿದರು. ಹಸ್ತಪ್ರತಿಯಂತಹ ಗ್ರಂಥಗಳ ಓದುವ ಕೇಳುವ ಸಂಸ್ಕೃತಿಯು ಒಂದು ಶುಷ್ಕ ಮತ್ತು ಏಕಮುಖಿಯಾದ ಮಾದರಿಯನ್ನು ನಿರಾಕರಿಸುತ್ತ ಅರ್ಥಪೂರ್ಣ ಮತ್ತು ಬಹುಮುಖಿಯಾದ ಸಂವಹನ ಸಾಮರ್ಥ್ಯವನ್ನು ಬೆಳೆಸುತ್ತಾ ಬಂದಿವೆ.[೧೧]

ದೋಷಮನೆ ಗುಣದವೊಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯನೆ ನಿರಿಸಿ ಖಂಡ
ಪ್ರಾಸಮನಸತಿಶಯದೆಂದು ಯತಿಯಂ ಮಿಕ್ಕರ್[೧೨]

ನಾಡವರ್ಗಳ್ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್" ಕವಿರಾಜಮಾರ್ಗಕಾರನ ಈ ಮಾತು ಮೌಖಿಕ ಸಮುದಾಯದ ಜೊತೆಗೆ ನೇರ ಸಂವಾದ ನಡೆಸಿದ್ದು ಕೃತಿ ಅಕ್ಷರ ರೂಪದಲ್ಲಿದರೂ ಅದು ಸಮುದಾಯದಲ್ಲಿ ಜೀವಂತವಾಗಿರುವುದು ಮಾತ್ರ ಗಮಕ, ಹಾಡು, ನಾಟಕ, ಪ್ರದರ್ಶನ ಮೂಲಕ. "ಮೌಖಿಕ ರೂಪಗಳ ಮೂಲಕವೇ ಬಹುಪಾಲು ಜನ ಓದುಗರು ಅನಕ್ಷರಸ್ಥರೇ ಇರುವ ಸಮುದಯದಲ್ಲಿ ಸಂಸ್ಕೃತಿಯ ಪ್ರಸರಣದ ದೃಷ್ಟಿಯಿಂದ ಇದು ಬಹಳ ಮುಖ್ಯವಾಗಿತ್ತು ಎನ್ನುವ ಪ್ರೊ.ಎಚ್.ಎಸ್. ರಾಘವೇಂದ್ರರಾವ್ ಅವರ ಮಾತು ಮೌಲಿಕವಾದುದು. ಓದಲು, ಓದಿಸಿಕೊಳ್ಳಲು ಕೇಳಲು, ಕೇಳಿಸಿಕೊಳ್ಳಲು ಕರ್ಮೋಪಶಮನ ಜ್ಞಾನ, ಮನೋಭಿಷ್ಟಸಿದ್ಧ, ರೋಗ ಮತ್ತು ಕಂಠಕನಿವಾರಣೆ ಮುಕ್ತಿ ಹೀಗೆ ಹಲವು ರೀತಿಯಲ್ಲಿ ಕನ್ನಡ ಗ್ರಂಥಗಳು ಕನ್ನಡದ ಕನ್ನಡ ಸಾಂಸ್ಕೃತಿಕ ಸಂವೇದನೆಗಳನ್ನು ತಮ್ಮಲ್ಲಿ ಆಳವಡಿಸಿಕೊಂಡಿವೆ. ಕುಮಾರವ್ಯಾಸನ ವಿರಾಟಪರ್ವವನ್ನು, ರಟಮತವನ್ನು ಮಳೆಗಾಗಿ ಪಟಿಸುವ ನಂಬಿಕೆ ಪ್ರಧಾನವಾದ ಜನಸಾಮಾನ್ಯರ ಹೇಳುವ ಕೇಳುವ ಸಮುದಾಯಗಳನ್ನು ಆಧಾರವಾಗಿಟ್ಟುಕೊಂಡೇ ಗ್ರಂಥಗಳು ಮೌಖಿಕ ತಳಹದಿಯನ್ನು ಹೊಂದಿದ್ದವು. ಮಳೆಗಾಗಿ ಪಟಿಸುವ ಸಾಂಸ್ಕೃತಿಕ ಜಗತ್ತು ಪಠ್ಯದ ಶುದ್ಧ-ಅಶುದ್ಧ ಎನ್ನುವ ಗೋಜಿಗೆ ಹೋಗದೆ ಮಳೆಯ ಆಶಯದ ದೃಷ್ಟಿಯಿಂದ ಮತ್ತೆ ಮತ್ತೆ ಪ್ರತಿಗೊಳ್ಳುತ್ತಾ ಪಠಣೆಗೊಳ್ಳುತ್ತಾ ಹೋಯಿತು. ಕುಮಾರವ್ಯಾಸ ಭಾರತ, ರಟ್ಟಮತ, ಬಸವಪುರಾಣ, ಜೈಮಿನಿಭಾರತ, ಪ್ರಭುಲಿಂಗಲೀಲೆ

ಕುಮಾರವ್ಯಾಸ ಸಾಂಗತ, ವರ್ಧಮಾನ ಪುರಾಣಗಳಂತಹ ಪ್ರಾಚೀನ ಕೃತಿಗಳು ಹೆಚ್ಚಾಗಿ ಅವಲಂಬಿಸಿದ್ದು ಕೇಳುವ ಮತ್ತು ಹೇಳುವ ಸಂಸ್ಕೃತಿಯನ್ನು ವಿಶೇಷವಾಗಿ ಮಧ್ಯಕಾಲೀನ ಕನ್ನಡ ಸಾಹಿತ್ಯ ಲಿಖಿತ ಪರಂಪರೆಗಿಂತ ತೋಂಡಿ ಪ್ರಧಾನವಾದ ಸಂವಹನದ ನೆಲೆಯನ್ನು ಆಶ್ರಯಿಸಿದ್ದವು.

ಪ್ರೊ. ಕಿ.ರಂ. ನಾಗರಾಜ ಕನ್ನಡ ಸಾಹಿತ್ಯದಲ್ಲಿ ರೂಪಗೊಂಡಿರುವ ಶಿಷ್ಟ ಎನ್ನುವ ಪ್ರಬೇಧವೇ ಅಸ್ಪಷ್ಟವೂ ಕೃತಕವೂ ಆದಂಥದು. ಏಕೆಂದರೆ ಕನ್ನಡ ಕಾವ್ಯದ ಮಟ್ಟಿಗೆ ಈ ಪ್ರಬೇಧಕ್ರಮ ಅಪ್ರಸುತ್ತ ಎಂದೇ ನನ್ನಭಾವನೆ ಎನ್ನುತ್ತಾರೆ. ಪಂಪನಿಂದ ಹಿಡಿದು ವಚನಕಾರರು, ಹರಿಹರ, ರಾಘವಾಂಕ ಕುಮಾರವ್ಯಾಸ, ಕೀರ್ತನಕಾರರು, ಲಕ್ಷ್ಮೀಶ, ಸರ್ವಜ್ಞ ಇವರ ಕೃತಿಗಳು ಗ್ರಾಮೀಣ ಸಂಸ್ಕೃತಿಯ ಅತ್ಯಂತ ಪ್ರಮುಖ ಭಾಗವಾಗಿ ಬೆರೆತುಹೋಗಿವೆ. ಇಂದಿಗೂ ಪುರಾಣ ಪ್ರವಚನ ಮೂಲಕ ಜೀವಂತವಾಗಿರುವ ಶೂನ್ಯ ಸಂಪಾದನೆ, ಬಸವಪುರಾಣ, ರಾಜಶೇಖರ ವಿಳಾಸ, ನೇಮಿಜಿನೇಶ ಸಂಗತಿ. ಹರಿಭಕ್ತಿಸುಧೆ, ಹರಿಕಥಾಮೃತಸಾರ ಇಂದಿಗೂ ತನ್ನ ಆಕರ್ಷಣೆಯನ್ನು ಕಳೆದುಕೊಂಡಿಲ್ಲ.

ಹೇಳುವ ಕೇಳುವ ವ್ಯವಸ್ಥೆಯನ್ನು ಆಳವಡಿಸಿಕೊಂಡು ಬಹುಜನರಿಗೆ, ಜನಸಾಮಾನ್ಯರಿಗೆ ಅದರಲ್ಲೂ ಅಕ್ಷರ ಕೇಂದ್ರಿತದಾಚೆಯಿರುವ ಸಮುದಾಯಗಳನ್ನು ತಲುಪಲು ಪಾಮರರ ಪಾತ್ರ ಮುಖ್ಯವಾದ ಸಮಾಜಮುಖಿ ಜನಮುಖಿಯಾದ ಸಂಸ್ಕೃತಿಯನ್ನು ಕಟ್ಟಿಕೊಳ್ಳುತ್ತದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಕವಿಗಳ ಕಾವ್ಯಗಳಿಗೆ ಭಾವತುಂಬಿ ಕಲಾವಿದರು, ಸಂಗೀತಗಾರರು ಬಹುಜನಗಳಿಗೆ ಸಭೆ ಸಮಾರಂಭಗಳಲ್ಲಿ ತಮ್ಮ ಗಾಯನ ಮೂಲಕ ತಲುಪಿಸುತ್ತಾರೆ. ಮಾತಿನ ಮೂಲಕ ಅನುಭವಗಳನ್ನು ಅಂತರ್ಗತ ಮಾಡಿಕೊಳ್ಳುತ್ತಾನೆ. ಸಮಾಜದೊಳಿಗಿನ ಮೃಗಸ್ಥಿತಿಯನ್ನು ಮೀರುವ ತೀವ್ರ ಪರಿಕಲ್ಪನೆಯನ್ನಾಗಿ ಪರಿವರ್ತಿಸಿಕೊಂಡಿದ್ದಾನೆ. "ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು" ಎಂಬಂತೆ ಮಾತಿನ ಮಹತ್ವ ತಿಳಿಯುತ್ತದೆ.

ಇತರೆ ಜೀವಿಗಳಿಗಿಂತ ಮಾನವ ತನ್ನ ಬದುಕುವ ರೀತಿ-ನೀತಿ, ನಡೆ-ನುಡಿ, ಆಚಾರ-ವಿಚಾರಗಳು ಭಿನ್ನವಾಗಿ ರೂಪಿಸಿಕೊಂಡು ಒಂದು ಸುವ್ಯವಸ್ಥಿತ ರೀತಿಯಲ್ಲಿ ಅಲೆಮಾರಿಯಾಗಿ ಅಲೆಯುವುದಕ್ಕಿಂತ ಪರಸ್ಪರ ಸಹಕಾರ ಮನೋಭಾವದಿಂದ ನೋವು ನಲಿವುಗಳಲ್ಲಿ ಎಲ್ಲರೂ ಭಾಗಿಯಾಗಿ ಕೂಡಿಬಾಳುವ ಜೀವನ ಕ್ರಮವು ನಿಜವಾದ ಕನ್ನಡ ಸಂಸ್ಕೃತಿ ಸಂಸ್ಕೃತಿಯು ಸಮುದಾಯದ ಮಾನವ ಕೋಟೆಯಲ್ಲಿ ಕಾಣಬಹುದಾದ ಒಂದು ನೈಜ ವೈಶಿಷ್ಟ್ಯವಾಗಿದೆ. ಯಾವ ಈ ವಿಶೇಷ ಗುಣವು ಮಾನವನನ್ನು ಇತರ ಜೀವಿಗಳಿಗಿಂತ ಭಿನ್ನವಾಗಿ ಅದು ಎಲ್ಲರಲ್ಲಿಯೂ ಇರತಕ್ಕದ್ದು. ಮೃಗಗಳಿಂದ ಬೇರೆನಿಸಿದವರು ಮಾನವರೆನಿಸದೇ ಬರೀ ಜೀವಜಂತುಗಳಾಗಿ ಜೀವಿಸುತ್ತಾರೆ. ಸರ್ವಜ್ಞ ಕವಿಯು "ಅನ್ನವನು ನಿಡುವುದು, ನನ್ನಿಯನು ನುಡಿಯುವುದು ತನ್ನಂತೆ ಪರರ ನೆನೆಯುವುದು" ಎಂಬ ಮಾತು ಶ್ರಮಿಕರ ಅಕ್ಷರ ಕೇಂದ್ರಿತದಾಚೆಯಿರುವ ಸಮುದಾಯದ ಸಂಸ್ಕೃತಿಯ ತಾತ್ವಿಕತೆಯನ್ನು ತಿಳಿಸುವಂತಿದೆ.

ಮರಿಯಪ್ಪ ಭಟ್ಟರು ತಮ್ಮ ಕನ್ನಡ ಸಂಸ್ಕೃತಿ ಎಂಬ ಗ್ರಂಥದಲ್ಲಿ ಸಂಸ್ಕೃತಿ ಕುರಿತು ಹೀಗೆ ಹೇಳುತ್ತಾರೆ. ಕನ್ನಡ ಸಂಸ್ಕೃತಿಯೆಂದರೇನು? ಕನ್ನಡ ಜನ ಆದಿಯಿಂದಲೂ ನಿಲುಕಲಾರದ ಆದಿಯಿಂದ ಗಳಿಸಿಕೊಂಡು,

ಉಳಿಸಿಕೊಂಡು, ಬೆಳಸಿಕೊಂಡು ಬಂದಂಥ ಇನ್ನೂ ಮುಂದುವರೆಯುವಂತ ಮಾನವತೆಯೊಂದಿಗಿರುವ ಕನ್ನಡತನ ಮನುಷ್ಯನ ಪ್ರತಿಭೆ ಯಾವ ಯಾವ ರೀತಿಗಳಲ್ಲಿ ತನ್ನ ಜೀವನದ ಪ್ರಕಾರಗಳನ್ನು ಚಿತ್ರಿಸಬಲ್ಲದೊ ಅವೆಲ್ಲ ಸಂಸ್ಕೃತಿಯ ಪಡಿಯಚ್ಚುಗಳಾಗುವವು ಎಂದು ಕವಿ-ಕಾವ್ಯಗಳಲ್ಲಿ ನಟ-ನಟನೆಯಲ್ಲಿ ಸಂಗೀತಗಾರ ಸಂಗೀತ ವಾದ್ಯಗಳಲ್ಲಿ ವಾಗ್ಮಿಯಕಾರ ಮಾತಿನಲ್ಲಿ ಹಾಡುಗಾರ-ಹಾಡಿನಲ್ಲಿ ವಚನಕಾರ-ವಚನಗಳ ಮೂಲಕ ತಮ್ಮ ಅನುಭವವನ್ನು ಅನುಭವ ಮಂಟಪದಂತೆ ಸಾರ್ವಜನಿಕ ಸ್ಥಳಗಳಲ್ಲಿ ಜ್ಞಾನವನ್ನು ಬದುಕಿನ ರೀತಿ-ನೀತಿಗಳನ್ನು ಊಣಬಡಿಸುತ್ತಿದ್ದರು.

ಲೈಬ್ನಿಸ್ ಎಂಬ ವಿದ್ವಾಂಸ "ಭಾಷೆ ಮನಸ್ಸಿನ ಅತ್ಯುತ್ತಮವಾದ ಕನ್ನಡಿ-ಶಬ್ದಗಳ ಮರ್ಮವನ್ನು ಸರಿಯಾಗಿ ಗ್ರಹಿಸಿದರೆ, ಆ ಭಾಷೆಯನ್ನಾಡುವವರ ಮನೋವೃತ್ತಿ ಸ್ಪಷ್ಟವಾಗುವದು ಒಂದು ಜನಾಂಗದ ಸಂಸ್ಕೃತಿಯನ್ನು ತಿಳಿಯುವುದಕ್ಕೆ ಭಾಷೆಗಿಂತ ಉತ್ಕೃಷ್ಟವಾದ ಬೇರೊಂದು ಸಾಧ್ಯವಿಲ್ಲ" ಜನಾಂಗದ ಸಂಸ್ಕೃತಿಯೂ ಮನೋವೃತ್ತಿಯೂ ಅಮೂಲ್ಯವಾದ ಅನುಭವ ಘಟ್ಟಗಳು ಕನ್ನಡ ಸಂಸ್ಕೃತಿಯನ್ನು ಕನ್ನಡ ಭಾಷಿಕರ ನೆಲೆಯಲ್ಲಿ ಅಧ್ಯಯನ ಮಾಡುವುದು ಸೂಕ್ತವೆನಿಸುತ್ತದೆ. ಇಲ್ಲಿ ಅಕ್ಷರಸ್ಥ-ಅನಕ್ಷರಸ್ಥ ಶ್ರೇಷ್ಠ ಕನಿಷ್ಠ ಎಂಬ ಬೇಧಭಾವವಿಲ್ಲದೆ ಕನ್ನಡ ಮಾತನಾಡುವ, ಕನ್ನಡ ಪ್ರದೇಶದ ಮತ್ತು ಇತರೆ ಪ್ರದೇಶದಲ್ಲಿರುವ ಕನ್ನಡಿಗರು ಕನ್ನಡ ಸಂಸ್ಕೃತಿಯಲ್ಲಿ ಸ್ಥಾನ ಪಡೆಯುತ್ತಾರೆ. ಕವಿರಾಜಮಾರ್ಗಕಾರ ಮಾತುಗಳು ಕನ್ನಡ ನಾಡಿನ ಜನರ ಗುಣಸ್ವಭಾವ, ಪ್ರಾವೀಣತೆ, ಸೃಜನಶೀಲತೆ, ಚತುರತೆಯಂತಹ ವಿಚಾರಧಾರೆಯನ್ನು ಈ ಕೆಳಗಿನ ಕಾವ್ಯಭಾಗದಲ್ಲಿ ಕೊಟ್ಟಿದ್ದಾನೆ.

"ಪದನಱಿದ ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯಂ ಕಾವ್ಯಪ್ರಯೋಗ ಪರಿಣತ ಮತಿಗಳ್"
ಕುಱಿತವರಲ್ಲದೆ ಮತ್ತಂ
ಪೇಱಿರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿಱಿವಕ್ಕಳ್ ಮಾಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ[೧೪]

ಸಿ.ಎ. ಎಲ್ವುಡ್ ಎಂಬ ಮಾನವಶಾಸ್ತ್ರಜ್ಞ ೧೯೪೪ರಲ್ಲಿ ಎಚ್.ಪಿ. ಫೇರ್ ಚೈಲ್ಡ್ ಸಂಪಾದಿಸಿದ ಸಮಾಜಶಾಸ್ತ್ರ ಶಬ್ದಕೋಶ ಎಂಬ ಕೃತಿಯಲ್ಲಿ ಸಂಸ್ಕೃತಿಯನ್ನು "ಸಾಮಾಜಿಕವಾಗಿ ಗಳಿಸಿಕೊಂಡಂತಹ, ಸಂಕೇತಗಳ ಮುಖಾಂತರ ಸಂವಹನಗೊಳ್ಳುವಂತಹ ಮಾನವನ ಸಮಸ್ತ ವರ್ತನಾ ವಿಧಾನಗಳಿಗೆ ಇರುವ ಸಂಯುಕ್ತ ನಾಮವೇ ಸಂಸ್ಕೃತಿಯೆಂದು" ಅದು ಮಾನವ ಸಮುದಾಯಗಳ ಸಮಸ್ತ ಚಟುವಟಿಕೆಗಳು ಅನ್ವಯಿಸುತ್ತವೆ. ಮುಂದುವರೆದು ಸಂಸ್ಕೃತಿಯ ಮುಕ್ತ ಭಾಗವನ್ನು ಒಂದು ಸಮುದಾಯದ ನೈಜ ವರ್ತನೆಗಳಲ್ಲಿ ಆ ಜನತೆಯ ರೀತಿ ರಿವಾಜುಗಳಲ್ಲಿ ಸಂಪ್ರದಾಯಗಳಲ್ಲಿ ಹಾಗೂ ಸಂಘ ಸಂಸ್ಥೆಗಳಲ್ಲಿ

ಕಂಡುಕೊಳ್ಳಬಹುದು ಎನ್ನುವ ಮಾತು ಕನ್ನಡ ಸಂಸ್ಕೃತಿಯನ್ನು ಕನ್ನಡ ನಾಡಿನ ಜನರ ಗುಣಸ್ವಭಾವ ತಿಳಿಯುವಲ್ಲಿ ಕವಿರಾಜಮಾರ್ಗಕಾರನ ಮಾತುಗಳು ಒಂದೇ ನೆಲೆಯಲ್ಲಿ ಹೇಳಿದಂತೆ ಕಂಡುಬರುತ್ತದೆ. ಕವಿರಾಜಮಾರ್ಗಕಾರ ಆ ಕಾಲದ ಕನ್ನಡ ನಾಡು, ನುಡಿ ಕನ್ನಡಿಗರ ಗುಣಸ್ವಭಾವ ಶ್ರಮಿಕ ಪ್ರಧಾನವಾದ ಮೌಖಿಕ ಸಮುದಾಯಗಳ ಸಂಸ್ಕೃತಿಯನ್ನು ಕಟ್ಟಿಕೊಡುತ್ತದೆ. ಅಕ್ಷರ ಮತ್ತು ಅಕ್ಷರ ಕೇಂದ್ರಿತದಾಚೆಯಿರುವ ಎರಡು ಸಮುದಾಯಗಳ ಸಂಸ್ಕೃತಿಯನ್ನು ಹೇಳುವ ಜೊತೆಗೆ ಹೇಳುವ ಕೇಳುಗ ಸಮುದಾಯಗಳ ಸಂಸ್ಕೃತಿಯನ್ನು ಕಾಣಬಹುದಾಗಿದೆ.

ಶುದ್ಧ ಮತ್ತು ಪಾವಿತ್ರ್ಯದ ಹೆಸರಿನಲ್ಲಿ ಸಂಸ್ಕೃತಿಯೊಂದು ತನ್ನ ಕಾಲದ ಅಗತ್ಯಗಳಿಗೆ ತಕ್ಕಂತೆ ನಿರ್ಮಿಸಿಕೊಂಡ ಹಸ್ತಪ್ರತಿಗಳಂತಹ ಗ್ರಂಥಗಳು ಬಹುಪಠ್ಯ ಮತ್ತು ಬಹು ಸಂವೇದಗಳನ್ನು ಅದರ ಸಾಮಾಜಿಕ ವಾಸ್ತವವನ್ನು ಧಿಕ್ಕರಿಸಿ ಶಾಸ್ತ್ರೀಯಗೊಳಿಸುತ್ತಾ ಬರಲಾಯಿತು. ಇದರಿಂದ ಕ್ರಿಯ ಮತ್ತು ಅರಿವು ಬುದ್ಧಿ ಮತ್ತು ಭಾವದ ಸಂಯೋಜನೆಯಿಂದ ಸೃಷ್ಟಿಗೊಂಡ ಇಂಥ ನೆಲೆಗಳು ಉಪೇಕ್ಷೆಗೆ ಒಳಗಾದವು. ಪಾಂಡಿತ್ಯ ಪ್ರತಿಷ್ಠೆ, ಪ್ರಮಾಣೀಕರಣದಂತಹ ಶಾಸ್ತ್ರೀಯ ಪರಿಕಲ್ಪನೆಗಳೂ ಹಸ್ತಪ್ರತಿಗಳನ್ನು ಸನಾತನ ಸಂಸ್ಕೃತಿಯ ಫಲಿತಗಳನ್ನಾಗಿ ಪರಿಗಣಿಸಿದವು ಓದು ಮತ್ತು ಬರಹಗಳು ಅರಿವಿನಾ ವಿಸ್ತಾರದ ಸಾಧನಗಳಾಗದೇ ಸಾಮಾಜಿಕ ನಿಯಂತ್ರಣ ವಿಧಾನಗಳಾಗಿ ಬೆಳೆದು ಬಂದಿವೆ. ಶುದ್ಧ-ಅಶುದ್ಧ ಕನಿಷ್ಠ ಸಾಹಿತ್ಯ-ಅಸಾಹಿತ್ಯ ಶಾಸ್ತ್ರೀಯ-ಅಶಾಸ್ತ್ರೀಯ ಎನ್ನುವ ಬೇಧಗಳು ಹುಟ್ಟಿಕೊಂಡು ಕೆಲ ಕೃತಿಗಳು ಮತ್ತು ಕೃತಿಕಾರರು ಜನಪ್ರಿಯತೆ ಹೊಂದುವಂತಾಯಿತು. ಅಕ್ಷರ ಸಮುದಾಯದ ಸಂಸ್ಕೃತಿಯ ಆಚೆಯಿರುವ ಶ್ರಮಿಕ, ಪಾಮರರ ಸಮುದಾಯಗಳ ಸಂಸ್ಕೃತಿಯೂ ಸದಾಕಾಲ ಸೃಜನಶೀಲತೆಯಿಂದ ಕೂಡಿ ಕನ್ನಡ ಸಾಹಿತ್ಯ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದಲ್ಲದೇ ಕನ್ನಡ ಸಾಹಿತ್ಯ ಕೃತಿಗಳನ್ನು ಮೌಖಿಕ ಪಾತಳಿಯಿಂದ ಹೇಳುವ ಕೇಳುವ ಸಂಸ್ಕೃತಿಯಿಂದ ಗ್ರಂಥಗಳನ್ನು ತಲೆಮಾರಿನಿಂದ ತಲೆಮಾರಿಗೆ ಚಲನಶೀಲ ರೀತಿಯಲ್ಲಿ ಸಂರಕ್ಷಿಸುತ್ತಾ ಬಂದಿದ್ದಾರೆ. ಅಕ್ಷರ ಬಲ್ಲವರಿಗಿಂತ ಅಕ್ಷರದಾಚೆಯಿರುವ ಸಮುದಾಯಗಳ ಜೀವನ ಕ್ರಮವೇ ಕನ್ನಡ ಸಂಸ್ಕೃತಿ.

ವೈದಿಕ ಸಂಸ್ಕೃತಿಯ ಆಚೆ ಕಂದಮಿಳ ಸಂಸ್ಕೃತಿಯಲ್ಲಿ ಮಾತೃ ದೇವತೆಯ ಆರಾಧನೆ, ಮಾತೃಪ್ರಧಾನ ಮೌಲ್ಯಗಳು ಪುರುಷ ಪ್ರಧಾನ ವೈದಿಕ ಸಂಸ್ಕೃತಿಗಿಂತ ಮೊದಲೇ ಇಲ್ಲಿ ಬದುಕಿದ್ದವು. ಮಾತ್ರವಲ್ಲ ಕೊನೆಗೆ ವೈದಿಕ ಸಂಸ್ಕೃತಿ ಕೂಡ ತನ್ನ ಒಡಲೊಳಗೆ ಆ ಮೌಲ್ಯಗಳನ್ನು ಸ್ವೀಕರಿಸಲಾಯಿತು. ಮುಖ್ಯವಾಗಿ ಸಂಸ್ಕೃತಿಯ ಒಳ ಸುಳಿಯಾದ ಜನಪದ ಸಂಸ್ಕೃತಿಯಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಎಚ್ಚರವನ್ನು ತೆಗೆಯುತ್ತಾರೆ. ಆದ್ದರಿಂದ ಶಂಬಾ ಅವರ ಚಿಂತನೆಯು ಸಾಂಪ್ರದಾಯಿಕ ನಿಲುವುಗಳನ್ನು ಹಿಡಿಯದೆ, ಬೇರೆ ಬಗೆಯ ನಿಲುವುಗಳನ್ನು ಗ್ರಹಿಸಲು ತೊಡಗುತ್ತದೆ.[೨೫]

ಕನ್ನಡ ಬದುಕಿನ ಚಿಂತನೆಯ ಭಾಗವೇ ಸಂಸ್ಕೃತಿ ದೇಸಿಯ ಬೇರುಗಳು ಗುರುತಿಸುವದು ಸಮಾಜಮುಖಿ ಚಿಂತನೆಗಳ ವ್ಯಾಪಕ ಅಧ್ಯಯನ ಮೂಲಕ ಬದುಕಿನ ಸಂಕೀರ್ಣ ಲಕ್ಷಣಗಳ

ಸ್ವರೂಪವನ್ನು ಇದು ಪರಿಚಯಿಸುತ್ತದೆ. ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ವ್ಯಕ್ತಿ ಮತ್ತು ಸಮಾಜ ಸಂಸ್ಕೃತಿ ವಿಕಾಸದಲ್ಲಿ ಪ್ರಮುಖ ಪಾತ್ರವಹಿಸುವುದು ಕಾಣಬಹುದು. ಸಮಾಜ ವಿಜ್ಞಾನಿಗಳು ಮಹಿಳೆಯರನ್ನು ನಾಗರಿಕತೆ ಉತ್ಪಾದಕರೆಂದು ಗೌರವದಿಂದ ಪರಿಭಾವಿಸದೇ ಗ್ರಾಹಕರೆಂದು ಪುರುಷರ ಅಧೀನರೆಂದು ಕೇವಲ ಮಕ್ಕಳನ್ನು ಹೇರುವವರೆಂದು ಭಾವಿಸಲಾಗಿತ್ತು ಮಕ್ಕಳ ಪಾಲನೆ ಪೋಷಣೆ ಅಲ್ಲದೇ ತನ್ನ ಕುಟುಂಬದ ಮತ್ತು ತನ್ನ ಸಮಾಜದ ಸಮುದಾಯದ ನಿರ್ವಹಣೆಯ ಹೊಣೆಗಾರಿಕೆ ಹೊಂದಿರುವ ಮಾತೃಪ್ರಧಾನ ಸಂಸ್ಕೃತಿ ಪುರಷ ಪ್ರಧಾನ ಸಂಸ್ಕೃತಿಗಿಂತ ಮುಂಚೆಯೇ ಚಲನಶೀಲವಾಗಿತ್ತು.

ಲಿಂಗ ಸಮಾನತೆಯ ನೆಲೆಯಲ್ಲಿ ಪ್ರಧಾನ ಸಂಸ್ಕೃತಿ ತನ್ನ ಅಧೀನ ಸಂಸ್ಕೃತಿಯನ್ನು ಆಚೆ ಶ್ರೇಷ್ಠತೆಯ ಮಾನದಂಡಗಳ ಮೂಲಕ ರೂಪಿಸಿಕೊಂಡಿತು. "ಜ್ಞಾನವೆನ್ನುವುದನ್ನು ಪುರುಷರ ನೆಲೆಯಿಂದ ಪರಿಭಾವಿಸುವ ಪರಿಭಾವಿಸಿಕೊಳ್ಳುವುದರಿಂದ ಅದು ಮಹಿಳೆಯರಿಗೆ ನ್ಯಾಯ ಒದಗಿಸಲು ಸಾಧ್ಯವಿಲ್ಲ" ಅವಳು ಜ್ಞಾನಕ್ಕೂ ಸ್ವಾತಂತ್ರ್ಯಕ್ಕೂ ಅರ್ಹಳಲ್ಲವೆಂಬ ಭಾವನೆ ಪ್ರಾಚೀನರಲ್ಲಿ ಹುಟ್ಟಿಕೊಂಡಿತು. "ನಹಿ ಸ್ತ್ರೀ ಸ್ವಾತಂತ್ರ್ಯಮೂ" ಎಂದು ಮನುವಿನ ಮನಶಾಸ್ತ್ರದಲ್ಲಿ ಹೇಳುವ ಮಾತು ಸ್ತ್ರೀಯರನ್ನು ಪುರಷ ಪ್ರಧಾನ ಸಂಸ್ಕೃತಿಗೆ ಅಧೀನವನ್ನಾಗಿ ಮಾಡಲಾಯಿತು. ಜ್ಞಾನವನ್ನು ಉಳ್ಳುವುದನ್ನು ಪುರುಷರು ಮಾತ್ರ ಪರಿಭಾವಿಸಿಕೊಳ್ಳುವ ಸಾಧನವೆನ್ನಲಾಗಿದೆ. ಅವರು ಮಾತ್ರ ಮನೆಯ ಹೊರಗೆ ಅಂದರೆ ಸಾರ್ವಜನಿಕವಾಗಿ ದುಡಿಮೆ ಮಾಡುತ್ತಾರೆ. ಪ್ರಪಂಚದ ವ್ಯವಹಾರಗಳ ಜೊತೆಗೆ ಪುರುಷರೇ ಬಾಗಿಯಾಗಿರುತ್ತಾರೆ ಎಂಬ ಕಲ್ಪನೆ ಸೃಷ್ಟಿಸಿ ಜ್ಞಾನದ ಉತ್ಪಾದನೆ ಮಹಿಳೆಯರಿಂದ ಸಾಧ್ಯವಿಲ್ಲ. ಅವರು ನಾಲ್ಕು ಗೋಡೆಯ ನಡುವೆಯೆ ಸಂಗೋಪನೆಗೆ ಸೀಮಿತರಾದವರು ಎನ್ನುವಂತಹ ಚೌಕ್ಕಟನ್ನು ಹಾಕಲಾಯಿತು.

ಲಾಲನೆ–ಪಾಲನೆ, ಮಕ್ಕಳ ಆರೈಕೆ, ಪರೋಪಕಾರ ಮುಂತಾದವು 'ನೈಸರ್ಗಿಕವೆಂದು 'ಪ್ರಾಕೃತಿಕವೆಂದು 'ಜೈವಿಕವೆಂದು ನಿರ್ಲಕ್ಷಕ್ಕೆ ಒಳಪಡಿಸಿ ಸಂಗೋಪನಾ ದುಡಿಮೆಯನ್ನು ಸಾಂಪ್ರಾದಾಯಿಕ ಅರ್ಥಶಾಸ್ತ್ರದ ಚೌಕ್ಕಟ್ಟಿನಿಂದ ಹೊರಗಿಟ್ಟು. ಪುರುಷರ ಸಂಪಾದನೆಯನ್ನು ಮಾತ್ರ ಅರ್ಥಶಾಸ್ತ್ರದ ಮಾನದಂಡದಲ್ಲಿ ಒಳಪಡಿಸಿ ಮಹಿಳೆಗೆ ಪ್ರಾಧ್ಯಾನತ್ಯೆ ನೀಡದೆ ಇರುವುದು ಕಂಡುಬರುತ್ತದೆ. ಸಂಗೋಪನ ದುಡಿಮೆ ಸಂಪಾದನಾ ದುಡಿಮೆಯಷ್ಟೇ ಮಹತ್ವವನ್ನು ಹೊಂದಿದ್ದರು ಕಡೆಗಣೆಸಲಾಗಿದೆ.

ಡೆಸ್‌ಗ್ಯಾಸ್ಪರ್ ಮತ್ತು ಸ್ಟೇವರಿಸ್ ಸಂಗೋಪನಾ ದುಡಿಮೆಯಲ್ಲಿ ಮಹಿಳೆಯರ ಪಾತ್ರವನ್ನು ಮಾರುಕಟ್ಟೆ ಸಂಬಂಧಿಸಿದ ಉತ್ಪಾದನೆಗೆ ಪೂರಕವೆಂದು ಬಣ್ಣಿಸಿದ್ದಾರೆ. ಅವರ ಪ್ರಕಾರ ಮನೆಗೆಲಸ, ಸಂತಾನೋತ್ಪತ್ತಿ, ದುಡಿಮೆ ಹೊಲ ಗದ್ದೆಗಳಲ್ಲಿ ದುಡಿಯುವುದು, ಗಂಡನ ಸೇವೆ, ಮಕ್ಕಳ ಪಾಲನೆ, ಅಲ್ಲದೇ ಹೊಲ ಗದ್ದೆಯಲ್ಲಿ ದುಡಿಯುವವರಿಗೆ ಬುತ್ತಿ ಒಯ್ಯುವುದು, ಶುಶ್ರೂಷೆ ಮುಂತಾದವುಗಳು ಸಂಪಾದನೆಗೆ ಸಂಬಂಧಿಸಿದ ದುಡಿಮೆಗೆ ಪೂರಕವಾಗಿ ಕೆಲಸ ಮಾಡುತ್ತವೆ.

ವ್ಯಕ್ತಿಗತವೆನ್ನುಬಹುದಾದ ಸಂತಾನೋತ್ಪತ್ತಿ ಮಕ್ಕಳ ಲಾಲನೆ ಪಾಲನೆ, ಶುಶ್ರೂಷೆ ಮುಂತಾದವು ಕೂಡ ವಿಶಾಲ ಅರ್ಥದಲ್ಲಿ ಸಾರ್ವಜನಿಕವಾದ ಕಾರ್ಯಗಳಾಗಿವೆ ಸಂತಾನೋತ್ಪತ್ತಿ, ಮಕ್ಕಳ ಲಾಲನೆ, ಪಾಲನೆ ಎಷ್ಟರಮಟ್ಟಿಗೆ ವ್ಯಕ್ತಿಗತ ಸಂಗತಿಗಳಾಗಿವೆಯೋ ಅಷ್ಟರಮಟ್ಟಿಗೆ ಅವು ಸಾಮಾಜಿಕ ಜವಾಬುದಾರಿಗಳಾಗಿವೆ.

ಸಮಾಜದ ಸುಸ್ಥಿರಗತಿ ಬೆಳವಣಿಗೆಯಲ್ಲಿ ಸಂತಾನೋತ್ಪತ್ತಿ – ಸಂಗೋಪನೆಯ ಕಾರ್ಯಕೊಡುಗೆ ಮಹತ್ವದ್ದಾಗಿದೆ.[೧೬]

ಮಹಿಳೆಯನ್ನು ತಾಯಿಗೆ, ಮಕ್ಕಳಿಗೆ, ಹೆಂಡತಿಗೆ, ಕುಟುಂಬಕ್ಕೆ ಸಂವಾದಿಯಾಗಿ ಪರಭಾವಿಸಿಕೊಂಡು ಬರಲಾಗಿದೆ. ಅವಳ ಬದುಕು ಕುಟುಂಬದ ಜೊತೆಯಲ್ಲಿ ಲೀನವಾಗಿ–ವಿಲೀನವಾಗಿ ಹೋಗಿದೆ. ಅವಳಿಗೂ ತನ್ನವೂ ಅಂತ ಹಿತಾಸಕ್ತಿಗಳಿರುವುದಿಲ್ಲವೆಂದು ವಾದಿಸಲಾಗಿದೆ. ಅವಳ ಹಿತಾಸಕ್ತಿಗಳೇನಿದ್ದರೂ ಕುಟುಂಬ, ಗಂಡ, ಮಕ್ಕಳು ಮಾತ್ರ ಇದು ಪುರುಷಶಾಹಿಯು ರೂಪಿಸಿದ ಸಂಕಥನವಾಗಿದೆ. ಅವಳು 'ತ್ಯಾಗ'ಮಯಿಯಾಗಿ ಮನ್ನಣೆ ಪಡೆಯಬೇಕಾದರೆ ಅವಳು ಪರರ ಹಿತಾಸಕ್ತಿಗಾಗಿ ಮಾತ್ರ ದುಡಿಮೆ ಮಾಡಲಾಗುತ್ತದೆ. 'ತ್ಯಾಗಮಯಿ ಗುಣವನ್ನು ಪುರುಷಶಾಹಿಯು ಮಹಿಳೆಯರ ಮೇಲೆ ಹೇರಿದೆ ತ್ಯಾಗದ ಗುಣ ಒಳ್ಳೆಯದು ಮತ್ತು ಅದು ಮಹಿಳೆಯರಿಂದ ಅಪೇಕ್ಷಣೀಯವಾದುದು ಎಂದು ಹೇಳುವುದಕ್ಕೆ ಭಾಗೀರಥಿಯಂತಹ ಮಹಿಳೆಯರ ಪಾತ್ರಗಳು ತ್ಯಾಗದ ರೂಪವಾಗಿ ಚಿತ್ರಿಸಲಾಗಿದೆ. ಮಹಿಳೆ ಸಮಾಜಕ್ಕಾಗಿ ಕುಟುಂಬದ ಒಳಿತಿಗಾಗಿ ತನ್ನ ಪ್ರಾಣವನ್ನೇ ಅರ್ಪಿಸುವ ಗುಣ ಸ್ವಭಾವವು ತ್ಯಾಗಮಯಿಯಾದುದು ಎಂದು ಹೇಳುವುದು. ಅವಳು ಶೋಷಣೆಗೆ ಸಾಹಿತ್ಯ ಸಂಸ್ಕೃತಿಯಲ್ಲಿ ಅದರಲ್ಲೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಅಬಲೆ ಎಂಬ ಆರೋಪಗಳು ಹುಟ್ಟಿಕೊಂಡಿದ್ದು. ಅವುಗಳಿಂದ ಹೊರಬರುವ ನೆಲೆಯಲ್ಲಿ ಮಹಿಳಾ ಪ್ರಧಾನವಾದ ಚಿಂತನೆಗಳು ಹುಟ್ಟಿಕೊಂಡಿವೆ. ಮಾತೃಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಗೆ ಸಿಗುವ ಪ್ರಧ್ಯಾನತೆಯನ್ನು ಕುರಿತು ಈಗಿನ ಮಹಿಳಾ ಅಥವಾ ಸ್ತ್ರೀವಾದ ಚಿಂತನೆಗಳ ಮೂಲಕ ತಾನು ಪುರುಷನಿಗೆ ಸರಿಸಮಾನವಾಗಿ ನಿಲ್ಲುವ ಪ್ರವೃತ್ತಿಯನ್ನು ಬೆಳಸಿಕೊಳ್ಳುವಲ್ಲಿ ಈ ರೀತಿಯ ಸ್ತ್ರೀ ಸಂಸ್ಕೃತಿಯ ಚಿಂತನೆಗಳು ಹುಟ್ಟಿಕೊಳ್ಳುತ್ತಿವೆ. ಉತ್ಪದನೆ ದುಡಿಮೆ, ಕೌಟುಂಬಿಕ ದುಡಿಮೆ ಮತ್ತು ಸಂತಾನೋತ್ಪತ್ತಿ ದುಡಿಮೆಯಲ್ಲಿ ಮಹಿಳೆ ಪಾಲಗೊಳ್ಳುತ್ತಿದ್ದು ಪುರುಷನು ಮಾತ್ರ ಉತ್ಪಾದನೆ ದುಡಿಮೆಗೆ ತನ್ನನ್ನು ಸೀಮಿತಗೊಳಿಸಿ ಕೊಂಡಿದ್ದಾನೆ.

ಜನಪದ ಬದುಕಿನಲ್ಲಿ ಕೃಷಿ ಮತ್ತು ಕೃಷಿಗೆ ಪೂರಕವಾದ ಪ್ರಕೃತಿಯೊಂದಿಗೆ ಮುಖ್ಯವಾಗಿ ಮತ್ತು ಪ್ರಧಾನವಾಗಿ ಪಾಲಗೊಂಡವಳು ಮಹಿಳೆ. ಆಕೆ ಜನಪದ ಸಾಹಿತ್ಯ ಸಂಸ್ಕೃತಿಯ ಸ್ಥಾಯಿರೂಪ. ಜನಪದರ ಬದುಕಿನಲ್ಲಿ ಫಲವಂತಿಕೆಯ ಸಂಕೇತವಾದ ಸ್ತ್ರೀಶಕ್ತಿ, ಸೃಷ್ಟಿಕರ್ತೆ, ಕುಲದೇವತೆ, ಗ್ರಾಮದೇವತೆ, ಮಾತೆ, ದೈವಿ ಸ್ವರೂಪಳು ಹೀಗೆ ಹಲವು ರೂಪಗಳನ್ನು ಹೊಂದಿದವಳು. ಶಂಬಾ ಅವರೇ ತಮ್ಮ ಕರ್ನಾಟಕದ ಸಂಸ್ಕೃತಿಯ ಪೂರ್ವಪೀಠಕೆ ಅಧ್ಯಯನದಲ್ಲಿ "ಮಾತೃ ದೇವತೆಯ ಆರಾಧನೆ, ಮಾತೃಪ್ರಧಾನ ಮೌಲ್ಯಗಳು, ಪುರುಷ ಪ್ರಧಾನ ವೈದಿಕ ಸಂಸ್ಕೃತಿಗಿಂತ ಮೊದಲೇ ಇಲ್ಲಿ ಬದುಕಿದ್ದವು. ಕೊನೆಗೆ ವೈದಿಕ ಸಂಸ್ಕೃತಿ ಕೂಡ ತನ್ನ ಆ ಮೌಲ್ಯಗಳನ್ನು ಸ್ವೀಕರಿಸಬೇಕಾಯಿತು.[೧೭]

ಮಾತೃದೇವತೆಗಳ ಆರಾಧನೆಯು ಚರಿತ್ರೆ ಪೂರ್ವಕಾಲದಲ್ಲಿ ಬಳಕೆಯಲ್ಲಿ ಇದ್ದಿತ್ತೆಂಬುದಕ್ಕೆ ವಿಫುಲ ಸಾಕ್ಷಾಧಾರಗಳು ದೊರಕಿವೆ. ಹರಪ್ಪ ಮೆಹೆಂಜೋದಾರೋ ಉತ್ಖನಗಳಲ್ಲಿ ದೊರಕಿರುವ ಅಸಂಖ್ಯಾತ ಸ್ತ್ರೀ ವಿಗ್ರಹಗಳು ಮಾತೃದೇವತಾ ಪಂಥಕ್ಕೆ ಸಂಬಂಧಿಸಿವೆ ಆಗಿವೆ. ಜನಪದರ ಬದುಕು ಮತ್ತು ಸಂಸ್ಕೃತಿಯು ಮಾತೃ ದೇವತಾಪಂಥಕ್ಕೆ ಸೇರಿರುವುದರಿಂದ ಹಾಗೂ ವೈದಿಕ ಪರಂಪರೆಯ ಮೌಲ್ಯವ್ಯವಸ್ಥೆಯನ್ನು ಅನೇಕ

ನೆಲೆಗಳಲ್ಲಿ ಪ್ರಶ್ನಿಸುವ ಪ್ರತಿರೋಧಿಸುವ ಆಶಯಗಳನ್ನು ಪ್ರಕಟಿಸುವುದರಿಂದ ಸಂಸ್ಕೃತಿಯ ಅಧ್ಯಯನಕ್ಕೆ ಸಂಘರ್ಷಗಳನ್ನು ಸಂಕರಗಳನ್ನು ಒಳಗೊಂಡಿರುವ ಆಕರಗಳನ್ನು ಹುಡುಕಿ ವಿಶ್ಲೇಷಿಸುವುದು ಚಾರಿತ್ರಿಕವಾಗಿ ಮಹತ್ವದ್ದಾಗಿದೆ.[೨೮] ಇಲ್ಲಿ ಮಾತೃಪ್ರಧಾನ ಸಂಸ್ಕೃತಿ ಪ್ರಕೃತಿ ಆರಾಧಕರಾದ ದ್ರಾವಿಡರ ಜೀವನದಲ್ಲಿ ಕಂಡುಬರುತ್ತದೆ. ಮಹಿಳೆ ಭಾರತೀಯ ಮತ್ತು ಕರ್ನಾಟಕ ಸಂಸ್ಕೃತಿಯಲ್ಲಿ ಪ್ರಮುಖ ಪಾತ್ರವಹಿಸಿದ್ದು ಸಂಸ್ಕೃತಿ ತತ್ವಸಿದ್ಧಾಂತವನ್ನು ತನ್ನ ಬದುಕಿನಲ್ಲಿ ಹೊಂದಿರುವುದು ಬೆಳಕಿಗೆ ಬರುತ್ತದೆ.

ಜಾತ್ರೆಗಳು ಗ್ರಾಮೀಣ ಜನರ ಬದುಕಿನ ವಿಶ್ರಾಂತಿಯ ಹಾಗೂ ಪರಸ್ಪರ ನೋವು-ನಲಿವುಗಳನ್ನು ಹಂಚಿಕೊಳ್ಳುವ ಸಹಕಾರ ಮನೋಭಾವದಿಂದ ಮನರಂಜನೆಯ ದಿನಗಳಾಗಿ ಆಚರಿಸುತ್ತಿದ್ದರು. ಹಬ್ಬಗಳು ಪ್ರಮುಖವಾಗಿ ಗ್ರಾಮದೇವತೆಯ ಜಾತ್ರೆಗಳಾಗಿದ್ದವು. ಆಶಾಢ ಮಾಸದ ಪೂಜೆ, ಬನ್ನಿ ಹಬ್ಬ, ನಾಗರಪಂಚಮಿ, ದೀಪಾವಳಿ, ಕಾರ ಹುಣ್ಣಿಮೆ, ಎಳ್ಳ ಅಮವಾಸ್ಯೆ ಸಂಕ್ರಾಂತಿ ಮೊದಲಾದವು.

ಈ ಹಬ್ಬಗಳ ವಿಶೇಷತೆ ಊರಿನಲ್ಲಿ ಯಾವುದೇ ಬರಗಾಲ ಬಾರದಿರಲಿ ಮಳೆಯಾಗಿ ಬೆಳೆಗಳು ಸಮೃದ್ಧಿಯಾಗಿ ಬರಲೆಂದು ಆಚರಿಸಲಾಗುತ್ತಿತ್ತು. ಮಳೆ ಸರಿಯಾದ ಸಮಯಕ್ಕೆ ಬರದೇ ಇದ್ದಾಗ, ಇಲ್ಲವೇ ಊರಿನಲ್ಲಿ ಇನ್ನಿತರೇ ಸಾಂಕ್ರಾಮಿಕ ರೋಗಗಳು ಹೆಚ್ಚಿದಾಗ ದೇವಿ ಮುನಿಸಿಕೊಂಡಿದ್ದಾಳೆಂದು ಅವಳನ್ನು ಶಾಂತಮಾಡಲು ಊರನ್ನು ಸ್ವಚ್ಛಗೊಳಿಸಿ ವಾರವೆಂದು ತಾಯಿಗೆ ಮಡಿಯಿಂದ ತೊಯಿದ ಬಟ್ಟೆಯಿಂದ ೫ ವಾರಗಳವರೆಗೆ ನೀರು ಹಾಕಿ ದೂಪ ನೈವೇದ್ಯ ಮಾಡಿ ದೇವಿಯನ್ನು ಊರ ತುಂಬಾ ಮೆರವಣಿಗೆ ಮಾಡಿ ದೇವಿಯ ಕೃಪೆಗೆ ಪಾತ್ರರಾಗಲಾಗುತ್ತಿತ್ತು. ಇನ್ನು ಹಬ್ಬ-ಹರಿದಿನಗಳಲ್ಲೂ ಎಲ್ಲ ವರ್ಗದ ಜನರು ಒಟ್ಟಿಗೆ ಸೇರಿ ಐಕ್ಯತೆ ಮತ್ತು ಸಹಕಾರ ಮನೋಭಾವದಿಂದ ಭಾಗಿಯಾಗಿ ಪರಸ್ಪರ ಸಂತೋಷದಿಂದ ಬಾಳುವ ಗ್ರಾಮೀಣ ಜೀವನ ಕ್ರಮ ಕನ್ನಡ ಸಂಸ್ಕೃತಿಯ ನಿಜವಾದ ಚಿತ್ರಣವಾಗಿದೆ.

ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕವಾದ ಆಚರಣೆಗಳವರೆಗೂ ಅದರ ವ್ಯಾಪ್ತಿ ಹರಡಿದೆ. ಸಂಸ್ಕೃತಿ ಎಂಬುದು ಸಮಾಜ ವಿಜ್ಞಾನಿಗಳ ಪ್ರಮುಖ ಕಲ್ಪನೆಯೊಂದಾಗಿದೆ. ಸಮಾಜದ ಅಧ್ಯಯನವೂ ಸಂಸ್ಕೃತಿಯ ಅಧ್ಯಯನವಾಗಿದೆ. ಸಂಸ್ಕೃತಿಯು ಮಾನವ ಸಮಾಜದ ಉಸಿರು ಅದು ಮಾನವನ ಸಮೂಹ ಜೀವನದ ಅಭಿವ್ಯಕ್ತಿ ಮಾನದಂಡವನ್ನು ಸಮೂಹ ಜೀವಿಯಾಗಿ ಇತರರೊಂದಿಗೆ ಸಹಕಾರ ಮನೋಭಾವನೆಯಿಂದ ಸಮರಸಗೊಂಡು ಜೀವಿಸುವಂತಹ ಪರಿಸರವನ್ನು ನಿರ್ಮಿಸಿಕೊಳ್ಳಲು ಪರಿಸರವನ್ನು ನಿರ್ಮಿಸುವುದು ಸಂಸ್ಕೃತಿಯೂಗಿದೆ. ಸಾಂಸ್ಕೃತಿಕ ಪರಿಸರದಲ್ಲೇ ವ್ಯಕ್ತಿಯ ವ್ಯವಹಾರ ಜ್ಞಾನ ಬೆಳವಣಿಗೆ ಹೊಂದುವದು ಆತನ ಶಕ್ತಿ ಸಾಮರ್ಥ್ಯ ಪ್ರಕಟವಾಗುವ ವೇದಿಕೆಯನ್ನು ನಿರ್ಮಿಸುವುದು ಸಂಸ್ಕೃತಿಯಾಗಿದೆ.

ಚೆಂಚಿ ಜಿಲ್ಲೆಯ ಹಲವು ಕುಟುಂಬಗಳಲ್ಲಿ 'ಅರುಣಾಚಲ ಪುರಾಣಂ'ನ ಹಸ್ತಪ್ರತಿಯ ಪ್ರತಿಗಳಿವೆ. ಯಾವುದೇ ಒಳ್ಳೆಯ ಕೆಲಸವನ್ನು ಮಾಡುವ ಮೊದಲು ಅಥವಾ ಮದುವೆ ನಿರ್ಧರಿಸುವ ಮುನ್ನ ಈ ಪುರಾಣದ ತಾಳಯೋಲೆಗಳನ್ನು ಪರಾಮರ್ಶಿಸುತ್ತಾರೆ ತಿರುಮಣಚ್ ಚರುಕ್ಕಮ್ ಅಥವಾ ಶುಭಪ್ರದದಾರ

ಪಡದೊಡನೆ ಆರಂಭವಾಗುವ ಯಾವುದಾದರೂ ಪದ್ಯ ಪಾದ ಕಣ್ಣಿಗೆ ಬಿದ್ದರೆ ಸಂಪದ್ಭರಿತ ಜೀವನಕ್ಕೆ ಅದು ಶುಭಕುನವೆಂದು ಭಾವಿಸಲಾಗುತ್ತದೆ. ಎಷ್ಟೊ ಹಸ್ತಪ್ರತಿಗಳನ್ನು ಈ ರೀತಿ ಬಳಸಲಾಗುತ್ತಿದೆ.[೧೯]

ಜನಪದ ಬದುಕಿನ ಬೇರೆ ಬೇರೆ ಬಗೆಯ ಆಚರಣೆಗಳು, ಕಲೆಗಳು, ವ್ಯಕ್ತಿ ಸಂಬಂಧಿತ ಕಾವ್ಯಗಳು ಸಂಗ್ರಹಗಳ ರೂಪದಲ್ಲಿ ಮುದ್ರಿತಗೊಂಡವು. ಆಶಯ ಮತ್ತು ಮೌಲ್ಯಗಳ ದೃಷ್ಟಿಯಿಂದ ಅದು ಮಾತಿನ ಪರಂಪರೆಗೆ ಪರ್ಯಾಯವಾದದ್ದು ಎನ್ನುವುದಕ್ಕಿಂತ ಪ್ರತ್ಯೇಕವಾದದ್ದು ಎನ್ನುವುದು ಸರಿಯಾದೀತು. ಜಾನಪದ ಪಠ್ಯವೊಂದು ಪ್ರದರ್ಶನ, ಶೋತೃಗಳ ಸಂದರ್ಭಾನುಸಾರ ಬೇರೆ ಬೇರೆ ಸ್ವರೂಪವನ್ನು ಪಡೆಯುತ್ತದೆ. ಆದರೆ ಅಕ್ಷರವು ಈ ಎಲ್ಲಾ ಪರಿವರ್ತನೆಯ ಚಲನೆಯನ್ನು ದಾಖಲಿಸಿಕೊಳ್ಳಲು ಸಾಧ್ಯವಾಗಲಾರದು.

ಸಂಸ್ಕೃತಿ ಸಾಮಾಜಿಕವಾದುದು, ವೈಯಕ್ತಿವಾದುದಲ್ಲ ಪ್ರತಿಯೊಬ್ಬ ವ್ಯಕ್ತಿ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಸಾಗಿಸುವ ಮತ್ತು ಸಂಪರ್ಕ ಕಲ್ಪಿಸುವ ಕಾರ್ಯದಲ್ಲಿ ಭಾಗವಹಿಸುತ್ತಾನೆ. ಆದರೂ ಸಂಸ್ಕೃತಿ ಸಾಮಾಜಿಕವಾದುದು, ಮಾನವ ಸಮೂಹದ ಸಂಪರ್ಕ ಪಡೆಯದೆ ಜೀವನವನ್ನು ರೂಪಿಸಿಕೊಳ್ಳಲು ಸಂಸ್ಕೃತಿಯನ್ನು ಸೃಷ್ಟಿಸಲಾರನು. ಮಾನವನಲ್ಲಿ ಧೈರ್ಯ, ಸೌಖ್ಯ, ಸಂತೈಸುವಿಕೆ, ದೃಢನೆಚ್ಚಿಕೆ, ಸಹವಾಸ, ಬದುಕು ಬೆಲೆಯುಳ್ಳದ್ದೆಂಬ ಭಾವನೆ ಮತ್ತು ಯಶಸ್ಸಿನ ಭರವಸೆ ಇವುಗಳೆಲ್ಲದರ ಅಗತ್ಯವಿದೆ. ಆತ್ಮದ ಹಾಗೂ ಶರೀರದ ಈ ಅಗತ್ಯಗಳನ್ನು ಪೂರೈಸುವುದು ಸಂಸ್ಕೃತಿಯ ಪಾಲಕೊಳ್ಳುವಿಕೆಯ ಕ್ರಿಯೆ, ಜೀವನದ ಹೋರಾಟವನ್ನು ಮುಂದುವರಿಸಲು ಅವನು ಸಮರ್ಥನಾಗಬೇಕಾದರೆ ಅವನಿಗೆ ಸಹವಾಸ, ಧೈರ್ಯ, ಸ್ಫೂರ್ತಿ, ಭರವಸೆ, ಸೌಖ್ಯ, ಪುನರ್ ಅಭಯ ಮತ್ತು ಸಮಾಧಾನ ಇವುಗಳು ಬೇಕಾಗುತ್ತವೆ. ಸಂಸ್ಕೃತಿ ಮನುಷ್ಯನಿಗೆ ಬಲ ಮತ್ತು ದೃಢನೆಚ್ಚಿಕೆಗಳು ಆತ್ಮವಿಶ್ವಾಸ ಸ್ವಾವಲಂಬನೆ ಒಂದು ಭಾವನೆಯನ್ನು ತಂದುಕೊಡುತ್ತದೆ. ಅದು ಅವನಿಗೆ ಬದುಕಿ ಬಾಳಲು ಯೋಗ್ಯವಾದುದೆಂಬ ಭರವಸೆಯಿತ್ತು. ಅದನ್ನು ಬಾಳುವುದಕ್ಕೆ ಅಗತ್ಯವಾದ ದೈರ್ಯೋತ್ಸಾಹವನ್ನು ಅವನಲ್ಲಿ ತುಂಬುತ್ತದೆ. ಅವನ ಸೋಲು ಅಪಜಯದಿಂದ ದುಃಖೋಪಶಮನ ಮಾಡಿ ಅವನಿಗೆ ಆಸರೆ ನೀಡುತ್ತದೆ. ಅವನಿಗೆ ದೇವರಲ್ಲಿ ನಂಬಿಕೆಯನ್ನೊದಗಿಸಿ ಮಾನವ ಗೆಳೆಯರನ್ನು ಒದಗಿಸುತ್ತದೆ. ಇದರಿಂದ ಬೇಸರ ಮಾಯವಾಗಿ ಜೀವನ ಉತ್ಸಾಹ ಪೂರಿತವೂ ಹಿತಕರವೂ ಆಗುತ್ತದೆ. ಈ ಎಲ್ಲಾ ವಿಷಯವನ್ನು ಕ್ರೂಢಿಕರೀಸಿ ಹೇಳುವುದಾದರೆ ಸಂಸ್ಕೃತಿ ಮಾನವನಿಗೆ ಪ್ರಾಮುಖ್ಯ ಅನಂತಶಕ್ತಿ ಮತ್ತು ಸಂಪೂರ್ಣ ಪ್ರಜ್ಞೆಗಳ ಮಾಯೆಯನ್ನು ಒದಗಿಸುತ್ತದೆ. ಮಾನವನ ಈ ಲೌಕಿಕ ಅಲೌಕಿಕ ಅಗತ್ಯಗಳನ್ನು ನಿಸ್ಸಂದೇಹವಾಗಿ ಆಹಾರ, ಆಶ್ರಯ ಮತ್ತು ರಕ್ಷಣೆಗಳಷ್ಟೆ ಸಹಜವಾದವು, ನಿಜವಾಗಿಯೂ ಹೆಚ್ಚು ಉತ್ಸಾಹದಿಂದ ಅವುಗಳನ್ನು ಪಡೆಯುವ ಜೀವನದ ಹೋರಾಟದಲ್ಲಿ ಮಾನವ ಯಶಸ್ವಿಗೊಳ್ಳಲು ಈ ಎಲ್ಲಾ ಅಗತ್ಯಗಳನ್ನು ಪೂರೈಸಿಕೊಳ್ಳಬೇಕಾಗುತ್ತದೆ.

ದೇಹಕ್ಕೆ ಮರದೆಲೆಗಳನ್ನೋ, ಪ್ರಾಣಿಗಳ ಚರ್ಮವನ್ನೋ, ಸುತ್ತಿಕೊಳ್ಳುತ್ತಿದ್ದ ಮನುಷ್ಯ ತನ್ನ ಆರಂಭದ ಕಾಲದಲ್ಲಿ ನಂತರ ಬಟ್ಟೆಯನ್ನು ನೇಯ್ದು ತೊಡುವುದನ್ನು ಕಲಿತುದು ನಾಗರಿಕತೆಯೂ ಹೌದು

ಸಂಸ್ಕೃತಿಯೂ ಹೌದು ಗುಹೆಯಲ್ಲಿ ವಾಸಿಸುವವನು ಮನೆಗಳ ನಿರ್ಮಿಸಿಕೊಂಡಿದ್ದು ಹಸಿಯ ಮಾಂಸವನ್ನು ಹಲ್ಲಿನಿಂದ ಹರಿದು ತಿನ್ನುತ್ತಿದ್ದವನು ಬೆಳೆಯನ್ನು ಬೆಳೆದು ಬೇಯಿಸಿ ತಿನ್ನುವುದನ್ನು ಕಲಿತುದು ಹೀಗೆ ಜೀವನದ ಉಪಕಾಲದ ಅವನ ಈ ಸಾಧನೆಗಳು ಅವನ್ನು ಯಾವ ಹೆಸರಿಸನಿಂದಲೇ ನಾವು ಕರೆಯಲಿ, ಅವು ಮಾನವೀಯತೆಯತ್ತ ಅವನನ್ನು ಕೊಂಡೆಯ್ದವು. ಭಾಷೆಯನ್ನು ಕಟ್ಟಿಕೊಂಡ ನಂತರ ಅವನ ಅಭಿವ್ಯಕ್ತಿ ನೆಲೆಗಳೆ ಬದಲಾಗಿ ಮಾನವೀಯತೆಯ ವಿಚಾರಧಾರೆಗಳು ರೂಪುಗೊಂಡವು. ಬದುಕುವ ಕ್ರಮವನ್ನು ಬದಲಾಯಿಸಿಕೊಂಡರು. ಬರೀ ದೇಹದ ಹಸಿವನ್ನು ಹಿಂಗಿಸಿಕೊಳ್ಳದೇ ಮಾನಸಿಕ ಸದೃಢರಾಗಿ ಮಾನವೀಯತೆಯ ನೆಲೆಗಳನ್ನು ರೂಪಿಸಿಕೊಂಡರು.

ಸಂಸ್ಕೃತಿಯು ಪುರಾತನವಾಗಿದ್ದು ಅದು ಹಸ್ತಪ್ರತಿಯಂತಹ ಗ್ರಂಥಗಳಿಗೆ ಸೀಮಿತವಾಗದೇ ಪಠ್ಯಗಳ ಆಚೆಯೆ ಅಮೂರ್ತದ ನೆಲೆಯಲ್ಲಿ ಹುಟ್ಟಿಕೊಂಡದ್ದು ಬರವಣಿಗೆ ರೂಪಕ್ಕಿಂತ ಹಿಂದಿನದು, ಯೂರೋಪಿನ ನವನಾಗರಿಕತೆ ಇಲ್ಲಿ ಬೇರೂರುವುದಕ್ಕಿಂತ ಮುಂಚೆ ಅಕ್ಷರಜ್ಞಾನರಲ್ಲದ ಸುಸಂಸ್ಕೃತ ಜನರು ಬಹುಸಂಖ್ಯಾತ ಸಮುದಾಯಗಳು ನಮ್ಮಲ್ಲಿದ್ದರು. ಅವರನ್ನು ಕುರಿತು ಮಾತನಾಡಬೇಕಾದರೆ 'ಆತ್ಮಸಭ್ಯ' ಎನ್ನುವಂತಹ ಮಾತುಗಳನ್ನು ಬಳಸಲಾಗುತ್ತಿತ್ತು ಸಭ್ಯತೆಯೇ, ಸಹಭಾಗಿತ್ವ, ಸಭಾಯೋಗ್ಯತೆಯೇ ಸಂಸ್ಕೃತಿಯಾಗಿತ್ತು. ಗ್ರಾಮೀಣರಲ್ಲಿ ಅಕ್ಷರ ಜ್ಞಾನ ತಿಳಿಯದವರಿದ್ದರು ಸುಜ್ಞಾನಿಗಳಾಗಿದ್ದು ಅವರು ಬದುಕನ್ನು ಕಟ್ಟಿಕೊಳ್ಳುವ ಮನೋಭಾವನೆಯ ತತ್ವ ಸಿದ್ಧಾಂತವನ್ನು ಕೃಷಿಕರು, ಕುಶಲಕರ್ಮಿಗಳು, ಮಹಿಳೆಯರು, ಪಾಮರರಂತಹ ಜನಸಾಮಾನ್ಯರು ಸಂಸ್ಕೃತಿವಂತರಾಗಿದ್ದರು. ಮಾನಮರ್ಯಾದೆಯಿಂದ ಬದುಕುತ್ತಿದ್ದು ಸಂದರ್ಭೋ ಚಿತ್ತವಾಗಿ ಯಾವುದೂ ದೊಡ್ಡದು ಯಾವುದು ಚಿಕ್ಕದೆಂಬ ತಾರತಮ್ಯವನ್ನು ಅವರು ಚೆನ್ನಾಗಿ ತಿಳಿಯಬಲ್ಲವರಾಗಿದ್ದರು. "ವಿದ್ಯಾವಂತರೆಂದೆನಿಸಿಕೊಂಡಿದ್ದ ಜನರು ತಮ್ಮಲ್ಲಿ ಎದ್ದಿದ್ದ ಜಗಳ ತಕರಾರುಗಳನ್ನು ಈ ನಿರಕ್ಷರು ಸಭ್ಯರು ಕೊಟ್ಟ ತೀರ್ಮಾನವನ್ನು ಗೌರವದಿಂದ ಕಾಣುವ ಮೂಲಕ ಅವರಿಗೆ ಮನ್ನಣೆಯನ್ನು ನೀಡುತ್ತಿದ್ದರು" ಇದರಿಂದ ಪಠ್ಯದ ಆಚೆಯೂ ಸಂಸ್ಕೃತಿಯೆಂಬುದು ಹೇಗೆ ಚಲನಶೀಲವಾಗಿದೆ ಎಂದು ತಿಳಿಯುವುದರ ಜೊತೆಗೆ ಮೂರ್ತಕ್ಕಿಂತ ಅಮೂರ್ತದ ನೆಲೆಯಲ್ಲಿ ಸಂಸ್ಕೃತಿ ಹೆಚ್ಚು ವ್ಯಾಪಿಸಿಕೊಂಡಿತು. ಈ ಪರಿಕಲ್ಪನೆಯಲ್ಲಿ ಮುಂದಿನ ನನ್ನ ಚಿಂತನೆಗಳನ್ನು ವಿಸ್ತರಿಸಬಯಸುತ್ತೇನೆ.

**ಅಡಿಟಿಪ್ಪಣಿಗಳು**

೧. ರಹಮತ್ ತರಿಕೇರೆ, ಸಂಸ್ಕೃತಿ ಅಧ್ಯಯನ; ಪು.೧, ೨೦೦೮
೨. ವೀರೇಶ ಬಡಿಗೇರ, ಹಲಗೆ ಬಳಪ; ಪುಟ.೭೦, ೨೦೦೫
೩. ಅದೇ, ಪು.೭೧, ೨೦೦೫
೪. ಬರಗೂರ ರಾಮಚಂದ್ರಪ್ಪ; ಸಂಸ್ಕೃತಿ ಮತ್ತು ಸೃಜನಶೀಲತೆ; ಪು.೧, ೧೯೮೯
೫. ವೀರೇಶ ಬಡಿಗೇರ, ಹಲಗೆ ಬಳಪ; ಪುಟ.೭೨, ೨೦೦೫

೬. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪರ್ಯೀಯ ನೆಲೆಗಳು; ಪು.೧೫೩, ೨೦೦೬

೭. ಕುವೆಂಪು ಮತ್ತು ಮಾಸ್ತಿ(ಸಂ), ಕುಮಾರವ್ಯಾಸ ವಿರಚಿತ ಕರ್ಣಾಟಕ ಭಾರತ; ಪು.೪೯, ೧೯೮೮

೮. ವೀರೇಶ ಬಡಿಗೇರ, ಹಲಗೆ ಬಳಪ; ಪುಟ.೭೩ ೨೦೦೫

೯. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪರ್ಯೀಯ ನೆಲೆಗಳು; ಪು.೧೪೨, ೨೦೦೬

೧೦. ಅದೇ, ಪು.೧೪೨, ೨೦೦೬

೧೧. ವೀರೇಶ ಬಡಿಗೇರ, ಹಲಗೆ ಬಳಪ; ಪುಟ.೭೩ ೨೦೦೫

೧೨. ಅದೇ, ಪು.೮೪, ೨೦೦೫

೧೩. ಎಂ.ವಿ. ಸೀತಾರಾಮಯ್ಯ(ಸಂ), ಶ್ರೀವಿಜಯ ಕೃತ ಕವಿರಾಜಮಾರ್ಗ; ಪು.೭೯, ೨೦೧೧

೧೪. ಅದೇ, ಪು.೭೯, ೨೦೧೧

೧೫. ಶಂಬಾ ಜೋಶಿ, ಸಂಸ್ಕೃತಿ ಚಿಂತನೆ; ಪು.೧೩, ೧೯೯೨

೧೬. ಟಿ.ಆರ್. ಚಂದ್ರಶೇಖರ; ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ; ಪು.೧೩–೧೪, ೨೦೦೮

೧೭. ಶಂಬಾ ಜೋಶಿ, ಸಂಸ್ಕೃತಿ ಚಿಂತನೆ; ಪು.೦೩, ೧೯೯೨

೧೮. ಕೆ.ವೈ. ನಾರಾಯಣಸ್ವಾಮಿ, ನೀರ ದೀವಿಗೆ; ಪು.೧೩, ೨೦೦೯



ಜ್ಞಾನವು ಲಿಖಿತಗೊಂಡಂತೆ ತನ್ನ ಚಲನಶೀಲತೆಯನ್ನು ಕಳೆದುಕೊಳ್ಳುವ ಸಂಭವವೇ ಹೆಚ್ಚು. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳು ಲಿಖಿತ ಮತ್ತು ಸಂವಹನ ಪಾತಳಿಯಲ್ಲಿ ಸಂರಕ್ಷಣೆ ಸಂವರ್ಧನೆ ಹಾಗೂ ಪುನರುತ್ಪಾದನೆಗೊಳ್ಳುತ್ತಾ ಬಂದವು. ಇಲ್ಲಿ ಧಾರ್ಮಿಕ ಮತ್ತು ಧಾರ್ಮಿಕೇತರ ಕಾರಣಗಳು ಪ್ರಭಾವ ಬೀರಿದವು. ಸಾಹಿತ್ಯಕ ಸಂರಕ್ಷಣೆಯ ದೃಷ್ಟಿಯಿಂದ ರಾಮಾಯಣ ಮಹಾಭಾರತದಂತಹ ಮಹಾಕಾವ್ಯಗಳ ಕಥೆಗಳು ಕಾಲಕಾಲಕ್ಕೆ ಮೌಖಿಕ ಹಾಗೂ ಲಿಖಿತ ಪಾತಳಿಯಲ್ಲಿ ಮರುರಚನೆಗೊಳ್ಳುತ್ತ ಬಂದವು. ಮರುರಚನೆಯ ಹಿಂದೆ ಕವಿಗಳ ಲಿಪಿಕಾರರ ಹಾಗೂ ಹಾಡುಗಾರರ ಪಾತ್ರ ಅಷ್ಟೇ ಮುಖ್ಯವಾಗಿದೆ. ಕನ್ನಡದ ಆಯ್ದ ಸಾಹಿತ್ಯ ಕೃತಿಗಳ ಮುಖೇನ ಈ ಚರ್ಚೆಯನ್ನು ಮಾಡಲಾಗಿದೆ.

ಪಂಪನಿಂದ ಹಿಡಿದು ವಚನಕಾರರು ಹರಿಹರ, ರಾಘವಾಂಕ, ಕುಮಾರವ್ಯಾಸ, ಕೀರ್ತನಕಾರರು, ಲಕ್ಷ್ಮೀಶ, ಸರ್ವಜ್ಞ ಇವರ ಕೃತಿಗಳು ಗ್ರಾಮೀಣ ಸಂಸ್ಕೃತಿಯಲ್ಲಿ ಬೆರೆತುಹೋಗಿವೆ. ಇದೂ ಅಲ್ಲದೇ ಪುರಾಣ ಪ್ರವಚನದ ಮೂಲಕ ಜೀವಂತವಾಗಿರುವ ಶೂನ್ಯಸಂಪಾದನೆ, ಬಸವ ಪುರಾಣ, ರಾಜಶೇಖರ ವಿಳಾಸ, ನೇಮಿಜಿನೇಸ ಸಂಗತಿ, ಹರಿಭಕ್ತಿಸುಧೆ, ಕುಮಾರವ್ಯಾಸ ಭಾರತ, ಹರಿಕಥಾಮೃತಸಾರ ಇಂದಿಗೂ ತನ್ನ ಆಕರ್ಷಣೆಯನ್ನು ಕಳೆದುಕೊಂಡಿಲ್ಲ. ವಿಚಿತ್ರವೆಂದರೆ ಮುದ್ರಿತ ಪಠ್ಯಕ್ಕಿಂತ ಹಸ್ತಪ್ರತಿಗಳಲ್ಲಿರುವ ಪಠ್ಯಗಳನ್ನೇ ಆಶ್ರಯಿಸಿ ನಡೆವ ಪುರಾಣ ಪ್ರವಚನ, ಜೋತಿಷ್ಯಗಳು ಹಸ್ತಪ್ರತಿಗಳನ್ನು ಪವಿತ್ರವೆಂದು ಪರಿಭಾವಿಸಿದ್ದು ಕಾಣುತ್ತದೆ.[೧] ಹಸ್ತಪ್ರತಿಗಳ ಮೇಲಿನ ಬರಹವನ್ನು ಪಾವಿತ್ರ್ಯತೆಯ ನೆಲೆಗಟ್ಟಿನಲ್ಲಿ ಪರಿಭಾವಿಸಿಕೊಂಡ ವಿಧಾನ ಕನ್ನಡ ಹಸ್ತಪ್ರತಿ ಸಾಹಿತ್ಯವು ಸಂರಕ್ಷಿಸಿ ಸಂವರ್ಧನೆಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ.

ಮಹಾಭಾರತ ಮಹಾಕಾವ್ಯದ ಮೂಸೆಯಲ್ಲಿ ಪರಿವರ್ತಿತವಾದ ದೊಡ್ಡ ಇತಿಹಾಸ ಕನ್ನಡದಲ್ಲಿದೆ. ಅಸಗ ಪಂಪನಿಂದ ಹಿಡಿದು ಕುಮಾರವ್ಯಾಸ ಲಕ್ಷ್ಮೀಶನಲ್ಲಿ ಹಾಯ್ದು ಭೈರಪ್ಪನವರೆಗೂ ಮಹಾಭಾರತದ ಕಥಾವಸ್ತು ಸಾಹಿತ್ಯ ರಚನಾಕ್ರಿಯೆಗೆ ಪ್ರೇರಣೆ ಒದಗಿಸಿದೆ. ಇಂಥ ಪಠ್ಯ ಮತ್ತು ಪ್ರಯೋಗಗಳ ಸಂಪ್ರದಾಯವನ್ನು ರೂಪಿಸುವ ಮೂಲಕವೇ ಈ ಕನ್ನಡ ಪಠ್ಯಗಳು ಏಕಕಾಲಕ್ಕೆ ಕನ್ನಡದ ಪ್ರಾಂತೀಯತೆಯನ್ನು ಪ್ರಾಂತ್ಯಾತೀತತೆಯನ್ನು ಸಮರ್ಥಿಸುತ್ತವೆ. ಕನ್ನಡವಷ್ಟೇ ಅಲ್ಲದೇ ದಕ್ಷಿಣ ಭಾರತದ ಯಾವ ಕಾವ್ಯ ಸಾಹಿತ್ಯ ಸಂಸ್ಕೃತಿಗಳನ್ನು ತೆಗೆದುಕೊಂಡರೂ ಸಂಸ್ಕೃತ ಶಾಸ್ತ್ರಸಿದ್ಧಾಂತಗಳು ಅಂತರ್ವಾಹಿನಿಯಾಗಿ ಕಾರ್ಯನಿರ್ವಹಿಸುವುದು

ಕಾಣುತ್ತದೆ. ಕನ್ನಡದ ಆರಂಭ ಕಾಲದಿಂದಲೂ ಇಂದಿನವರೆಗೂ ಇದು ಬೇರೆ ಬೇರೆ ಸ್ವರೂಪದಲ್ಲಿರುವುದು ಗಮನಾರ್ಹ.[೨]

ಕಾವೇರಿಯಿಂದಮಾ ಗೋ
ದಾವರಿವರ ಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯ ವಿಲೀನ ವಿಶದ ವಿಷಯ ವಿಶೇಷ[೩]

ಅದಜೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣ ನಗರದಾ ಪುಲಿಗೆಜಿಯಾ
ಸಂದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ಕನ್ನಡದ ತಿರುಳ್[೪]

ಪದನಜಿದು ನುಡಿಯಲುಂ ನುಡಿ
ದುದ್ದನಜಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಜಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್[೫]

ಕನ್ನಡ ನಾಡಿನ ವಿಸ್ತರತೆ, ಶುದ್ಧಗನ್ನಡ ಪ್ರದೇಶ, ಕನ್ನಡ ನಾಡವರ ಕಾವ್ಯಪರಿಣತೆಯನ್ನು ತಿಳಿಸುವುದರ ಜೊತೆಗೆ ಜ್ಞಾನವು ಲಿಖಿತ ಪಠ್ಯಗಳಲ್ಲದೇ ಸಂವಹನ ಪ್ರಧಾನವಾದ ಪಾತಳಿಯ ಮೂಲಕವೂ ಕಾವ್ಯವನ್ನು ಪರಾಮರ್ಶಿಸುವ ಪರಂಪರೆ ಕನ್ನಡದಲ್ಲಿತ್ತು.

.....ಯಿದನು ಬರೆಸಿದವರುದಾರೆಂದರೆ ಕುರುಡಿಗಿ ಬಡಿಗೇರ ಯೀಶ್ವರಪ್ಪನು ಬರೆಸಿರುತ್ತಾನೆ| ಬರದವರುದಾರೆಂದರೆ ಕುರುಡಿಗಿಯಲ್ಲಿ ಬರುವ ವೈದ್ಯವಗ್ನ ಅಕ್ಷಾತೀರ ಸಿರಸಪ್ಪನು ತಂನ ಹಸ್ತಾಕ್ಷರಗಳಿಂದ ಬರೆದಿರುತ್ತಾರೆ. ಯಿದರಲ್ಲಿ ಹಸ್ತದೋಷಗಳು ಬಿದ್ದಿದ್ದರೆ ಜ್ಞಾನಿಗಳಾದ ಮಹಾನುಭಾವಿಗಳು ತಿದ್ದಿವೋದಬೇಕು.[೬]

ಬಹುಮುಖ್ಯವಾಗಿ ಬರವಣಿಗೆ ಎನ್ನುವುದು ದೈಹಿಕ ಶ್ರಮಪ್ರಧಾನವಾದುದೆಂಬುದು ಸ್ಪಷ್ಟ. ಪ್ರತೀಕರಣ ಎನ್ನುವುದು ಕ್ರಿಯೆ ಮತ್ತು ಅರಿವಿನ ಮೂಲಕ ಆಚರಣೆಗೆ ಬರುವಂತದ್ದು. ''ಯನ್ನ ಕಂಗಳು ಜಿಹ್ವೆಕರ್ಣಂಗಳು ಗತಿಮತಿ ಚೈತನ್ಯಕ್ಕೆ ಸಮಸ್ತ ಸದ್ಭಕ್ತ ವೀರಮಾಹೇಶ್ವರುಗಳೇ ಕರ್ತರು'' ಹೀಗೆ ಕ್ರಿಯೆ ಮತ್ತು ಅರಿವು ಪ್ರಧಾನವಾದ ಕೆಲಸವನ್ನು ಶ್ರಮ ಮತ್ತು ಸಂಸ್ಕೃತಿಯೆಂದು ಪ್ರತ್ಯೇಕಿಸಲಾಯಿತು. ರಾಘವಾಂಕನಂತಹ ಕವಿ ಕೂಡ ತನ್ನ ವೀರೇಶ ಚರಿತೆಯಲ್ಲಿ ತಾನು ಬರೆದ ಬರಹವನ್ನು ತಿದ್ದಿ ಓದಬೇಕೆಂದು ಹೇಳುವುದು.[೭] ಬರಹವನ್ನು ನಿರಂತರ ಶುದ್ಧೀಕರಣದ ಮಾನದಂಡದಲ್ಲಿ ನೋಡುವ ಮೂಲಕ ಸಾಹಿತ್ಯವನ್ನು ಆ ಕಾಲದ ವಿಚಾರ ಮತ್ತು ಓದುಗರ ಅಭಿಲಾಷೆಗಳಿಗೆ ಅನುಗುಣವಾಗಿ ಸಂರಕ್ಷಿಸಲಾಯಿತು.

ಈ ಪುಸ್ತಕ ದೇವರ ದಾಸ್ಮೆ ೖಯ್ಯನ ಸಂಪ್ರದಾಯಕ ಚಿತ್ತಾಪುರದ ಅಮಾತಪ್ಪನವರಿಗೆ ..... ಬರೆದುಕೊಟ್ಟ ಪಂಚತಂತ್ರದ ಕಥೆ.[೮]

ಈ ಕಥಾಗರ್ಭವನ್ನು ಬರದವನು ಕಲ್ಯಾಣದ ಕಲಬುರ್ಗಿಯ ನಡುಮಧ್ಯದ ಗ್ರಾಮವಾದ ಗೌಡನಹಳ್ಳಿಯ ಕಿನ್ನರಿಬ್ರಹ್ಮಯ್ಯನ ಸಾಂಪ್ರದಾಯಕರಾದ ಮಲಪ್ಪನವರ ಪುತ್ರನಾದ ಬಸಪ್ಪನು ಬರೆದ ಹಸ್ತಾಕ್ಷರ್

ಚಿತ್ರಗಿ ಹಿರೇಮಠದ ಮುಪ್ಪಿನಸ್ವಾಮಿಗಳ ಶಿಷ್ಯ ಶ್ರೀಮತು ಸಜ್ಜನಶುದ್ಧ ಶ್ರೀಬಸವೇಶ್ವರ ಸಾಂಪ್ರದಾಯಿಕ ಶಿವಭಕ್ತ ಶಿರೋಮಣಿ ಗುರುಲಿಂಗಜಂಗಮಪ್ರೇಮಿ ಬಿಸ್ವರಡ್ಡಿ ಸಂಗನಬಸಪ್ಪನು ತನ್ನ ಸ್ವಹಸ್ತದಿಂದ ತನ್ನ ಮನೋಪ್ರೀತಿಯಲಿ ವೋದಿ ಹೇಳಬೇಕೆಂದು ಬರೆದನು.[೧೦]

ಶ್ರೀಮತು ಷಟ್‌ಸ್ಥಲ ಚಕ್ರವರ್ತಿ ತೋಂಟದಾರ್ಯ ಸಂಪ್ರದಾಯರಾದ ಮುರಿಗೆಯ ಶಾಂತವೀರಯ್ಯನವರ ಪ್ರಬೋಧಕರಾದ ಲೋಚಿನ ರುದ್ರಯ್ಯನವರು.....[೧೧]

ಮುರಿಗಾ ಸಾಂಪ್ರದಾಯಿಕ ಶ್ರೀ ಶಿವಲಿಂಗಬಸವ ಶಾಂತನಿರಂಜನ ಪ್ರಭು ಗಂಗಾಧರ ಗುರುಗಳಿಂದ ಈ ಲೇಖನಕ್ಕೆ ಶುಭಮಸ್ತು.....[೧೨]

ಮೊದಲಾದವು ಲಿಪಿಕಾರರ ಸ್ಥಳ, ಬರೆದ ಸ್ಥಳ, ಬರೆದುಕೊಟ್ಟವರ, ಬರೆಸಿದವರ ಹೆಸರನ್ನು ಕೃತಿಯ ಹೆಸರನ್ನು ತಿಳಿಸುವ ಮಹತ್ವದ ಉಲ್ಲೇಖಗಳಾಗಿವೆ. ಇಂಥ ಬರವಣಿಗೆ ಸಂಪ್ರದಾಯವು ಕನ್ನಡ ಸಾಹಿತ್ಯ ಸಂಸ್ಕೃತಿ ಸಂರಕ್ಷಣೆ ಹಾಗೂ ಸಂವರ್ಧನೆಗೊಳ್ಳುವಲ್ಲಿ ಮಹತ್ವದ ಪಾತ್ರವಹಿಸುತ್ತ ಬಂದಿದೆ.

ಇಂತೆಂಬುದಾಗಿ ಈ ಪುಸ್ತಕಂ ಬರವರ್ಗಂ ಓದುವರ್ಗಂ ಶಿವಾನುಭಾವವಂ ನಿರೂಪಿಸುವರ್ಗಂ ಸಹಸ್ರಕೋಟಿ ನಮಸ್ಕಾರ ಮಾಡುತ್ತೇನೆ| ಯನ್ನ ಭಿನ್ನಪವನವಧರಿಸಿ ಲಾಲಿಸುವರ್ಗಂ ಸಹಸ್ರಕೋಟಿ ನಮಸ್ಕಾರವಂ ಮಾಡುತ್ತಿದ್ದೇನೆ| ಯಿದಂ ಬರದ ನಿಮ್ಮ ಕರುಣದ ಕಂದನಿಗೆ ನಿಮ್ಮ ಕೃಪಾಮೃತ ರಸವನೆರೆದು ನೋಡಿ ಸಲಹಿ ನಿಮ್ಮ ಶ್ರೀಪಾದ ಪದ್ಮಾರಾಧನೆಯಯೆಂದೆಂದು ಪಿಂಗದಂತೆ ಮಾಡಯ್ಯ ಲಿಂಗ ತಂದೆ ಶರಣು ಶರಣಾರ್ಥಿ.[೧೩] ಈ ಉಲ್ಲೇಖವೂ ಲಿಪಿಕಾರನ ವಿನಯತೆ ಜೊತೆಗೆ ತಾನು ರಚಿಸಿದ ಕೃತಿಯ ಸದುಪಯೋಗ ಅದನ್ನು ಕಾಪಾಡಿಕೊಂಡು ಹೋಗಬಹುದಾದ ಸಮುದಾಯವನ್ನು ಧನ್ಯತೆಯಿಂದ ಸ್ಮರಿಸುವ ಮೂಲಕ ತನ್ನ ಕೃತಿಯ ಸಂರಕ್ಷಣೆ ಸಂವರ್ಧನೆಗೆ ಒತ್ತಾಯಿಸಿದ್ದಾನೆ.

ಸಾಹಿತ್ಯಕ ಸಂರಕ್ಷಣೆ ಎನ್ನುವುದು ಮೌಖಿಕವಾಗಿದ್ದರು. ಲಿಖಿತತೆಯನ್ನು ಅವಲಂಬಿಸಿ, ಲಿಖಿತವಾಗಿದ್ದರೆ ಮೌಖಿಕತೆಯನ್ನು ಅವಲಂಬಿಸಿಕೊಂಡು ಸಂರಕ್ಷಣೆಗೊಂಡಿದೆ. ಬಹುಮುಖ್ಯವಾಗಿ ಲಿಪಿಕಾರರನ್ನು ಕಡಿಮೆ ತಿಳಿದವರು. ಅಲ್ಪ ವಿದ್ಯಾಭ್ಯಾಸಿಗಳು ಎಂದು ಪರಿಗಣಿಸುತ್ತ ಬರಲಾಗಿದೆ. ಇವರು ಬೌದ್ಧಿಕವಾಗಿ ಅಂಥ ವಿದ್ವತ್ತನ್ನು ಪಡೆದವರಲ್ಲ. ಕವಿ ವೀರನಾರಾಯಣ ಲಿಪಿಕಾರ ಕುಮಾರವ್ಯಾಸ ಎನ್ನುವ ಮಾತು ಕೂಡ ಕವಿಯನ್ನು ಉನ್ನತವಾಗಿಯೂ ಲಿಪಿಕಾರನನ್ನು ಅದಕ್ಕೆ ವಿರುದ್ಧವಾಗಿಯೂ ಚಿತ್ರಿಸುವಂಥದ್ದಾಗಿದೆ. ಜಾನಪದ ಹಾಡುಗಾರರೂ ಇದಕ್ಕೆ ಹೊರತಾಗಿಲ್ಲ. ಹಾಡಿನ ಆರಂಭದಲ್ಲಿ ಬರುವ ಪಲ್ಲವಿಗಳನ್ನು ಗಮನಿಸಿದರೆ ಸಭಾ ಮರ್ಯಾದೆಗಿಂತ ಸಭೆಯಲ್ಲಿರುವ ಅದೂ ತನಗಿಂತ ಹೆಚ್ಚು ತಿಳಿದಿರುವ (ಅಥವಾ ತಿಳಯದಿರುವ)

ಅಕ್ಷರಸ್ಥ ಲೋಕವನ್ನು ಸಣುಮಂತ ಮಾಡುವ ರೀತಿಯವು. 'ಪಂಡಿತರೆಲ್ಲ ಬಂದ ಕೂಡಿರಿ ವಂದಿಸಿ ಹಾಡತಿನಿ ದೈವಕ| ಇಂದ್ರ ಸಭಾದಾಗ ಚಂದದಿಂದ ಬಂದಕೂಡಿರಿ ಸಣ್ಣ ದೊಡ್ಡವರೆಲ್ಲ' ಎನ್ನುವ ವಿದ್ವತ್ಸಭಾದ ಕಲ್ಪನೆ ಹಾಡುಗಾರರಲ್ಲಿರುತ್ತದೆ. ಯಾರಿರಲಿ ಬಿಡಲಿ ಅದೊಂದು ಪರಂಪರೆಯಾಗಿ ಬೆಳೆದು ಬಂದಿರುವುದು ಇಂಥ ಹಾಡುಗಳಲ್ಲಿ ಕಾಣುತ್ತದೆ. ಹೀಗಾಗಿ ಮೌಖಿಕವಾದ ಹಾಡುಗಾರಿಕೆ ಕ್ರಿಯೆ ಕೂಡ ಲಿಖಿತ ಪರಂಪರೆಯ ಆಸರೆಯನ್ನು ಅವಲಂಬಿಸುವ ಲಕ್ಷಣಗಳನ್ನಿಲ್ಲಿ ಕಾಣುತ್ತೇವೆ. ಉದಾ: 'ಯಾಕ ಹಾಡತಿ ಅಡಮುಟ್ಟ ಹಾಡ ತರ್ಕಶಾಸ್ತ್ರದಾಗ ನೀ ಕಲಿತಿಲ್ಲ' ಎನ್ನುವ ಸಾಲುಗಳಾಗಲೀ 'ಮುತ್ತಿನಂಥ ಮಾತೊಂದು ಹೊತ್ತಿಗಿ ತಗದ ಹೇಳತೀನಿ ಪಂಟಂಗರ ಗೆಳೆತನ ಮಾಡಬಾರದು' ಎನ್ನುವ ಗೀಗೀ ಹಾಡುಗಳ ಸಾಲುಗಳಾಗಲೀ ಲಿಖಿತ ಪಠ್ಯವನ್ನು ತನ್ನ ವಿದ್ವತ್ತಿನ ಮೂಲವನ್ನಾಗಿ ಸ್ವೀಕರಿಸುವುದು ಕಾಣುತ್ತದೆ.[೧೪] ಹೀಗಾಗಿ ಸಾಹಿತ್ಯಕ ಸಂರಕ್ಷಣೆ ಲಿಖಿತ ಮತ್ತು ಮೌಖಿಕ ನೆಲೆಯಲ್ಲಿ ಒಟ್ಟೊಟ್ಟಿಗೆ ಸಂರಕ್ಷಣೆಗೊಂಡಿದೆ.

'ಓದಿನೋಡು ದೇವಿ ಪುರಾಣ ಅರೆಲಿಂದ ಆಗೈತಿ ಸೃಷ್ಟಿ ನಿರ್ಮಾಣ' ಇಂಥ ಹಲವಾರು ಉಲ್ಲೇಖಗಳು ಪಠ್ಯದ ಅಧಿಕೃತತೆಯನ್ನು ಪೋಷಿಸುತ್ತದೆ. ನಾಲಿಗೆಗಿಂತ ಲಿಖಿತಕ್ಕೆ ಮಾನ್ಯತೆ ದೊರೆಕಿದೆ. ಲಿಖಿತ ಪಠ್ಯವನ್ನು ಶ್ರವಣ ಪರಂಪರೆಯ ನಡುವಣ ಕೊಂಡಿಯೆಂದು ಲಿಖಿತ ಕಾವ್ಯ ಪರಂಪರೆ ತಿಳಿದಂತಿದೆ. ತಾನು ಹಾಡುವ, ಕೇಳುವ ಕಥನಕ್ಕೆ ಲಿಖಿತ ಆಕರವೊಂದು ಇದೆಯೆಂದು ಮೌಖಿಕ ಕಾವ್ಯ ಪರಂಪರೆಯ ಪೂರ್ವಕಲ್ಪಿತವಾಗಿಯೋ ಪರಿಭಾವಿಸಿಕೊಂಡಿದೆ.[೧೫]

.....ನಾನಂತು ಪ್ರಗತಿ ಸಮನಾಗಿ ಬರುದುಯಿದ್ದೇನೆ| ಅಂಗುಲ ದೋಷವಿದ್ದರೆ ತಿದ್ದಿವೋದುವದುತ್ತಮ ಪುರುಷರೂ| ತಪ್ಪಂ ಬರೆದೆನೆಂದು ಬೈವಂತಾ ಹೀನಜಾತಿ ನರಾಧಮನ ಬಾಯೊಳು ಮಂಡುಕನ ಮಾಂಸಾ| ತಪ್ಪಂ ಬರೆದೆನೆಂದು ಪ್ರತಿಯೆತ್ತಿ ಬರದವರ ಹಿಂದು ಮುಂದು ತಿಳಿಯದೆ ಯಾರು ಬೈಉಥಾರೋ ಆ ನರಾದಮರ ಬಾಯೊಳು ಬಾಲಕ್ರಿಮಿ ನರಕದ ಕ್ರಿಮಿ| ಪ್ರತಿ ಬರದವರ ಬೈವ ಹೀನ ಮನುಷ್ಯರ ಬಾಯೊಳು ಸುನಕನ ಮಾಂಸ ಗ್ರಾಮ ಶೂಕರನ ಮಾಂಸ ಮರ್ಕಟ್ಸ ಮಾಂಸ ಕುಕ್ಕುಟನ ಮಾಂಸಾ.........[೧೬]

ಹಸ್ತಪ್ರತಿಗಳ ನಾಶವನ್ನು ಹಾಗೂ ಲಿಪಿಕಾರರನ್ನು ಲಘುವಾಗಿ ಕಾಣುವ ಪ್ರವೃತ್ತಿಗಳಿಗೆ ಲಿಪಿಕಾರರು ತುಂಬಾ ಕಠೋರವಾಗಿ ವ್ಯಕ್ತಪಡಿಸುವ ಮೂಲಕ ಹಸ್ತಪ್ರತಿಗಳಂತಹ ಜ್ಞಾನಸಾಮಗ್ರಿಯನ್ನು ಸಂರಕ್ಷಿಸಿರೆಂದು ಇಲ್ಲವಾದ ಉಗ್ರಶಿಕ್ಷೆಗೆ ಒಳಗಾಗುವಿರೆಂದು ಹೇಳುತ್ತಾ ಉಗ್ರ ಲಿಪಿಕಾರರೆಂದು ಕರೆಸಿಕೊಂಡಿದ್ದಾರೆ. ಪ್ರತಿಯೊಂದಕ್ಕೂ ಕೊಂಕುತೆಗೆಯುವ, ತಪ್ಪು ಹುಡುಕುವ ಬುದ್ಧಿಜೀವಿಗಳೆಂದು ಕರೆಸಿಕೊಳ್ಳುವವರ ಕಿರಿಕಿರಿಯಿಂದ ಬೇಸತ್ತ ಪ್ರತಿಕಾರರು ಈ ರೀತಿ ಉಗ್ರವಾಗಿಯೆ ಪ್ರತಿಭಟಿಸಿದ್ದಾರೆ.

ಪ್ರತಿಷ್ಠಿತರು ರೂಪಿಸಿಕೊಂಡ ಇಂಥ ಪ್ರಮಾಣ ಭಾಷೆ ಸಾಹಿತ್ಯಗಳು ನಿಜವಾದ ಸಂಘರ್ಷವನ್ನು ಬದಿಗಿಟ್ಟು ಹುಸಿ ಚಹರೆಗಳನ್ನು ನೀಟಾಗಿ ಹರಿಬಿಟ್ಟವು. ಒಂದು ರೀತಿ ಇದು ಕನ್ನಡತ್ವದ ಚಾರಿತ್ರಿಕ ಪ್ರಕ್ರಿಯೆ

ಮತ್ತು ನೈಜತೆಗಳು ಬಹುತ್ವಗಳ ನಿರಾಕರಣೆಯೂ ಆಗಿ ಕಂಡುಬರುತ್ತದೆ. ಆದರೂ ಪರಭಾಷೆ ಸಂಸ್ಕೃತಿಗಳೊಂದಿಗೆ ಗುದ್ದಾಡುತ್ತಾ ತನ್ನನ್ನು ತಾನು ಪುನಾರಚನೆಗೊಳಿಸುತ್ತಾ ಬಂದ ಕನ್ನಡ ಭಾಷೆ ಮಾಡುವ ಕೆಲಸದ ಮಧ್ಯ ಯಾವ ವೈರುಧ್ಯಗಳಿರಲಿಲ್ಲ. ಇವರಿಗೆ ಸಂವಹನದ ಸಮಸ್ಯೆ ಪಂಡಿತ ಮಾನ್ಯರಂತೆ ಕಷ್ಟವೆನಿಸಲಿಲ್ಲ. ಪ್ರತಿಕಾರರಾದಿಯಾಗಿ ಕನ್ನಡ ಸಂಸ್ಕೃತಿಯೊಳಗೆ ಬಂದು ಹೋದ ಪಂಪನಂಥ ಕವಿಯಿಂದ ಹಿಡಿದು ಸಾಂಪ್ರದಾಯಿಕ ಕಾವ್ಯ ಚೌಕ್ಕಟ್ಟಿನಿಂದ ದೂರನಿಂತು ಮಾತನಾಡಿದ ವಚನಕಾರರು, ಕೀರ್ತನಕಾರರು, ಹರಿಹರ, ರಾಘವಾಂಕ, ಕುಮಾರವ್ಯಾಸ ಮುಂತಾದ ಘಟಾನುಘಟಿಗಳು ತಮ್ಮ ತಮ್ಮ ಆಯ್ಕೆಯ ಭಾಷೆ ಮತ್ತು ಕಾವ್ಯರೂಪಗಳ ಮೂಲಕ ಬಹುಸಂಖ್ಯಾತರನ್ನು ತಲುಪಲು ಮಾಡಿದ ಪ್ರಯತ್ನಕಣ್ಮುಂದಿದೆ. ಇಂದಿಗೂ ಕರ್ನಾಟಕದ ಹಲವು ಕನ್ನಡಗಳು ಪರಸ್ಪರ ಸಂಭಾಷಿಸುತ್ತವೆ. ಒಡನಾಡುತ್ತವೆ.[೧೭]

ಕುಮಾರವ್ಯಾಸ ಭಾರತ, ರಟ್ಟಮತ, ಕುಮಾರರಾಮನಂಥ ದೇಶಿ ಕಾವ್ಯಗಳು ದೇಸೀ ಸಂಸ್ಕೃತಿಯ ನೆಲೆಗಟ್ಟಿನಲ್ಲಿ ರೂಪಗೊಂಡು ಸಂರಕ್ಷಣೆಗೊಂಡವು. ವ್ಯಾಸನ ಇತಿಹಾಸ ಪ್ರಜ್ಞೆ ಪಂಪನ ವೀರಪ್ರಜ್ಞೆ ಕುಮಾರವ್ಯಾಸನ ಕಾವ್ಯ ಹಾಗೂ ಭಕ್ತಿ ಪ್ರಜ್ಞೆಯಲ್ಲಿ ಅರಳಿದ ಮಹಾಭಾರತದ ಕಥೆಗಳು ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಯನ ದೃಷ್ಟಿಯಿಂದ ಮಹತ್ವವನ್ನು ಪಡೆದುಕೊಂಡಿವೆ. ವಿಶೇಷವಾಗಿ ಕುಮಾರವ್ಯಾಸನ ದರ್ಶನಪ್ರಜ್ಞೆ, ಪಾಪ ಪುಣ್ಯ, ಸುಖ, ದುಃಖ, ಆತ್ಮ ಪರಮಾತ್ಮಗಳ ಕುರಿತ ಚರ್ಚೆಗಳಿಂದಾಗಿ ಕುಮಾರವ್ಯಾಸ ಮಹಾಭಾರತವು ಲೌಕಿಕತೆಯಿಂದ ದೈವೀಕತೆಯತ್ತ ತಿರುಗುತ್ತದೆ. ಹಾಗಾಗಿಯೇ ಇದು ಹೆಚ್ಚು ಜನಪ್ರಿಯತೆಯನ್ನು ಪಡೆಯಿತು. ಕುಮಾರವ್ಯಾಸ ಭಾರತದ ವಿರಾಟಪರ್ವವಂತೂ ಮಳೆ ಬೆಳೆಯಂತಹ ಕೃಷಿಪ್ರಧಾನ ಸಂಸ್ಕೃತಿಯ ಸಂಕಥನವಾಗೇ ಬೆಳೆದು ಬಂದಿತು. ಮಳೆ ಬರದಿದ್ದಾಗ, ಬರಬಿದ್ದಾಗ ಈ ಪಠ್ಯವನ್ನು ಪಠಣಮಾಡುವ ಮಾಡಿಸುವ ಮೂಲಕ ಜನ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಾಣುತ್ತಿದ್ದರು.[೧೮] ಇಂತಹ ಕೃತಿಗಳು ಸಂವಹನ ನೆಲೆಯಲ್ಲಿಯೂ ಸಾಹಿತ್ಯಕವಾಗಿ ಸಂರಕ್ಷಣೆಗೊಳ್ಳುತ್ತಿದ್ದವು. ಇದು ಒಂದು ಕೃತಿಯ ದ್ವಿಗುಣನೀತಿಯೂ ಆಗಿ ಸಂರಕ್ಷಣೆಗೊಳ್ಳುವ ಸಾಧ್ಯತೆಯಿದೆ. ಕುಮಾರವ್ಯಾಸನ ಕೃತಿಯು ಹೆಚ್ಚು ಜನಪ್ರೀಯವಾದದ್ದು ಅದರ ನಿರೂಪಣೆಯ ದೃಷ್ಟಿಯಿಂದ ಉದಾ: ವೈಶಂಪಾಯನ ಮುನಿಯು ಜನಮೇಜಯನಿಗೆ ಹೇಳುತ್ತಿರುವುದು ತನ್ನ ಕರ್ಮಕಳೆದುಕೊಳ್ಳುವ ಸಲುವಾಗಿ ಮತ್ತು ಶಾಪಮುಕ್ತನಾಗಲು.

.......ಕಾವ್ಯವಿದು ಭುವನದೊಳ್ ಸಕಲಜನರಿಂದ ಸುಶ್ರಾವ್ಯವುಮಪ್ಪಂತೆ.....ಈ ಕಥೆಯನೊಲವಿನಿಂದ ಕೇಳ್ದರ್ಗೆ ಪೇಳ್ದರ್ಗೆ ಶೋಕಭಯಂ ಸಿದ್ಧಿಯಂ ಹರಿಕೊಡುತಿಹಂ ಕೃಪೆಯೊಳು ಲಕ್ಷ್ಮೀಶನ ಈ ಎರಡು ಉಲ್ಲೇಕಗಳು ಕಾವ್ಯದ ಬಹುವಿಧ ನೆಲೆಗಳನ್ನು ಬಹುವಿಧ ಫಲಗಳನ್ನು ಹೇಳುತ್ತವೆ. ಒಂದು ಕಾವ್ಯ ತೀರ ಧಾರ್ಮಿಕ ಎನಿಸುವ ಚತುರ್ವಿದ ಪುರುಷಾರ್ಥಗಳಿಂದ ಹಿಡಿದು ಲೌಕಿಕ ಎಂದೆನಿಸುವ ಹಾವು ಚೇಳು ಜ್ವರ ಭಾದೆಗಳಿಂದ ಮುಕ್ತರನ್ನಾಗಿಸುವ ಆಶಯವನ್ನು ಹೊಂದಿರುತ್ತದೆ. ಅದರ ಆಂತರಿಕ ರಚನೆಯ ಬಹುಸ್ತರೀಯ ಗುಣಗಳನ್ನು ತಿಳಿಸುತ್ತದೆ. ಕವಿರಾಜಮಾರ್ಗ ಅಲಂಕಾರ ಗ್ರಂಥವಾದಂತೆ, ದೇಸೀ ಭಾಷೆಗಳನ್ನು ಪುನರ್ ಸೃಷ್ಟಿಸುತ್ತಿರುವ ರಾಜ್ಯ ಮತ್ತು ಪ್ರಭುತ್ವದ ವಿವರಗಳನ್ನು ಕೊಡುವ, ತನ್ನ ಕಾಲದ ಸಮಕಾಲೀನ ಸ್ಥಿತಿಗತಿಗಳನ್ನು ಕಟ್ಟಿಕೊಡುವ ದಾರ್ಶನಿಕ ಸನ್ನಿವೇಶಗಳನ್ನು ಭಾಷಿಕ ಸಂಕಥನಗಳನ್ನು

ಏಕಕಾಲದಲ್ಲಿಯೇ ತನ್ನೊಡಲೊಳು ಹುದುಗಿಸಿಟ್ಟುಕೊಂಡ ಕೃತಿಯಾಗಿದೆ.[೯] ಸಾಹಿತ್ಯಕ ಸಂರಕ್ಷಣೆ ಭಾಷಿಕವಾಗಿ ಮಾತ್ರ ನಡೆಯದೇ ಅದರಾಚೆಯ ಬದುಕಿನ ಬಹುಮುಖಿ ಆಯಾಮದಲ್ಲಿ ಸಂರಕ್ಷಣೆ, ಸಂವರ್ಧನೆ ಮತ್ತು ಸಂಗೋಪನೆಗೊಂಡವು.

ಕವಿರಾಜಮಾರ್ಗಕಾರನ ಕಾಲದ ನಂತರ ರತ್ನತ್ರಯರ ಜೈನ ಸಾಹಿತ್ಯ ಸಂಪದದ ಕಾಲ. ಈ ಕಾಲದ ಸಾಹಿತ್ಯದ ವೈಶಿಷ್ಟ್ಯ ಲೌಕಿಕ, ಆಗಮಿಕ ಕಾವ್ಯ ಪರಂಪರೆಯನ್ನು ಪಂಪನಿಂದ ಮುಂದುವರಿಸಿಕೊಂಡು ಬಂದ ವಿಧಾನವಾಗಿದೆ. ಪಂಪ, ಪೊನ್ನ ರನ್ನ ಚಾವುಂಡರಾಯ, ಒಂದನೆಯ ನಾಗವರ್ಮ, ದುರ್ಗಸಿಂಹ, ನಾಗಚಂದ್ರ, ನಯಸೇನ ಕರ್ಣಪಾರ್ಯರ ಕಾವ್ಯಕೃತಿಗಳು. ರನ್ನನ ರನ್ನಕಂದ ನಾಗವರ್ಮನ ಛಂದೋಂಬುದಿ ಎರಡನೆಯ ನಾಗವರ್ಮನ 'ಕಾವ್ಯಾವಲೋಕನದಂತಹ ನಿಘಂಟುಗಳು ಕನ್ನಡ ಸಾಹಿತ್ಯವನ್ನು ತಿಳಿಯಲು ಮೂಲ ಆಧಾರಗಳಾಗಿವೆ. ಇವುಗಳನ್ನು ಹಸ್ತಪ್ರತಿಗಳಲ್ಲಿ ಸಂರಕ್ಷಿಸಿಯಿಡಲಾಗಿದೆ. ಜೈನಧರ್ಮವು ರಾಜಾಶ್ರಯವನ್ನು ಪಡೆದು ಉಚ್ಛ್ರಾಯ ಸ್ಥಿತಿಯಲ್ಲಿದ ಈ ಅವಧಿಯಲ್ಲಿ ಆ ಧರ್ಮೀಯರು ಕೈಗೊಳ್ಳುತ್ತಾ ಬಂದ ಶಾಸ್ತ್ರದಾನಾದಿಗಳಲ್ಲಿ ಜ್ಞಾನಾರ್ಜನೆ ಮತ್ತು ಜ್ಞಾನರಕ್ಷಣೆ ಸಹಕಾರಿಯಾಯಿತು. ಬರೀ ಧಾರ್ಮಿಕ ನೆಲೆಯಲ್ಲಿ ಮಾತ್ರ ಜ್ಞಾನ ಸಂರಕ್ಷಣೆ ಹೊಂದದೇ ಸಾಹಿತ್ಯಕವಾಗಿಯೂ ಸಂರಕ್ಷಣೆ ನಿರಂತರವಾಗಿ ನಡೆಯುತ್ತಾ ಬಂದಿದೆ.

೧೨ನೆಯ ಶತಮಾನದ ವಚನ ಸಾಹಿತ್ಯ ಒಂದು ಹೆಜ್ಜೆ ಮುಂದೆ ಹೋಗಿ ಧಾರ್ಮಿಕ, ಸಾಮಾಜಿಕ ಕಳಕಳಿಗಿಂತ ಸಾಹಿತ್ಯಕವಾಗಿ ಜನಸಾಮಾನ್ಯರಿಗೆ ತಲುಪಲು ನೆರವಾಗುವ ಭಾಷೆಯೂ ರೂಪಗೊಂಡಿತು. ಅನುಭವ ಮಂಟಪದಲ್ಲಿ ತಮ್ಮ ಅನುಭಾವದ ಮೂಲಕ ಸಾಹಿತ್ಯಕ ಸಂರಕ್ಷಣೆ ಮಾಡಿದರು. ವಚನಕಾರರ ನಂತರದ ಕವಿಗಳು ಹರಿಹರ, ರಾಘವಾಂಕ, ಜನ್ನ, ಆಂಡಯ್ಯ, ಬ್ರಹ್ಮಶಿವ, ರುದ್ರಭಟ್ಟ ಕುಮುದೇಂದು ನಂತವರು ಕಾವ್ಯ ಕೃತಿಗಳನ್ನು ರಚಿಸಿದರು. ಹರಿಹರ ರಾಘವಾಂಕ ಕವಿಗಳು ಭಕ್ತಿಯ ನೆಲೆಯಲ್ಲಿ ಸಾಹಿತ್ಯಕ ಸಂರಕ್ಷಣೆ ಮಾಡಿದ್ದಾರೆ. ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ ಕೇಶಿರಾಜನ ವ್ಯಾಕರಣ ಕೃತಿ ರಚನೆಗೊಂಡವು. ಹರಿದಾಸರ ಕೀರ್ತನೆಗಳು, ತತ್ವಪದಕಾರರು, ಶೂನ್ಯಸಂಪಾದನೆಗಳು ಮಹಾಲಿಂಗದೇವರ ಏಕೋತ್ತರ ಶತಸ್ಥಲ, ಜಕ್ಕಣಾರ್ಯನ ನೂರೊಂದು ಸ್ಥಲ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಮಗ್ಗೆಯ ಮಾಯಿದೇವರ ಶತಕತ್ರಯದಂತಹ ಮುಂತಾದ ಶಾಸ್ತ್ರಗ್ರಂಥಗಳಲ್ಲದೆ ಟೀಕಾಸಾಹಿತ್ಯವು ಹುಟ್ಟಿಕೊಂಡು ಕನ್ನಡ ಸಾಹಿತ್ಯವನ್ನು ಹೊಸ ರೀತಿಯಲ್ಲಿ ಪುನಾರಚಿಸುವ ಮೂಲಕ ಸಾಹಿತ್ಯ ಸಂವರ್ಧನೆಗೆ ಕಾರಣಗಳಾದವು|

......ಕಲ್ಯಾಣದಯ್ಯ ಅರಸಿನವರಿಗೆ ಆಯುರಾರೋಗ್ಯ ರೂಪು ಯೌವನ ಲಾವಣ್ಯ ಲಕ್ಷಣ ಸತ್ಕುಲ ಸಾಹಸ ವನಿತಾ ವಿಲಾಸ ಪುತ್ರ ಪೌತ್ರ ಬಂಧು ಬಾಂಧವ ಧನಧಾನ್ಯ ಎಲ ಪರಾಕ್ರಮ ವಿದ್ಯಾ ವಿತರಣನಯ ವಿನಯಾದಿ ಸಕಲ ಸೌಭಾಗ್ಯ ಸಮಗ್ರತೆ ಸಹಿತವಾಗಿ ಸಪ್ತ ಸಮುದ್ರ ಮುದ್ರಿತ ವಸುಧಾದಿಪತ್ಯ ಸಂತೋಷ ಸಂಜನಿತ ಸುಖಮಂ ಕ್ಷೇಮದಿಂದಿಹದೊಳನುಭವಿಸಿ ಮೇಲೆ ಸರ್ವೋತ್ಕರ್ಷಮಾದ ಶ್ರೀಗುರು

ಶಂಭುಲಿಂಗದೊಡಗೂಡಿ ಸರ್ವಜ್ಞತ್ವ ಸರ್ವ ಕರ್ತೃತ್ವದಿಂ ಸತ್ಯಾನಂದ ಸ್ವರೂಪ ರಾಗಿಯಿರಬೇಕೆಂದು ಕಣಿಯಕಲ್ಲು ಅಪ್ಪಯ್ಯನವರ ಕುಮಾರ ಕೃಷ್ಣಯ್ಯ ಉಪಾಧ್ಯರು ತ್ರಿಭುವನ ತಿಲಕವನ್ನು ಬರೆದುಕೊಟ್ಟನು.[೨೦]

.....ಚಂದ್ರವಾರ ಮಧ್ಯಾಹ್ನಕ್ಕೆ ಧನ್ಯ ಕುಮಾರನ ಚರಿತೆ ಶ್ರೀಪಾಲಚರಿತೆ ಸುಖಿಕುಮಾರನ ಚರಿತೆ ಕದಂಬ ಚರಿತೆ ಸಂಪೂರ್ಣವಾಯ್ತು ಯಿದ ಬರದಾತ ಚಿಕ್ಕ ಬಸ್ತಿ ಚನ್ನಪ್ಪನು ತಾನು ತನಗೆ ಪುಣ್ಯ ನಿಮಿತ್ಯವಾಗಿ ಬರದ ಪುಸ್ತಕ.[೨೧]

ಸ್ವಸ್ತಿ ಶ್ರೀ ಸೇನಗಣಾಗ್ರಗಣ್ಯರು ಕರವೀರಕ್ಷೆತ್ರ ಕೋಲ್ಲಾಪುರದ ಶ್ರೀ ಜಿನಸೇನ ಭಟ್ಟಾರಕ ಸ್ವಾಮಿ ಸಂಜಾತ ಗುಣಭದ್ರಸ್ವಾಮಿಗಳ ಶಿಷ್ಯರು ಶಾಂತಮತಿ ಕಂತಿಯರು ಅಷ್ಟಿಗೆಪುರದ ಶ್ರೀ ಅಜಿತನಾಥನ ದಿವ್ಯ ಚೈತ್ಯಾಲ್ಯಯದಲ್ಲಿ ಪ್ರತಿ ನೋಡಿ ಬರೆದವು.[೨೨]

ಭೂಕೈಲಾಸ ವುಳುವೆ ಮಹಮನೆ ಸೂತ್ರಾನುವರ್ತಿಗಳಾದ ಬಾಳಪ್ಪ ಸ್ವಾಮಿಗಳ ಕರಸಂಜಾತಳಾದ ಪುಟ್ಟ ನಂಜಂಮ.....[೨೩]

ಈ ಮೇಲಿನ ಹಸ್ತಪ್ರತಿ ಪ್ರಶಸ್ತಿಗಳಲ್ಲಿ ಕೃತಿ ಬರೆದವರ ಬರೆಸಿದವರ ಹೆಸರು, ಗ್ರಂಥದ ಹೆಸರು ಸ್ತ್ರೀಯರೂ ಕೃತಿ ರಚಿಸಿದ ಉಲ್ಲೇಖಗಳು ಗಮನಾರ್ಹ. ಬೌದ್ಧರು, ಜೈನರು ಮತ್ತು ವೀರಶೈವ ಧರ್ಮದವರು ಮಾತ್ರ ಪ್ರೋತ್ಸಾಹಿಸಿದ್ದು ಬ್ರಾಹ್ಮಣ ಸ್ತ್ರೀಯರುಗಳು ಬರೆದ ಯಾವ ಉಲ್ಲೇಖಗಳು ಸಿಗುವುದಿಲ್ಲ. ಹಸ್ತಪ್ರತಿಕಾರರ ಪ್ರಶಸ್ತಿಗಳು ಕನ್ನಡ ಸಾಹಿತ್ಯವನ್ನು ಮತ್ತು ಪ್ರತಿಕಾರರ ಸಂಸ್ಕೃತಿಯನ್ನು ಕಟ್ಟಿಕೊಡುವ ಮೂಲಕ ಜ್ಞಾನ ಸಂರಕ್ಷಣೆಯಲ್ಲಿ ಪ್ರಾಮುಖ್ಯತೆ ಹೊಂದಿವೆ. ಶಿವತತ್ವಗಳ ಲೇಖ್ಯಮಂ ಮಾಳ್ಪಳೇಖ್ಯದ ಕರಿಯಸಿದ್ಧ ಬಸವೇಶ.....ಹುನಗುಂದದ ಬರೆವ ಚೆನಿವೀರದೇವರು.[೨೪]

ಉಪಾಧ್ಯಯರಲ್ಲದೇ ಪ್ರತಿಮಾಡುವ ವೃತ್ತಿಯನ್ನು ಅವರು ಮಾಡುತ್ತಿದ್ದರು. ಪಾಠದ ಸಮಯದಲ್ಲಿ ಉಪಾಧ್ಯಾಯನಾಗಿ ನಂತರದ ಸಮಯದಲ್ಲಿ ವೃತ್ತಿಲಿಪಿಕಾರನಾಗಿ ಕೃತಿಗಳನ್ನು ಪ್ರತಿಮಾಡುತ್ತಿದ್ದರು. ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ, ತಮ್ಮ ಅಧ್ಯಾಪನಕ್ಕಾಗಿ ಇತರ ವ್ಯಕ್ತಿಗಳ ಜ್ಞಾನಾರ್ಜನೆಯ ವೃದ್ಧಿಗಾಗಿ ಅಪಾರ ಸಂಖ್ಯೆಯ ಗ್ರಂಥಗಳನ್ನು ಇಂಥವರು ಲಿಪಿಕರಣಗೊಳಿಸಿದ್ದಾರೆ.

ಓದಿಸುವ ಸಮಾದಯ್ಯನವರಲ್ಲಿ ವಸ್ತ್ರದ ಚನವೀರಪ್ಪನವರು ದಾರಿಣಿಗೆ ತಕ್ಕೊಂಡು ಇದಾರು[೨೫]

ಬಡ್ಡಣಿಯ ಸ್ಥಳದ ಸಾಲಿ ನಾಗಪ್ಪನ ಸ್ವಹಸ್ತದ ಬರಹವು..... ರಾ| ಬೆನ್ನೂರು ಹಿರೇಮಠದ ಚರಂತ್ಯಪ್ಪನವರಿಗೆ ಮಾರಲಿಕ್ಕೆ ಕೊಟ್ಟಿತು.[೨೬]

ಈ ಮೇಲಿನ ಉಲ್ಲೇಖವನ್ನು ಗಮನಿಸಿದರೆ ಓದಿಸುವವರು ಹಣ ತೆಗೆದುಕೊಂಡು ಗ್ರಂಥಗಳನ್ನು ಪ್ರತಿ ಮಾಡಿಕೊಡುತ್ತಿದ್ದರೆಂದೂ ಓದಿಸುವ ವೃತ್ತಿಯೊಂದಿಗೆ ಲೇಖನ ವೃತ್ತಿಯನ್ನು ವಂಶಪಾರಂಪರ್ಯವಾಗಿ ಮುಂದುವರೆಸಿಕೊಂಡು ಬಂದಿದ್ದರಿಂದಲೇ ಹಸ್ತಪ್ರತಿಗಳಂತ ಜ್ಞಾನವೂ ಸಂರಕ್ಷಣೆಗೊಂಡಿತು.

ಶಿವರದ ಚೆನ್ನಂಜೇದೇವರ ಶಿಷ್ಯರು ಬಸವಲಿಂಗದೇವರು ತಮಗೆ ಸ್ವಾನುಭಾವಾರ್ಥ ವಿರಚಿತ ಲಿಖಿತಂ[೨೭]

ಹೊಂಗಲದ ಪುರಾಣಿಕಮಠದ ದುರದುಂಡೆಪ್ಪನು ಪಠಿಸಿ ಕೃತಾರ್ಥವಾಗುವುದಕ್ಕೋಸ್ಕರ ಬರೆದುಕೊಂಡಿರ್ಪನು.[೨೮]

ಕಲ್ಲುಮಠ ಮಹಾಂತ ಕರಿಬಸಪ್ಪನ ಕುಮಾರ ಚೆನ್ನವೀರಪ್ಪ ಪುರಾಣಿಕ ವೀತನು ಮನೋಭಿಲಾಷದಿಂದ ವಾಚಿಸುವುದಕ್ಕೆ ಲೇಖನ ಗೈದಿರುತ್ತಾರೆ.[೨೯]

ಈ ಮೇಲಿನ ಮಾತುಗಳು ಹವ್ಯಾಸಿ ಲಿಪಿಕಾರರು ತಮ್ಮ ಲೀಲಾವಿನೋದ, ಸ್ವಾನುಭಾವ, ಪಾರಾಯಣ, ಪ್ರವಚನ ಅಧ್ಯಯನ ಮುಂತಾದ ಉದ್ದೇಶಗಳಿಂದ ಗ್ರಂಥಗಳನ್ನು ಪ್ರತಿಗೊಳಿಸಿವ ಮೂಲಕ ಸಾಹಿತ್ಯ ಕೃತಿಗಳ ಸಂರಕ್ಷಣೆಗೆ ತಮ್ಮದೆ ಆದ ಕೊಡುಗೆಯನ್ನು ನೀಡಿದ್ದಾರೆ. ಲೀಲಾವಿನೋದದ ಉದ್ದೇಶಕ್ಕಾಗಿಯೋ ಬನ್ನೂರ ಸ್ಥಲದಲ್ಲಿ ಹೊಸಮಠದ ಶ್ರೀ ಶಿವಲಿಂಗದೇವರು ಶೂನ್ಯಸಂಪಾದನೆಯಂತಹ ಮಹತ್ವದ ಕೃತಿಯ ರಚನೆ ಮಾಡಿರುವುದು ತಿಳಿದುಬರುತ್ತದೆ.

೧೨ನೆಯ ಶತಮಾನದ ವಚನಗಳನ್ನು ೧೫ನೆಯ ಶತಮಾನದಲ್ಲಿ ಪ್ರೌಢದೇವರಾಯನ ಕಾಲದಲ್ಲಿ ೧೦೧ ವಿರಕ್ತರು ಸಾಹಿತ್ಯಕವಾಗಿ ಮತ್ತು ಧಾರ್ಮಿಕವಾಗಿ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ೧೨ನೆಯ ಶತಮಾನದ ವಚನಗಳು ೧೫ನೆಯ ಶತಮಾನದಲ್ಲಿ ಹೊಸ ಅರ್ಥವನ್ನು ಪಡೆದುಕೊಂಡದ್ದು ಶೂನ್ಯಸಂಪಾದನೆಗಳ ಮೂಲಕ ವಿರಕ್ತರು ವಚನ ಕಟ್ಟುಗಳ ಸಂಕಲನ, ಸಂಪಾದನೆಯ ಕಾರ್ಯಕೈಗೊಂಡರು. ಶರಣರ ವಚನಗಳನ್ನೇ ಬಳಸಿಕೊಂಡು ಒಂದು ರೀತಿಯ ಸಂಭಾಷಣೆಯ ರೂಪದಲ್ಲಿ ರಚಿತವಾದ ಅನುಭಾವ ಗ್ರಂಥಗಳು ಶೂನ್ಯ ಸಂಪಾದನೆಗಳು.

ಅಲ್ಲಮನನ್ನು ಕೇಂದ್ರವಾಗಿಟ್ಟುಕೊಂಡು ಅಲ್ಲಿನ ಸನ್ನಿವೇಶಗಳನ್ನು ಬೆಳೆಸುತ್ತಾ ಹೋಗುವುದರ ಜೊತೆಗೆ ಇಂತಹ ಒಂದು ಗ್ರಂಥವನ್ನು ಸಂಕಲಿಸಬಹುದೆಂಬ ಕಲ್ಪನೆಯನ್ನು ಮೊದಲು ಕಂಡು ಅದನ್ನು ಸಮರ್ಥವಾಗಿ ಕಾರ್ಯಗತಗೊಳಿಸಿದವನು ಶಿವಗಣ ಪ್ರಸಾದಿ ಮಹಾದೇವಯ್ಯ. ನಂತರದ ಶೂನ್ಯಸಂಪಾದನೆಕಾರರು ಆ ಮೂಲ ಹಂದರದ ಮೇಲೆ ಇನ್ನಷ್ಟು ಸನ್ನಿವೇಶಗಳನ್ನು ಸೇರಿಸಿ ಗ್ರಂಥ ರಚನೆಯನ್ನು ಮಾಡಿದರು. ಶೂನ್ಯಸಂಪಾದನೆಗಳು ವೀರಶೈವ ಧರ್ಮವನ್ನು ಸಾರುವ ಪ್ರಮುಖ ಸಂಕಲನ ಗ್ರಂಥವಾಗಿರುವುದರಿಂದ ಶೂನ್ಯಸಂಪಾದನೆಗಳನ್ನು ವೀರಶೈವ ಧರ್ಮದ ಕೈಪಿಡಿ ಎಂದು ಕರೆಯಲಾಗಿದೆ.

ಶೂನ್ಯಸಂಪಾದನೆಯ ಬೇರು ವಚನಸಾಹಿತ್ಯದಲ್ಲಿದೆ. ವಚನ ಸಾಹಿತ್ಯವು ಆ ಕಾಲದ ಶರಣರ ಸಿದ್ಧಿಯ ನೆಲೆಯಾಗಿತ್ತು. ಶರಣರು ಅನುಭವ ಮಂಟಪದಲ್ಲಿ ನಡೆಸುತ್ತಿದ್ದ ಸಂವಾದ ಸಮಾಜೋಧಾರ್ಮಿಕ ಮತ್ತು ಸಾಹಿತ್ಯಿಕ ಹಾಗೂ ಕರ್ನಾಟಕದ ಸಂಸ್ಕೃತಿ ಉತ್ಕರ್ಷಕ್ಕೆ ಸಂಬಂಧಿಸಿದ್ದಾಗಿತ್ತು. ಬಸವಾದಿ ಶರಣರು ನಡೆಸಿದ ಮಹಾಸಾಧನೆ, ಭಾಷೆ, ಕಾಯಕ ಪರವಾದ ಬದುಕು, ಅವರ ಸಾಹಿತ್ಯಕ್ಕೆ ಹೊಸ ಚೈತನ್ಯವನ್ನು ನೀಡಿತು. ಒಂದು ಕಡೆ ಭಾಷೆ ಮತ್ತು ಸಾಹಿತ್ಯಗಳು ದೇಶೀಯತೆ ಪಡೆದರೆ ಮತ್ತೊಂದು ಕಡೆ, ಶರಣರ ಸಮಾಜ, ಧಾರ್ಮಿಕ ಕಳಕಳಿಯೂ ಬದುಕಿನ ಘಸ್ವರೂಪವಾಗಿವೆ. ಕಲ್ಯಾಣವನ್ನು ಕೇಂದ್ರವಾಗಿ ಮಾಡಿಕೊಂಡು ನಡೆಸಿದ ಚಳುವಳಿ ರಾಷ್ಟ್ರದ ಮೂಲೆ ಮೂಲೆಯಿಂದ ಚಿಂತಕರನ್ನು ಆಕರ್ಷಿಸಿತು.

ಪಂಪನಂತ ಕವಿಗಳ ರಾಜಾಶ್ರಯ ಮತ್ತು ಪ್ರಭುತ್ವದ ನೆಲೆಯಲ್ಲಿ ಕಾವ್ಯರಚಿಸಿದರೆ ವಚನಕಾರರು ಮಾತ್ರ ರಾಜಾಶ್ರಯ ಮತ್ತು ಪ್ರಭುತ್ವವನ್ನು ನಿರಾಕರಿಸಿ ಜನಸಾಮಾನ್ಯರ ನೆಲೆಯಲ್ಲಿ ಕಾವ್ಯ ಹೊಸೆದರು. ಯಾವುದೇ ಈ ವಚನಸಾಹಿತ್ಯದ ವ್ಯವಸ್ಥಿತವಾದ ರಕ್ಷಣೆಗಾಗಿ ೧೫ನೆಯ ಶತಮಾನದವರೆಗೆ ಕಾಯಬೇಕಾಯಿತು. ಆದರೆ ವಚನಸಾಹಿತ್ಯ ಇದಕ್ಕೂ ಮುಂಚೆ ವ್ಯಕ್ತಿಗಳ ಮಟ್ಟದಲ್ಲಿ ಸ್ವಲ್ಪಮಟ್ಟಿಗೆ ಸಂರಕ್ಷಿಸುವ ಕಾರ್ಯನಡೆಯಿತು. ಉದಾ: ಪಾಲ್ಕುರಿಕೆ ಸೋಮನಾಥನು ಬಸವ ಪುರಾಣ ರಚಿಸಿದ್ದನು. ಹರಿಹರ ಸಮಕಾಲೀನ ಶರಣರನ್ನು ಕುರಿತು ಹಲವು ಕೃತಿರಚಿಸಿದನು. ಮುಂದೆ ಬಂದ ಭೀಮಕವಿ ಕನ್ನಡ ಬಸವ ಪುರಾಣ ರಚಿಸಿದನು.

ಪ್ರೌಢದೇವರಾಯನ ಕಾಲಕ್ಕೆ ವೀರಶೈವ ಧರ್ಮವನ್ನು ಪುನರುತ್ಥಾಣಗೊಳಿಸಲು ಶಿವಗಣಾದಿ ಮಹಾದೇವನಂತವರು ಶೂನ್ಯಸಂಪಾದನೆಯನ್ನು ರಚಿಸಿ ನಾಯಕನ ಅನಿವಾರ್ಯತೆಯನ್ನು ಹೇಳಿದರು. ಅಲ್ಲಮನನ್ನು ಶೂನ್ಯಸಂಪಾದನೆಯ ನಾಯಕನನ್ನಾಗಿ ಮಾಡಿಕೊಂಡು ಅದಕ್ಕೆ ಪೂರಕವಾಗುವಂತೆ ವಚನಗಳನ್ನು ಸಂಕಲಿಸುವ, ಸಂಪಾದಿಸುವ ಮೂಲಕ ಮಹತ್ವ ಪೂರ್ಣವಾದ ಸಾಹಿತ್ಯಕ ಪಠ್ಯ ಹಾಗೂ ಅದರ ಮಾಧ್ಯಮವನ್ನು ಸಂರಕ್ಷಿಸಿದರು. ಶಿವಗಣಪ್ರಸಾದಿ ಮಹಾದೇವಯ್ಯರ ಶೂನ್ಯಸಂಪಾದನೆಯ ನಂತರದ ಶೂನ್ಯಸಂಪಾದನೆಯಲ್ಲಿ ಸ್ವಲ್ಪ ಬದಲಾವಣೆಗಳು ಮಾಡಿಕೊಂಡರು. ಉದಾ ಸಿದ್ದರಾಮನಿಗೆ ಚನ್ನಬಸವಣ್ಣನಿಂದಾದ ದೀಕ್ಷೆಯ ಪ್ರಸಂಗ ಮತ್ತು ಇತರ ಕೆಲವು ಸನ್ನಿವೇಶಗಳನ್ನು ಹೊಸದಾಗಿ ಸೇರಿಸಿದರು.

ವಚನಕಾರರ ಮುಖ್ಯ ಆಶಯಗಳಾದ ಆರ್ಥಿಕ ಸಮಾನತೆ, ಲಿಂಗಸಮಾನತೆ, ವೃತ್ತಿಸಮಾನತೆ, ದೇವಾಲಯ ನಿರಾಕರಣೆ, ಬಹುಮುಖಿ ನಾಯಕತ್ವ, ಎಲ್ಲರೂ ಸಮಾನರು ಎಂಬ ಮನೋಭಾವನೆ ಮತ್ತು ಈ ಚಳುವಳಿಯಲ್ಲಿ ಎಲ್ಲರಿಗೂ ಪಾಲಗೊಳ್ಳಲು ಮುಕ್ತ ಅವಕಾಶವಿತ್ತು. ಹೀಗಾಗಿ ಎಲ್ಲ ರಿತೀಯಲ್ಲಿ ಜಾತಿಯ ಕಾರ್ಯಕೈಕೊಂಡಿದ್ದಕ್ಕೆ ಅಂತರ್‌ಜಾತಿಯ ವಿವಾಹದ ಮೂಲಕ ಜಾತಿಯನ್ನು ಹೋಗಲಾಡಿಸುವ ಕಾರ್ಯವನ್ನು ಕೈಗೊಳ್ಳುತ್ತಾರೆ. ಹಾಗೂ ಮಾತೃಭಾಷೆಯಲ್ಲಿ ಭಾವನೆಗಳನ್ನು ಅಭಿವ್ಯಕ್ತಿಸಲು ಅವಕಾಶ ಕಲ್ಪಿಸಿಕೊಟ್ಟಿದ್ದರಿಂದ ೩೦೦ಕ್ಕೂ ಹೆಚ್ಚು ಜನ ವಚನಕಾರರು ವಚನವನ್ನು ರಚಿಸಿದರು.

ಶಿವಗಣಪ್ರಸಾದಿ ಮಹಾದೇವಯ್ಯ ಪ್ರಭುದೇವರ ಶೂನ್ಯಸಂಪಾದನೆಯ 'ಕೃತಿಯ ಆರಂಭದಲ್ಲಿ ಶ್ರೀಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮಪ್ರಭುದೇವರು, ಬಸವರಾಜದೇವರು, ಚನ್ನಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಗಣಂಗಳೊಡನೆ ಮಹಾನುಭಾವ ಪ್ರಸಂಗಮಂ ಮಾಡಿದ ಸರ್ವಕರಣ ಶೂನ್ಯಸಂಪಾದನೆಯ ಸದ್ಗೋಷ್ಠಿ ಕಥಾ ಪ್ರಸಂಗಮಂ ಮುಕ್ತಕಮಾಗಿರ್ದ ಶಿವಾದ್ವೈತ ವಚನಂಗಳಿಂ ಉತ್ತರ ಪ್ರತ್ಯುತ್ತರವಾಗಿ ಸೇರಿಸಿ ಶಿವಗಣಪ್ರಸಾದಿ ಮಹಾದೇವಯ್ಯಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಸಮರ್ಪಿಸಿದ ಭೇದವೆಂತಿರ್ದುದು ಎಂದಡೆ' ಎಂದು ಹೇಳಿದ್ದಾರೆ.

ಶಿವಗಣಪ್ರಸಾದಿ ಮಹಾದೇವಯ್ಯ ಷಟಸ್ಥಳ, ಏಕೋತ್ತರ ಶತಸ್ಥಲ, ಷಟಚಕ್ರ, ಪಂಚಕೋಶ, ಅಷ್ಟಾವರಣ, ಪಂಚಾಚಾರ ಕ್ರಮಗಳಲ್ಲಿ ನಿರೂಪಿಸುವುದಿಲ್ಲವಾದರು. ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳ

ನೆರವನ್ನು ಧಾರ್ಮಿಕ ಅಗತ್ಯಕ್ಕೆ ತಕ್ಕಂತೆ ಅಲ್ಲಲ್ಲಿ ಬಳಸಿಕೊಳ್ಳುತ್ತಾನೆ. ಉದಾ: ಕಲ್ಯಾಣದಲ್ಲಿ ಚನ್ನಬಸವಣ್ಣ, ಬಸವಣ್ಣ, ಮಾಚಯ್ಯ, ಸಿದ್ಧರಾಮರ ಪ್ರಸಂಗಗಳಲ್ಲಿ ಇವುಗಳ ಬಳಕೆಯಾಗಿದೆ. ಆದರೆ ಇಡೀ ಕೃತಿಯನ್ನು ಶಿವಗಣಪ್ರಸಾದಿ ಮಹಾದೇವಯ್ಯ ಪ್ರಸಂಗಗಳ ರೂಪವಾಗಿ ರೂಪಿಸುವ ಮೂಲಕ ಅವನು ಮುಕ್ತವಾಗಿದ್ದ ಶಿವಾದ್ವೈತ ವಚನಗಳನ್ನು ಉತ್ತರ ಪ್ರತ್ಯುತ್ತರವಾಗಿ ಸಂವಾದ ರೂಪವಾಗಿ ಸಂಕಲಿಸುತ್ತಾನೆ.

ಶಿವಗಣಪ್ರಸಾದಿ ಮಹಾದೇವಯ್ಯ ಶೂನ್ಯಸಂಪಾದನೆಯಲ್ಲಿ ಮತ್ತೊಂದು ವೈಶಿಷ್ಟತೆ ಕಾಣಬಹುದು. ಶೂನ್ಯಸಂಪಾದನೆ ಮಾಡಿಕೊಳ್ಳುವುದಕ್ಕೆ ಸ್ಥಾನವಲ್ಲ ಮುಖ್ಯವಾದದ್ದು, ವ್ಯಕ್ತಿತ್ವದ ಸಾಧನೆ ಎಂದು ಹೇಳುತ್ತಾನೆ. ಅಲ್ಲಮನಿಗೆ ಶೂನ್ಯಸಂಪಾದನೆಯಾದದ್ದು (ದೀಕ್ಷೆ) ಅನಿಮಿಷನ ಸಮ್ಮುಖದಲ್ಲಿ. ಸಿದ್ಧರಾಮನಿಗೆ ಇದು ಸಾಧ್ಯವಾದದ್ದು ದೇಗುಲವೊಂದರ ನಿರ್ಮಾಣದ ಘಳಿಗೆಯಲ್ಲಿ. ಮರುಳಶಂಕರದೇವನಿಗೆ ಇದು ಪ್ರಾಪ್ತವಾದದ್ದು ಪ್ರಸಾದದ ಕುಳಿಯಲ್ಲಿ, ಅಕ್ಕನಿಗೆ ಶ್ರೀಶೈಲದಲ್ಲಿ. ಹೀಗಾಗಿ ಶಿವಗಣಪ್ರಸಾದಿ ಮಹಾದೇವಯ್ಯ ಅನುಭವ ಮಂಟಪವನ್ನು ಶೂನ್ಯಸಂಪಾದನೆಯ ಕೇಂದ್ರವಾಗಿ ಮಾಡಿದ್ದಾನೆ.

ತನ್ನ ಶೂನ್ಯಸಂಪಾದನೆಯ ಕೊನೆಯಲ್ಲಿ ಅಂದರೆ ಮಂಗಳ ಹಾಡುವ ಮುನ್ನ ಇಲ್ಲಿ ವಚನಕ್ರಮ ಸೇರುವೆ ತಪ್ಪುಳ್ಳೊಡೆ ನಿಮ್ಮ ಪರಮ ಜ್ಞಾನದಿಂ ಈ ವಚನಾನುಭಾವ ಪ್ರಸಂಗಮಂ ಮಾಡಿ ಸುಖಿಸುವುದು ಎನ್ನುತ್ತಾನೆ. ಮಹಾದೇವಯ್ಯ ಈ ಮಾತುಗಳು ಅವನ ವಿನಯವನ್ನು ಕೃತಿಯಲ್ಲಾದ ತಪ್ಪನ್ನು (ಸಂಕಲನದಲ್ಲಿ ಆದ ಲೋಪಗಳನ್ನು) ಸರಿಪಡಿಸಿಕೊಂಡು ಓದಲು ಹೇಳಿದ್ದಾನೆ. ಸಿದ್ಧರಾಮ ಕಲ್ಯಾಣವನ್ನು ಪ್ರವೇಶಿಸಿದಾಗ ಚನ್ನಬಸವಣ್ಣ ಸಿದ್ಧರಾಮನನ್ನು ಒರೆದು ನೋಡುವ ಪ್ರಸಂಗದಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯ ನಿರೂಪಣೆ ಮಾಡಿದ ವಿಧಾನ ಹೀಗಿದೆ. ಗೋಗೇಶ್ವರ ಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯ ದೇವರಿಗೆ ಲಿಂಗದಿಂದೇನು ಹೇಳಾ ಚನ್ನಬಸವಣ್ಣ ಎಂದು ಪ್ರಭು ನಿರೂಪಿಸಲು ಸಿದ್ಧರಾಮಯ್ಯದೇವರ ನಿಜ ಲಿಂಗೈಕ್ಯದ ಭೇದವಂ ಕೊಂಡಾಡಿ ಅಂಗಕ್ಕೆ ಲಿಂಗವನರಸಬೇಕಲ್ಲದೆ ಲಿಂಗಕ್ಕೆ ಲಿಂಗವನರಸಲುಂಟೇ ಎಂದು ಚನ್ನಬಸವಣ್ಣನೇ ಒಪ್ಪಿಕೊಂಡು ಬಿಡುತ್ತಾನೆ. ಮುಂದಿನ ಶೂನ್ಯಸಂಪಾದನೆಗಳು ಇದನ್ನು (ಅಪೇಕ್ಷಿಸಿ) ಆಕ್ಷೇಪಿಸಿ ಸಿದ್ಧರಾಮನಿಗೆ ಮತ್ತಿತರ ಶರಣರಿಗೆ ವೀರಶೈವ ದೀಕ್ಷೆಯನ್ನು ನೀಡುವುದಕ್ಕಾಗಿಯೇ ತಾನು ಶೂನ್ಯಸಂಪಾದನೆಯನ್ನು ಪರಿಷ್ಕರಿಸುತ್ತಿರುವುದಾಗಿ ಹಲಗೆಯಾರ್ಯ ಹೇಳುತ್ತಾನೆ. ಅಲ್ಲದೇ ಗುಮ್ಮಳಾಪುರದ ಸಿದ್ಧಲಿಂಗಯತಿ ಹಾಗೂ ಗೂಳುರು ಸಿದ್ಧವೀರಣಾರ್ಯರು ಸಿದ್ಧರಾಮನಿಗೆ ಲಿಂಗದೀಕ್ಷೆಯನ್ನು ನೀಡುವ ಕಾರಣಕ್ಕಾಗಿಯೇ ಪರಿಷ್ಕರಣ ಮಾಡಿರುವುದಾಗಿಯೂ ತಮ್ಮ ಪರಿಷ್ಕರಣಗಳಿಗೆ ಕಾರಣವನ್ನು ನೀಡುತ್ತಾರೆ.

ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಹಸ್ತಪ್ರತಿಗಳನ್ನು ಬರೆಸಿರುವುದು, ಕೆಳದಿಯ ಅರಸ ಬಸವಪುರಾಣ ಗ್ರಂಥವನ್ನು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಮೂರ್ತಿಗಳಿಗೆ ದಾನ ಮಾಡಿರುವುದು ಕನ್ನಡ ಹಸ್ತಪ್ರತಿಗಳ ಸಂರಕ್ಷಣೆ ಸಂವರ್ಧನೆಯ ಪ್ರಮುಖ ಉಲ್ಲೇಖವಾಗಿದೆ.

ಆಗಮ ಶಿವಶಾಸ್ತ್ರ ಲಿಖಿತ ಪುಸ್ತಕಗಳ ದಾನ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ಮೂರ್ತಿಗಳಿಗೆ ನಾನಾವಿಧ ಭಕ್ಷ್ಯ ಭೋಜ್ಯ ರಸಾಯನ ಫಲಂಗಳ್ ಮುಂತಾದ ಇಚ್ಛಾ ಪದಾರ್ಥಂಗಳಂ

ನೀಡಿ, ಸಂತುಷ್ಟಿಪಡಿಸಿಯವರಿಗೆ ನಾನಾವಿಧ ಚಿತ್ರತರ ವಸ್ತ್ರ ಕಂಬಳಿ ಕಥೆ ಶಿವದಾರ ವಿಭೂತಿಯಾಧಾರ ಭಸ್ಮರುದ್ರಾಕ್ಷಿ ಆಗಮ ಶಿವಶಾಸ್ತ್ರ ಲಿಖಿತ ಪುಸ್ತಕ ಪವಾಡ ಛತ್ರ ಪಾದುಕೆ ಹಸ್ತಾಧಾರ ದಂಡ ಮುಂತಾದ ಇಚ್ಛಾ ಪದಾರ್ಥಂಗಳಂ ಕೊಡಿಸಿ, ಪೇಟೆಯಲ್ಲಿ ಆರಾಧನ ಪೂರ್ವಕಂ ಮಹೋತ್ಸವ ಮೆರವಣಿಗೆಗಳು ಮಾಡಿ ಶಾಶ್ವತದ ಧರ್ಮಕೀಲೆಗಳು ಸಂಪಾದಿಸಿ, ರಾಜ್ಯಂಗೆಯ್ಯುತಿರ್ದ ಬಸವನರೇಂದ್ರಂ.[೩೦] ಇಲ್ಲಿ ಜ್ಞಾನರಕ್ಷಣೆ ಜ್ಞಾನಾರ್ಜನೆ ಜ್ಞಾನಪ್ರಸರಣ ಕಾರ್ಯಕೈಗೊಳ್ಳಲಾಗಿದೆ.

ಸಾಹಿತ್ಯವು ನಿರಂತರವಾಗಿ ಸಂರಕ್ಷಣೆಗೊಳ್ಳಲು ಈ ಕೆಳಗಿನ ಅಂಶಗಳು ಕಾರಣವಾಗಿವೆ. ಉದಾ: ವೀರಶೈವ ಮಠಾಧೀಶರಿಗೆ ದೀಕ್ಷಾಪ್ರಸಂಗ ಪ್ರಭು ಚನ್ನಬಸವ ರಾಜೇಂದ್ರರು ಶಿವಮೂರ್ತಿಯಾದ ಸೊನ್ನಲಿಂಗೆಯ ಸಿದ್ದರಾಮ ನಿರೂಪಿಸಿದ ಗೋಹೇಶ್ವರ ವಚನ ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳು ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ದೇಶ್ವರ ವಚನ, ಹಿರಿಯ ಮಂತ್ರಗೋಪ್ಯ ಶೂನ್ಯಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕವ, ಸಭಾಮಧ್ಯದಲ್ಲಿ ಆ ಶಿವಾನುಭವ ಚರಂತಿಗೆ ತೆಗೆದುಕೊಂಡ ಗುರುವರನು ಕಡೆಯಿಂದ ಆ ಶಾಸ್ತ್ರವಂ ಶಿಷ್ಯೋತ್ತಮನು ಶಿವಮಂತ್ರ ಗುರುಪ್ರಸಾದ ಮುಖನಾದ ಅಂಗಲಿಂಗ ಸಾಮರಸ್ಯ ಮುಂತಾಗಿ ೩೬ ತಿಳಿದಾತನು ಶಾಸ್ತ್ರವಂ ಗುರುಗಳಿಂ ಶ್ರವಣಗೊಂಡಾತನಾದ ವಿರಕ್ತನೆ ಶಾಸ್ತ್ರದ ಕಟ್ಟು ಹಿಡಿಯಬೇಕು ಈತನಿಗೆ ಶಿವಾನುಭವಶಾಸ್ತ್ರವೆ ಆಗಲಿ, ಪುರಾಣ ಪುಸ್ತಕವೆ ಆಗಲಿ ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿ ಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಿಕೊಳ್ಳಲು ಆ ಗಣವರನೆ ಚರಮೂರ್ತಿ ಎನಿಸುವನು. ಎನ್ನುವಲ್ಲಿ ಮಠಾಧೀಶನಾಗಿ ಅಧಿಕಾರ ಸ್ವೀಕರಿಸಬೇಕಾದಾಗ ಧರ್ಮದ ಸಂರಕ್ಷಣೆ ಸಾಮಾಜಿಕ ಕಳಕಳಿಯೂ ಅಲ್ಲದೇ ಹಸ್ತಪ್ರತಿಯಂತಹ ಜ್ಞಾನದ ಸಂರಕ್ಷಣೆ ಸಾಮಾಜಿಕ ಕಾರ್ಯವನ್ನು ಅವರಿಗೆ ವಹಿಸಲಾಗುತ್ತಿತ್ತು. ಅನುಭವ ಮಂಟಪದಲ್ಲಿ ಸಂವಾದಗೊಳ್ಳುತ್ತಿದ್ದ ವಚನಗಳು ಕಾಲಾನಂತರ ಬರಹ ಮಾದರಿಯಲ್ಲಿ ರೂಪಹೊಂದಿ ಸಂಕಲನಕೊಂಡು ಸಂರಕ್ಷಣೆಗೊಂಡವು.

೧೨ನೆಯ ಶತಮಾನದಲ್ಲಿ ಉದ್ಭವಿಸಿದ ಶರಣರ ಜನಪರ ಸಾಹಿತ್ಯಕ ಚಳುವಳಿಯಿಂದಾಗಿ ಜ್ಞಾನ ಅಕ್ಷರಜ್ಞಾನ, ಸಾಮಾನ್ಯರ ಮನೆ ಬಾಗಿಲುವರೆಗೂ ಬಂದದು. ಸ್ತ್ರೀ-ಪುರುಷ ವಿಪ್ರ-ಶೂದ್ರ ಮೊದಲಾದವರೆಲ್ಲ ಆಗ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿದ ಕಾರಣ, ಹಸ್ತಪ್ರತಿಗಳಂತಹ ಜ್ಞಾನ ಸಾಮಗ್ರಿಗಳ ಉತ್ಪಾದನೆ ವರ್ಧಿಸಿತು. ೧೨ನೆಯ ಶತಮಾನದಿಂದ ೧೯ನೆಯ ಶತಮಾನದವರೆಗೆ ಮಧ್ಯಕಾಲವಾಗಿದೆ. ವಚನೋತ್ತರ ಕಾಲದಲ್ಲಿ ವಚನ ಸಾಹಿತ್ಯ ಮತ್ತು ಚಳುವಳಿಯನ್ನು ಕಾಲದ ಒತ್ತಡಕ್ಕೆ ಅನುಗುಣವಾಗಿ ಗ್ರಹಿಸುತ್ತ ರೂಪಾಂತರಗೊಂಡು ಭಿನ್ನ ಭಿನ್ನ ಪ್ರಕಾರಗಳಲ್ಲಿ ಮರುಸೃಷ್ಟಿಸಲಾಯಿತು. ಪುರಾಣಗಳು, ಸಂಕಲನಗಳು, ಸಂಪಾದನೆಗಳು, ಟೀಕುಗಳು, ಗ್ರಂಥಗಳು ಮುಂತಾದ ಮಾದರಿಗಳಲ್ಲಿ ಸಾಹಿತ್ಯ ಕಾಣಿಸಿಕೊಂಡಿತು. ಹರಿಹರ, ಚಾಮರಸ, ಭೀಮಕವಿ, ಸಿಂಗರಾಜರಂತಹ ಪುರಾಣ ಕಾವ್ಯಗಳು ವಚನ ಸಾಹಿತ್ಯವನ್ನು ಅನುಲಕ್ಷಿಸಿ ಹುಟ್ಟಿಕೊಂಡವು.

ಈ ಮೇಲಿನ ಅಂಶಗಳೆಲ್ಲವು ವೀರಶೈವ ಧರ್ಮದ ತತ್ವಸಿದ್ಧಾಂತಗಳಾದವು ಆ ಕಾಲದ ಒತ್ತಡದಿಂದ ತನ್ನ ಆಚಾರ-ವಿಚಾರಗಳಿಗೆ ಧಕ್ಕೆ ಬಂದಾಗ ತನ್ನನ್ನು ತಾನು ಪುನರ್‌ರೂಪಿಸುವ ಮೂಲಕ ಸಾಹಿತ್ಯವನ್ನು ಸಂರಕ್ಷಿಸುವ, ಸಂವರ್ಧಿಸುವ ಕಾರ್ಯ ನಡೆಯಿತು.

ಕೊಡೆಕಲ್ಲು ಬಸವಣ್ಣ, ಮಂಟೇಸ್ವಾಮಿಯಂತವರು ಮೌಖಿಕ ಹಾಗೂ ಲಿಖಿತ ಸಾಹಿತ್ಯದ ಸಂಗೋಪನೆ ಹಾಗೂ ಸಂವರ್ಧನೆಗೆ ಸ್ವಲ್ಪ ಮಟ್ಟಿನ ನಾಂದಿಹಾಡಿದರು. ತತ್ವಪದಕಾರರು ತಮ್ಮ ಸಾಹಿತ್ಯ ರಚನೆಯನ್ನು ಸಂವಹನ ಪ್ರಧಾನವಾದ ನೆಲೆಯಲ್ಲಿ ಹೇಳಲು ಸಾಧ್ಯವಾಯಿತು. ೧೭ ರಿಂದ ೧೯ನೆಯ ಶತಮಾನ ಕನ್ನಡ ಭಾಷೆಯ ಸಂಕರ ಸಂಸ್ಕೃತಿಯ ಕಾಲವಾಯಿತು. ಮುಸ್ಲಿಂ ಆಳ್ವಿಕೆಯಿಂದ ಉತ್ತರ ಭಾರತದ ಭಾಷೆಗಳು ಸೈನಿಕರು, ವ್ಯಾಪಾರಿಗಳು ಸೂಫಿಗಳು ಆಡುತ್ತಿದ್ದ ಅರಬ್ಬಿ ಫಾರಸಿ, ಉರ್ದು ಭಾಷೆಗಳು, ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಯೆ ಹೆಚ್ಚು. ಹೀಗಾಗಿ ಕನ್ನಡ ಭಾಷೆಯನ್ನು ತತ್ವಪದಕಾರರು ಸಂವಹನವಾದ ನೆಲೆಯಲ್ಲಿಯೇ ಸಾಹಿತ್ಯವನ್ನು ಸಂರಕ್ಷಿಸಿದರು ಎಂದು ಹೇಳಬಹುದು.

ವಾಲ್ಮೀಕಿ ರಾಮಾಯಣದಿಂದ ಹಿಡಿದು ಹೊಸಗನ್ನಡದಲ್ಲಿ ಮಹಾಛಂದಸ್ಸಿನಲ್ಲಿ ಶ್ರೀರಾಮಾಯಣ ದರ್ಶನಂ ಕೃತಿ ರಚಿಸಿದ ಕುವೆಂಪುರವರೆಗಿನ ಅಲ್ಲದೆ ಎ.ಕೆ. ರಾಮಾನುಜನ್‌ರವರ ಮುನ್ನೂರು ರಾಮಾಯಣಗಳವರೆಗೆ ಸಾಹಿತ್ಯ ಕೃತಿಗಳು ಮೂಲ ಕಥಾನಕ ಒಂದಾದರೂ ಕಾಲಕಾಲಕ್ಕೆ ಪುನರುತ್ಪಾದನೆಯೊಂದಿಗೆ ಸಂರಕ್ಷಣೆಗೊಂಡ ಬಗೆಯನ್ನು ಗುರುತಿಸಬಹುದು. ವಾಲ್ಮೀಕಿ ರಚಿಸಿದ ರಾಮಾಯಣದಲ್ಲಿ ರಾಮ ಉದಾತ್ತನಾಗಿ ಚಿತ್ರಿಸಿದರೆ ನಾಗಚಂದ್ರ ಮತ್ತು ಜನಪದರಲ್ಲಿ ರಾವಣನ ಉದಾತ್ತ ಗುಣಗಳ ಚಿತ್ರಣದ ಜೊತೆಗೆ ರಾವಣನ ಮನಸ್ಸಿನ ತಲ್ಲಣ ಸಹಜ ಬಯಕೆಯಂತೆ ಚಿತ್ರಿತವಾಗಿವೆ. ಅಲ್ಲದೇ ಜೈನರಲ್ಲಿ ರಾವಣನು ರಾಕ್ಷಸನಲ್ಲ, ನರಭಕ್ಷಕನಲ್ಲ, ಮೂರ್ಖನೂ ಅಲ್ಲ. ಜೈನಧರ್ಮೀಯನಾದ ವಿಮಲಸೂರಿಯು ರಾಮನ ವಂಶಾವಳಿಯಿಂದ ಕೃತಿಯನ್ನು ಆರಂಭಿಸುವುದಿಲ್ಲ. ಅದರ ಬದಲಾಗಿ ರಾವಣನ ವರ್ಣನೆಯೊಂದಿಗೆ ಕೃತಿಯನ್ನು ಆರಂಭಿಸುತ್ತಾನೆ. ರಾವಣ ಮಹಾನ್ ವ್ಯಕ್ತಿ ಏನೋ ಅರಿಯದ ತಪ್ಪಿನಿಂದ ತನ್ನ ಅವಸಾನ ತಾನೆ ಕಂಡುಕೊಳ್ಳುತ್ತಾನೆ ಎನ್ನುವಲ್ಲಿ ಧಾರ್ಮಿಕತೆಯ ಪ್ರಭಾವದಿಂದ ಪರಿಸರದ ಒತ್ತಡದಿಂದಲೋ ಒಂದು ಕೃತಿ ಪುನಃ ಪುನಃ ಚಲನಶೀಲ ನೆಲೆಯಲ್ಲಿ ಮತ್ತೆ ರೂಪಗೊಳ್ಳುತ್ತದೆ. ಇದುವೇ ಕನ್ನಡ ಸಾಹಿತ್ಯ ಸಂರಕ್ಷಣೆಯ, ಸಂವರ್ಧನೆಯ ಪ್ರಮುಖ ನೆಲೆಯಾಗಿ ರೂಪಗೊಂಡಿದೆ.

ಮಹಾಭಾರತ, ರಾಮಾಯಣ ಇನ್ನೂ ಅನೇಕ ಕೃತಿಗಳು, ವಚನ ಸಾಹಿತ್ಯದಂತಹ ಪ್ರಕಾರಗಳು ಕಾಲದಿಂದ ಕಾಲಕ್ಕೆ ಆಕಥನವನ್ನೇ ಆಧಾರವಾಗಿಟ್ಟುಕೊಂಡು ಆ ಪ್ರದೇಶದ ವೈಶಿಷ್ಟ್ಯ ಕೃತಿಕಾರನ ಆಲೋಚನೆ, ಅವನ ಜ್ಞಾನ ವಲಯವನ್ನು ಅವಲಂಬಿಸಿ ಅನೇಕ ವಿಚಾರಗಳು ಪುನರ್ ಉತ್ಪತ್ತಿಯಾಗುತ್ತವೆ. ಸದಾ ಚಲನಶೀಲವಾಗಿ ಹರಿಯುವ ನದಿಯಂತೆ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ರೀತಿಯಲ್ಲಿ ಜ್ಞಾನವನ್ನು ಸಾದರಪಡಿಸಿರುವುದು ಕಾಣುತ್ತದೆ. ದಂಡಿಯ ಕಾವ್ಯಾದರ್ಶ ಅನುಲಕ್ಷಿಸಿ ಹುಟ್ಟಿಕೊಂಡ ಶ್ರೀವಿಜಯನ ಕವಿರಾಜಮಾರ್ಗ. ವಾಲ್ಮೀಕಿ ರಾಮಾಯಣ ಮತ್ತು ವ್ಯಾಸನ ಮಹಾಭಾರತದಂತ ಮಹಾಕಾವ್ಯದ ವಸ್ತುಗಳನ್ನು ಅನುಲಕ್ಷಿಸಿ ರಚನೆಗೊಂಡ ಅನೇಕ ಕೃತಿಗಳು ಜ್ಞಾನವನ್ನು ಸದಾ ಚಲನಶೀಲ ನೆಲೆಯಿಂದ

ಗ್ರಂಥಗಳ ರೂಪದಲ್ಲಿ ಮತ್ತು ಸಂವಹನ ನೆಲೆಯಲ್ಲಿ ಸಂರಕ್ಷಿಸಿರುವುದು ಸಾಹಿತ್ಯ ಸಂರಕ್ಷಣೆ ಪ್ರಮುಖ ಕಾರ್ಯವಾಗಿ ಕಾಣುತ್ತದೆ.

ವಚನ ಸಾಹಿತ್ಯವನ್ನು ಸಂಗ್ರಹಿಸಿ ಸಂಕಲಿಸಲು ಶ್ರಮಿಸಿದ ಡಾ.ಫ.ಗು. ಹಳಕಟ್ಟಿಯವರು ೧೫ನೆಯ ಶತಮಾನದಲ್ಲಿ ಗೂಳೂರು ಸಿದ್ಧವೀರಣ್ಣೊಡೆಯವರು ಸಂಗ್ರಹಿಸಿದ ಶೂನ್ಯಸಂಪಾದನೆಯನ್ನು ೧೯೩೦ರಲ್ಲಿ ಪ್ರಕಟಿಸಿದ ವಚನ ಕ್ಷೇತ್ರದಲ್ಲಿ ಏಕೈಕ ಧೀರರಾಗಿ ಶ್ರಮಿಸಿದರು. ಅಲ್ಲದೇ ಕನ್ನಡಿಗರ ಪ್ರೀತಿಗೆ ಪಾತ್ರರಾದರು.

ಚಂಪೂ, ರಗಳೆ, ವಚನ, ಕೀರ್ತನೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಪುರಾಣ, ಚರಿತ್ರೆ, ಸ್ತೋತ್ರ, ದಂಡಕ, ತಾರಾವಲಿ, ಬಯಲಾಟ ಕಾವ್ಯ ಕಥೆ ಮುಂತಾದ ವಿಭಿನ್ನ ಪ್ರಕಾರದ ಸಾಹಿತ್ಯಕ ಸಂಪತ್ತು ಕನ್ನಡದಲ್ಲಿ ಕಾಣುತ್ತದೆ. ಇದಲ್ಲದೆ ಅಲಂಕಾರ, ಛಂದಸ್ಸು, ವ್ಯಾಕರಣ, ನಿಗಂಘಗಳಂಥ ಲಾಕ್ಷಣಿಕ ಗ್ರಂಥಗಳೂ ರಟ್ಟಮತಶಾಸ್ತ್ರ, ಕಾಮಶಾಸ್ತ್ರ, ಪಾಕಶಾಸ್ತ್ರ, ಖಡ್ಗಶಾಸ್ತ್ರ, ಕೃಷಿಶಾಸ್ತ್ರ, ಶಿಲ್ಪಶಾಸ್ತ್ರ, ಗಣಿತಶಾಸ್ತ್ರ, ವೈದ್ಯಶಾಸ್ತ್ರ, ಮಾಟ-ಮಂತ್ರ, ರಸವಿಜ್ಞಾನದಂಥ ಹಲವು ಸಾಮಾಜಿಕ ಅವಶ್ಯಕತೆಯುಳ್ಳ ಕೃತಿಗಳು ಸಿಗುತ್ತವೆ. ಇದಲ್ಲದೆ ಉದ್ಧರಣೆ ಪಟಲಗಳಂಥ ಸಚಿತ್ರ ಹಸ್ತಪ್ರತಿಗಳು ಕಾಣಸಿಗುತ್ತವೆ. ಸಾಹಿತ್ಯಕ ಅಂಶಗಳಲ್ಲದೇ ಸಾಹಿತ್ಯೇತರವಾದ ನೆಲೆಯಲ್ಲಿ ರೂಪಗೊಂಡ ಹಸ್ತಪ್ರತಿಗಳು ಕನ್ನಡ ಹಸ್ತಪ್ರತಿಗಳ ಚರಿತ್ರೆಯನ್ನು ಕಟ್ಟಿಕೊಳ್ಳುತ್ತವೆ.

ಕನ್ನಡ ಸಾಹಿತ್ಯದುದ್ದಕ್ಕೂ ಧರ್ಮಾಶ್ರಯದಲ್ಲಿ ಕವಿಗಳಿದ್ದರೂ ಅವರು ಧರ್ಮದ ಸಾಂಸ್ಥಿಕ ವಕ್ತಾರರಾಗಿರಲಿಲ್ಲವೆಂಬುದು ಮಹತ್ವದ ಸಂಗತಿ. ಧರ್ಮಕ್ಕೆ ಜನರು ಹೇಗೆ ಬದುಕಬೇಕೆಂದು ಹೇಳುವುದರಲ್ಲಿ ಆಸಕ್ತಿಯಿದ್ದರೆ, ಕಾವ್ಯಕ್ಕೆ ಜನರು ಹೇಗೆ ಬದುಕುತ್ತಿದ್ದಾರೆ ಎಂದು ಶೋಧಿಸುವುದರಲ್ಲಿ ಆಸಕ್ತಿ. ಹೀಗಾಗಿ ಕನ್ನಡ ಕವಿಗಳಲ್ಲಿ ಧರ್ಮ ಮತ್ತು ಕಾವ್ಯಧರ್ಮ ಎಂಬ ಎರಡು ಪರಿಕಲ್ಪನೆಗಳು ಬೆಳೆದು ಬಂದವು. ಕಾವ್ಯದ ಈ ಸೂಕ್ಷ್ಮತೆಯನ್ನು ಅರ್ಥಮಾಡಿಕೊಳ್ಳದ ಕೆಲವು ಆಲೋಚನ ಕ್ರಮಗಳು ಕನ್ನಡ ಕಾವ್ಯವು ಧರ್ಮ ಪ್ರಧಾನವಾದದ್ದು ರಾಜಾಶ್ರಯದಲ್ಲಿ ಬೆಳೆದದ್ದು ಎನ್ನುವ ಒಂದಂಶವನ್ನೇ ಇಡೀ ಸಾಹಿತ್ಯದ ಮೂಲನೆಲೆಯನ್ನಾಗಿಸಿದ್ದಲ್ಲದೇ ಹಾಗೇ ಗ್ರಹಿಸುವಂಥ ವಾತಾವರಣವನ್ನು ನಿರ್ಮಿಸಿದವು. ಅಲ್ಲದೆ ಕನ್ನಡ-ಕವಿ-ಸಾಹಿತ್ಯವನ್ನು ಧಾರ್ಮಿಕ ನೆಲೆಯಲ್ಲಿ ಜೈನ-ವೀರಶೈವ-ವೈದಿಕ ಎಂದು ವಿಭಾಗಿಸಲಾಯಿತು. ಹಾಗೆ ನಡೆದ ಅಧ್ಯಯನಗಳಿಗೂ ಚಿರಸ್ಥಾಯಿಗೊಂಡವು. ಪಂಪ ಕವಿ ತನ್ನ ಕೃತಿಗಳ ಕುರಿತು ಧರ್ಮ ಕಾವ್ಯಧರ್ಮವು ವಿಭಿನ್ನವಾದದ್ದು ಎಂದು ಹೇಳುತ್ತಾನೆ. ಹೀಗಾಗಿ ಧರ್ಮದ ನೆಲೆಗಟ್ಟನ್ನು ಬಿಟ್ಟು ಸಾಹಿತ್ಯಕ ಅಂಶಗಳು ಬೆಳೆದು ಬಂದಿರುವುದು ಸಾಹಿತ್ಯಕ ಸಂರಕ್ಷಣೆಯ ಮಹತ್ವದ ವಿಚಾರವಾಗಿದೆ.

ಕನ್ನಡ ಹಸ್ತಪ್ರತಿಗಳು ಸಾಹಿತ್ಯಕ ಸಂರಕ್ಷಣೆ, ಸಂವರ್ಧನೆಗಾಗಿ ಜ್ಞಾನಾರ್ಜನೆ, ಜ್ಞಾನರಕ್ಷಣೆ ಮತ್ತು ಶುದ್ಧಿಯಾರ್ಜನೆಯ ನೆಲೆಗಟ್ಟಿನಲ್ಲಿ ಸಂರಕ್ಷಣೆಗೊಂಡಿವೆ ಎಂಬುದು ಗಮನಾರ್ಹ.

**ಜ್ಞಾನಾರ್ಜನೆಗಾಗಿ**

.....ಕಲ್ಯಾಣ ಬಸವಣ್ಣನ ಮಠದ ಗುರುಪಾದಯ್ಯನವರ ವರ ತನುಜನಾದ ಚನ್ನಬಸಪ್ಪನವರ ಸು ಕುಮಾರನಾದ ಗುರುಸಿದ್ಧಪ್ಪ ಪಟ್ಟದೇವರ ಅನುಜನಾದ ಅಂತ್ಯವಾಸಿ ವಿರೂಪಾಕ್ಷಯ್ಯನು ಸ್ವತೇವ ಬರಕೊಂಡಿದ್ದಾನು||[೨೧]

..... ಸುಗಟೂರು ಸ್ಥಳ ಶಾನುಭೋಗಾ ಭಾಸ್ಕರಪ್ಪನವರ ಕೊಮಾರ ಗುಂಡಪ್ಪನ ತಂದ್ಮೂಲ ಲಕ್ಷ್ಮಿನರಸನು ಪುತ್ರ ಪಾತ್ರ ಪಾರಂಪರ್ಯವಾಗಿ ವೋದಿಕೊಳ್ಳುವುದಕೆ ಬರದಂಥಾ ಭಾರತಯುದ್ಧ ಪಂಚಕ ಪುಸ್ತಕಕ್ಕೆ....[೩೨]

.....ಶ್ರೀ ಮನ್ನಿರ್ವಾಣದ ದೇವೆಂದ್ರ ಕೀರ್ತಿದೇವರ ಪ್ರಿಯ ಶಿಷ್ಯನಹ ಚಿಕ್ಕದೇವಣ್ಣಗಳು ತನಗೆ ಅಧ್ಯಯನ ನಿಮಿತ್ತವಾಗಿ .....ಬರೆದ... ವಿವೇಕ ವಿಲಾಸ ಗ್ರಂಥಕ್ಕೆ ಶುಭಮಸ್ತು.....[೩೩]

ಶ್ರೀ ಜ್ಞಾನಸಾಗರವರ್ಣಿಯವರು ತಮ್ಮ ಜ್ಞಾನಾವರಣಿ ಕರ್ಮೋಪಶಮನ ನಿಮಿತ್ತ.... ಸಂಪೂರ್ಣವಾಗಿ ಬರೆದ ಶ್ರೀ ಪದ್ಮಾವತಿ ಅಮ್ಮನವರ ಚರಿತೆ.[೩೪]

ಗ್ರಂಥೋತ್ಪಾದನೆಯ ಮುಖ್ಯ ಉದ್ದೇಶ ಕರ್ಮೋಪಶಮನವನ್ನು ಕಳೆದುಕೊಳ್ಳಲು ಜ್ಞಾನವನ್ನು ಸಂರಕ್ಷಿಸಲಾಗುತ್ತಿತ್ತು. ಕರ್ಮವನ್ನು ನಾಶಮಾಡಿಕೊಳ್ಳುವದಕ್ಕಾಗಿ ಗ್ರಂಥಗಳ ಸಂರಕ್ಷಣೆ ಅದರಲ್ಲೂ ಧಾರ್ಮಿಕ ಗ್ರಂಥಗಳೂ ಹೆಚ್ಚಿನ ಪ್ರಮಾಣದಲ್ಲಿ ಪ್ರತಿ ಮಾಡಿಕೊಳ್ಳುವ ಪ್ರತಿಮಾಡಿಕೊಡುವ ಪದ್ಧತಿ ಜೈನರಿಂದಲೇ ಪ್ರಾರಂಭವಾಯಿತು. ಇದಕ್ಕೆ ಉತ್ತಮ ಉದಾಹರಣೆ ಜೈನರಲ್ಲಿ ಅತ್ತಿಮಬ್ಬೆ ವೀರಶೈವರಲ್ಲಿ ಕೆಳದಿ ಅರಸು ಇತ್ಯಾದಿ.

**೩.೧. ಜ್ಞಾನರಕ್ಷಣೆಗಾಗಿ**

..... ಯಿಾ ಪುಸ್ತಕವನ್ನು ಜೋಗನಹಳ್ಳಿ ವಿರಕ್ತದೇವರು ತಮ್ಮ ಮನೆಗೆ ಪುಸ್ತಕವಾಗಿರಲೆಂದು ಕಾರ್‍ಯದ ಮಹಂತ ಸ್ವಾಮಿಗಳ ಬಳಿಯಲ್ಲಿದ್ದ ಪ್ರತಿಯ ತಂದು ಪ್ರತಿಯಿದ್ದ ಮೇರೆಗೆ ಬರೆದಿರಿಸಿದೆನು.[೩೫]

.....ಸ್ವಾಮಿಯವರ ಅಪ್ಪಣೆಯಿಂದ ಚಂದ್ರಸಾಗರವರ್ಣಿ ಬೆಳಗುಳ ಮಠಕ್ಕೆ ಬರೆದು ಒಪ್ಪಿಸಿದ ಚಂಪೂ ಭಾರತ ಸಂಪೂರ್ಣ.[೩೬]

**೩.೨. ಪುಧ್ಧಿಯಾರ್ಜನೆಗಾಗಿ**

..... ಶ್ರೀ ಕಾರ್ಕಳದ ಶ್ರೀ ಮದಭಿನವ ಲಲಿತಕೀರ್ತಿಭಟ್ಟಾರಕ ದೇವರುಗಳಿಗೆ......ಬೈಪವಾಡಿಯ ಲಲಿತೂ ಗುಮ್ಮಣ್ಣ ಶೆಟ್ಟಿಯವರು ತಮಗೆ ಕೇವಲ ಜ್ಞಾನ ಸಂಪ್ರಾಪ್ತಿ ನಿಮಿತ್ತವಾಗಿ..... ಬರೆಯಿಸಿ ಕೊಟ್ಟರು.[೩೭]

......ಶ್ರೀಶಾಂತಿಮಲೆ ಅವಗಳಜಿಯನವರು ತಮಗೆ ಕೇವಲಜ್ಞಾನ ಪ್ರಾಪ್ತಿ ನಿಮಿತ್ತವಾಗಿ ಬರದಂಥಾ ಹಿರೇಪಂಚಪರಮೇಷ್ಠಿಗಳ ವ್ಯಾಖ್ಯಾನಸಮಾಪ.[೩೮]

ಗುರುರಾಜನ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತೆಯಲ್ಲಿ ಶ್ರೀಶೈಲಕ್ಕೆ ಹೊರಟ ಭಕ್ತರನ್ನು ಕುರಿತು.

> ''ಗಾಯಂತೋ ಬಸವೇಶಸ್ಯ ಗೀತಾನ್ಯಪಿ
> ಪ್ರಭು ಸತ್ಯೇಶ ಚಾಮಯ್ಯ ಮಡಿವಳಮಾಚಯ್ಯ ಜಂಗಮೈಸ್ತಥಾ॥
> ವರದ ಶಂಕರದಾಸಯ್ಯ ದಾಸ ಕೇತೋದ್ಭಟ್ಯೈರಪಿ।

ಕಕ್ಕಯ್ಯ ಚೆನ್ನಬಸವ ಕಲ್ಲಿದೇವ ಹಲಾಯುಧೈಃ॥

ಶ್ರೀ ಕೇಸಿರಾಜ ಚಿಕ್ಕಾರ್ಯಾ ಮಸಣಾರ್ಯೈರ್ಮಹಾತ್ಮಭಿಃ

ಸಿದ್ಧರಾಮಾಭಿಧಾನೇನ ಮಹಾದೇವ್ಯಾ ಪ್ರಸಿದ್ಧಯಾ॥

ಭವ್ಯ ಸೊಡ್ಡಲಬಾಚಾರ್ಯ ಬಸವೇಶ ಪುರಸ್ಸರೈಃ।

ಕೃತೇಷು ಗೀತೇಷ್ವ ಪಿಚ ಗೀಯಮಾನೇಷು ಗಾಯಕೈಃ॥

ಬಸವೇಶೋಪರಚಿತಾ ಗೀತಾಂ... ಗಾಯಂತಃ[೩೯]

ಈ ಮೇಲಿನ ಉಲ್ಲೇಖವು ವಚನಸಾಹಿತ್ಯದ ಪ್ರಸಾರ ಮಾಡುವದನ್ನು ತಿಳಿಸುತ್ತದೆ. ಪ್ರೌಢದೇವರಾಯ ಸಿಂಹಾಸನವೇರುತ್ತಲೇ ವಚನ ಸಾಹಿತ್ಯವನ್ನು ಪುನರುಜ್ಜೀವನಕ್ಕೆ ಶ್ರಮಿಸಿದನು.

ಲಕ್ಕಣ್ಣದಣ್ಣಾಯಕರು ಮುನ್ನ ಭಂಡಾರಿ

ಜಕ್ಕಪ್ಪ ಕಲ್ಲೆಹದ ಕೇತಿಶೆಟ್ಟಿಯರಿವರು

ಲಕ್ಕಸಂಖ್ಯೆಯ ವಿತ್ತಮಂ ಮೆಚ್ಚಿಸುತ್ತ...[೪೦]

ವಚನ ಸಾಹಿತ್ಯವನ್ನು ವೀರಶೈವ ಧರ್ಮ ಮತ್ತು ಸಾಹಿತ್ಯಕ ಸಂರಕ್ಷಣೆಯ ಕಾರ್ಯಕೈಗೊಂಡರು. ಏಕೋತ್ತರ ಶತಸ್ಥಲ, ಲಿಂಗಲೀಲಾವಿಲಾಸದಂತಹ ಗ್ರಂಥಗಳು ರಚನೆಗೊಂಡವು. ನಂತರ ಶೂನ್ಯ ಸಂಪಾದನೆಯಂತಹ ಸಂಕಲನ ಗ್ರಂಥಗಳು ಹರಿದು ಹಂಚಿಹೋಗಿದ್ದ ವಚನಗಳನ್ನು ಒಟ್ಟುಕೂಡಿಸುವ ಕೆಲಸ ಕೈಗೊಂಡವು. ಕೊಡೆಕಲ್ಲುನ ಶರಣರು ಅಲ್ಲದೇ ೧೯ನೆಯ ಶತಮಾನದಲ್ಲಿ ವಚನಸಾಹಿತ್ಯವನ್ನು ಸಂಗ್ರಹಿಸಿ ಸಂಕಲಿಸಿ ವಚನಶಾಸ್ತ್ರಸಾರ ಎಂಬ ಮಹತ್ವದ ಗ್ರಂಥವನ್ನು ನೀಡಿದ ಡಾ.ಫ.ಗು. ಹಳಕಟ್ಟಿಯವರು ವಚನಶಾಸ್ತ್ರವನ್ನು ೧೯೩೦ರಲ್ಲಿ ಗೂಳೂರು ಸಿದ್ಧವೀರಣೊಡೆಯ ಶೂನ್ಯಸಂಪಾದನೆಯನ್ನು ಪ್ರಕಟಿಸಿ ವಚನ ಪಿತಾಮಹ ಎಂಬ ಖ್ಯಾತಿಗೆ ಬಾಜನರಾದರು. ಹೀಗಾಗಿ ಕನ್ನಡ ಹಸ್ತಪ್ರತಿ ಸಾಹಿತ್ಯವು ಕವಿರಾಜಮಾರ್ಗದಿಂದ ಇಂದಿನವರೆಗೆ ಸಂರಕ್ಷಣೆಗೊಳ್ಳುತ್ತಾ ಬಂದಿದೆ.

ವೀರಶೈವ ಹಸ್ತಪ್ರತಿ ಪುಷ್ಪಿಕೆಗಳಲ್ಲಿ ಸಾಹಿತ್ಯ ಸಂರಕ್ಷಣೆ ಉಲ್ಲೇಖಗಳು ದಟ್ಟವಾಗಿ ಕಾಣುತ್ತವೆ.

‘‘**ಆದಿ:** ಶ್ರೀ ತೋಂಟದ ಸಿದ್ದೇಶ್ವರನ ಶ್ರೀ ಪಾದವೇ ಗತಿ

ಶ್ರೀ ಗುರು ಗಮ್ಮಳಾಪುರದ ಗುರುಶಾಂತಸ್ವಾಮಿಗಳ

ಪಾದವೇ ಗತಿ



**ಅಂತ್ಯ:** ....ವಿರೋಧಿಕ್ರುತು ನಾಮ ಸ॥ರದ ಮಾಘ ಶು

೧೩ ಆದಿತ್ಯವಾರ ಪುನೊರ್ವಸು ನಕ್ಷತ್ರಕ್ಕೆ ಸಮಾಪ್ತ

॥ಕಂದ॥ ‘ತಪ್ಪಂ ಬರದಾತಂ .....ಶ್ರೀ ಶ್ರೀ

.....ಶ್ರೀಮತ್ಪರಮ ಕೈಲಾಸ ಸಿಂಹ್ವಾಸನಾರೂಢ ಪರಂಜ್ಯೋತಿ ಸ್ವರೂಪಿಗಳಾದ ರಾ। ರಾ। ಸುಲ್ಲೆಗಾವಿ ಚಂನಬಸವಸ್ವಾಮಿಗಳಿಗೆ ಶ್ರೀಮತು ಸಜ್ಜನ ಶುದ್ಧ ಶಿವಾಚಾರ ಸಂಪನ್ನರಾದ ಯೆಕವಾಕ್ಯ ಪ್ರತಿಪಾಲಕರಾದ ಭಕ್ತಿಗೆ ಗಜರಾದ ಯುಕ್ತಿಗೆ ಚಾತೂರ್ಯ ಉಳ್ಳವರಾದ ನಿತ್ಯ ಅಂನದಾನ ವಿನೋದಿಗಳಾದ ಶ್ರೀಬಸವೇಶ್ವರದೇವರ

ಸಾಂಪ್ರದಾಯಕರಾದ ರಾ। ರಾ। ಪ। ಕೋಟಸೀಮೆ ನಾಡಗೌಡ ದಾನಪ್ಪನವರು ತಂಮ ಭಕ್ತಿಯಿಂದ ಪುಸ್ತಕ ಬರಿಸಿಕೊಟ್ಟುಯಿದ್ದಾರು ಶ್ರೀ ಶ್ರೀ.... ಯಿ ಪುಸ್ತಕ ಬರದವರುದಾರುಯೆಂದರೆ ಶಿಂತ। ಕೆಲೂರ ವೊದಿಸೊಮಠದ ಮುದ್ದಸಂಗಪ್ಪಗಳ ತನುದ್ಭವರಾದ ಗುರುಪಾದಯ್ಯನವರು ತಂಮ ಸುಹಸ್ತದಿಂದ ಬರದುಯಿದ್ದಾರು ಶ್ರೀ ಶ್ರೀ''[೪೧] ಅಖಂಡೇಶ್ವರನ ಜೋಗುಳ ವಚನದಲ್ಲಿ

**ಆದಿ:** ಶ್ರೀ ಶಾರದಾಂಬಾಯ ನಮಃ

**ಅಂತ್ಯ:** 'ಯಿಾಶ್ವರನಾಮ ಸಂವತ್ಸರದ ಚೈತ್ರ ಶು ೧೨ಯು ಭಾನುವಾರ
ಘಳಿಗೆ ೧೨ಕ್ಕೆ ಮಘ ನಕ್ಷತ್ರ ನಾಲ್ಕನೇ ಪಾದದಲ್ಲಿ ಬರದಂತ್ಥಾ
ಅಂಖಂಡೇಶ್ವರ ವಚನ ಪುಸ್ತಕಕ್ಕೆ ಶ್ರೀ ಶಿವಾರ್ಪಣಮಸ್ತು
ಶ್ರೀ ಸದ್ಗುರುವೇ ಗತಿ।
ತಪ್ಪಂ ಬರದಾತಂ.....
ಯಿ ಪುಸ್ತಕದೊಳಗೆ ತಪ್ಪುಯಿದ್ದಾರೆ ಬಲ್ಲಾ ಮಹಾಪುರುಷರು
ತಿದ್ದಿಕೊಳುವದೂ ಯಿದಕ್ಕೆ ಏನಾದರೂ ಅಪನಿಂದೆ ಮಾಡಿದರೆ
ಅಖಂಡೇಶ್ವರನ' ಪಾದದಾಣೆ ಶ್ರೀಗುರುವಿನ ಪಾದಾರವಿಂದಗಳಿಗೆ
ಮಾಡುವ ಬಿಂನಹ ಶ್ರೀ ಶ್ರೀ ಶ್ರೀ[೪೨]

ಕೃತಿ ಬರೆದವರ, ಬರೆಸಿದವರ, ಕೃತಿರಚನೆಯ ಗಳಿಗೆ ಕೃತಿ ರಕ್ಷಣಾ ಮಾರ್ಗ ಹತ್ತು ಹಲವು ವಿಷಯಗಳನ್ನು ಹಸ್ತಪ್ರತಿ ಪುಷ್ಪಿಕೆಗಳು ಒಳಗೊಂಡಿವೆ. ಹೀಗಾಗಿ ಸಾಹಿತ್ಯ ಸಂರಕ್ಷಣೆ ಕಾಲದಿಂದ ಕಾಲಕ್ಕೆ ಸಂರಕ್ಷಣೆ, ಸಂವರ್ಧನೆ, ಪುನರುತ್ಪಾದನೆ ರೂಪದಲ್ಲಿ ಸಂಗೋಪನೆಗೊಳ್ಳುತ್ತಾ ಬಂದಿದೆ. ಕನ್ನಡ ಹಸ್ತಪ್ರತಿಗಳ ಸಂರಕ್ಷಣೆ, ಸಂವರ್ಧನೆಯ ದೃಷ್ಟಿಯಿಂದ ಹಸ್ತಪ್ರತಿ ಪುಷ್ಪಿಕೆಗಳು ಪ್ರಾಮುಖ್ಯತೆ ಹೊಂದಿವೆ.

ಇಡೀ ಕನ್ನಡ ಸಾಹಿತ್ಯ ಚರಿತ್ರೆಯನ್ನ ಅವಲೋಕಿಸಿದಾಗ ಆರಂಭಕಾಲದಿಂದ ಹಿಡಿದೂ ಈಗಿನವರೆಗೂ ಹಸ್ತಪ್ರತಿಗಳ ಸಂಗೋಪನೆ, ಸಂವರ್ಧನೆ ಹಾಗೂ ವಿಸ್ತರಣಾ ಮಾದರಿಗಳು ದಟ್ಟವಾಗಿ ಕಾಣುತ್ತದೆ. ಇದಕ್ಕೆ ಕವಿ, ಲಿಪಿಕಾರರೂ ಕಾರಣವಾದಂತೆ ಆಶ್ರಯದಾತರೂ, ಪೋಷಕರು, ಅಭಿಮಾನಿಗಳೂ, ಕಾರಣವಾಗಿದ್ದಾರೆ ಹಸ್ತಪ್ರತಿಗಳ ರಚನೆ, ದಾನ, ಮರುಲಿಪೀಕರಣ, ಶಿಥಿಲಗೊಂಡ ಪಠ್ಯಗಳ ಮರುಸಂಕಲನ, ಸಂಗ್ರಹ, ಸಂಪಾದನೆ, ವ್ಯಾಖ್ಯಾನ, ಟೀಕುಗಳಂಥ ಪಠ್ಯಾಧರಿತ ಚಟುವಟಿಕೆಗಳೂ ಹಸ್ತಪ್ರತಿಗಳ ರೂಪ ಸ್ವರೂಪದ ಸಂರಕ್ಷಣೆ, ಬಹಳ ಮುಖ್ಯವಾದ ಮಾತಾಗಿ ಬಂದಿದೆ. ಇದನ್ನು ಮೌಖಿಕ ಸಂಪ್ರದಾಯದಲ್ಲೂ ಕಾಣಬಹುದು. ಒಂದು ಹಸ್ತಪ್ರತಿಯ ರೂಪಿಕೆ ಎಂದರೆ ಅದು ಒಬ್ಬ ಕವಿ ಹಾಗೂ ಸಾಹಿತ್ಯ ಪ್ರಕಾರದ ಉಳಿಕೆ ಹಾಗೂ ಬೆಳೆಕೆಯೇ ಆಗಿದೆ. ಒಂದು ಹಸ್ತಪ್ರತಿ ನಾಶವಾದರೆ ಒಬ್ಬ ಕವಿ ಹಾಗೂ ಲಿಪಿಕಾರ ಆತನ ಸಂಸ್ಕೃತಿಯೇ ನಾಶವಾದಂತೆ. ಈ ಹಿನ್ನೆಲೆಯಲ್ಲಿ ಇಡೀ ಕನ್ನಡ ಸಂಸ್ಕೃತಿ ತನಗೆ ಬೇಕಾದ ಪಠ್ಯಗಳನ್ನು ಹೀಗೆ ಮರುರೂಪಿಸಿ ಕಾದಿಟ್ಟುಕೊಂಡು ಬಂದಿರುವುದು ಅದರ ಚಲನಶೀಲತೆಗೆ ಸಾಕ್ಷಿಯಾಗಿದೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು: ಪುಟ.೬೬; ೨೦೦೬

೨. ಅದೇ, ಪುಟ.೧೦; ೨೦೦೬

೩. ವಿ.ಸೀತಾರಾಮಯ್ಯ (ಸಂ), ಶ್ರೀವಿಜಯ ವಿರಚಿತ ಕವಿರಾಜಮಾರ್ಗ: ಪುಟ.೭೯; ೨೦೧೧

೪. ಅದೇ, ಪುಟ.೭೯; ೨೦೧೧

೫. ಅದೇ, ಪುಟ.೭೯; ೨೦೧೧

೬. ವೀರೇಶ ಬಡಿಗೇರ, ಹಲಗೆ ಬಳಪ: ಪುಟ.೬೦; ೨೦೦೫

೭. ಅದೇ, ಪುಟ.೬೩; ೨೦೦೫

೮. ಆರ್.ನರಸಿಂಹಚಾರ್, ಕನ್ನಡ ಗ್ರಂಥಸಂಪಾದನಶಾಸ್ತ್ರ: ಪುಟ.೪೯; ೧೯೬೪

೯. ಅದೇ, ಪುಟ.೫೦; ೧೯೬೪

೧೦. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿ ಲಿಪಿಕಾರರು, ಪ್ರಶಸ್ತಿಗಳು: ಪುಟ.೧೬; ೧೯೯೩

೧೧. ಅದೇ, ಪುಟ.೧೬; ೧೯೯೩

೧೨. ಅದೇ, ಪುಟ.೧೬; ೧೯೯೩

೧೩. ವೀರೇಶ ಬಡಿಗೇರ, ಹಲಗೆ ಬಳಪ: ಪುಟ.೬೨; ೨೦೦೫

೧೪. ಅದೇ, ಪುಟ.೬೩; ೨೦೦೫

೧೫. ಅದೇ, ಪುಟ.೬೩, ೬೪; ೨೦೦೫

೧೬. ಅದೇ, ಪುಟ.೬೪; ೨೦೦೫

೧೭. ಅದೇ, ಪುಟ.೬೬; ೨೦೦೫

೧೮. ಅದೇ, ಪುಟ.೩೩, ೩೪; ೨೦೦೫

೧೯. ಅದೇ, ಪುಟ.೮೨; ೨೦೦೫

೨೦. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿ ಲಿಪಿಕಾರರು, ಪ್ರಶಸ್ತಿಗಳು; ಪುಟ.೧೮; ೧೯೯೩

೨೧. ಅದೇ, ಪುಟ.೧೮; ೧೯೯೩

೨೨. ಅದೇ, ಪುಟ.೧೮; ೧೯೯೩

೨೩. ಅದೇ, ಪುಟ.೧೮; ೧೯೯೩

೨೪. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿ ಲಿಪಿಕಾರರು, ಪ್ರಶಸ್ತಿಗಳು: ಪುಟ.೪; ೧೯೯೩

೨೫. ಅದೇ, ಪುಟ.೪; ೧೯೯೩

೨೬. ಅದೇ, ಪುಟ.೪; ೧೯೯೩

೨೭. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿ ಲಿಪಿಕಾರರು, ಪ್ರಶಸ್ತಿಗಳು: ಪುಟ.೭; ೧೯೯೩

೨೮. ಅದೇ, ಪುಟ.೭; ೧೯೯೩

೨೯. ಅದೇ, ಪುಟ.೭; ೧೯೯೩

೩೦. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ: ಪುಟ.೪೮; ೧೯೯೩

೩೧. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿ ಶಾಸ್ತ್ರಗಳು: ಒಂದು ಅಧ್ಯಯನ: ಪುಟ.೧೪೧; ೧೯೯೨

೩೨. ಅದೇ, ಪುಟ.೧೪೧; ೧೯೯೨

೩೩. ಅದೇ, ಪುಟ.೧೪೧; ೧೯೯೨

೩೪. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ: ಪುಟ.೪೭; ೧೯೯೩

೩೫. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಶಾಸ್ತ್ರಗಳು: ಒಂದು ಅಧ್ಯಯನ: ಪುಟ.೧೪೨; ೧೯೯೨

೩೬. ಅದೇ, ಪುಟ.೧೪೨; ೧೯೯೨

೩೭. ಅದೇ, ಪುಟ.೧೪೨; ೧೯೯೨

೩೮. ಅದೇ, ಪುಟ.೧೪೨; ೧೯೯೨

೩೯. ಎಂ.ಎಂ.ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ; ಪುಟ.೫೦; ೧೯೯೩

೪೦. ಅದೇ, ಪುಟ.೫೦; ೧೯೯೩

೪೧. ಎಸ್.ಶಿವಣ್ಣ, ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು: ಪುಟ.೯, ೧೦; ೧೯೯೪

೪೨. ಅದೇ, ಪುಟ.೮; ೧೯೯೪



## ಅಧ್ಯಾಯ ನಾಲ್ಕು

# ಸಂರಕ್ಷಣೆಯ ಧಾರ್ಮಿಕ ನೆಲೆಗಳು

೪.೧. ಜೈನಧರ್ಮ
೪.೨. ವೀರಶೈವ ಧರ್ಮ
೪.೩. ವೈದಿಕ ಧರ್ಮ
೪.೪. ಲಿಪೀಕರಣ ಹಾಗೂ ಅನ್ಯಮತ ದ್ವೇಷ

ಪ್ರಾಚೀನ ಹಾಗೂ ಮಧ್ಯಕಾಲೀನ ಸಂದರ್ಭಗಳಲ್ಲಿ ಗ್ರಂಥ ರಚನೆ, ಸಂರಕ್ಷಣೆ ಹಾಗೂ ಪ್ರಸಾರ ಕಾರ್ಯವು ಹೆಚ್ಚು ಧಾರ್ಮಿಕವಾಗಿತ್ತು. ಈ ಪರಂಪರೆ ಆಧುನಿಕ ಸಂದರ್ಭದಲ್ಲಿ ಮುಂದುವರಿಯಿತು. ಪ್ರತಿ ಧರ್ಮ ಹಾಗೂ ಪಂಥಗಳು ತನ್ನ ಧರ್ಮದ ತತ್ವ ಸಿದ್ಧಾಂತಗಳನ್ನು ಆಚರಣೆಯ ವಿಚಾರಧಾರೆಗಳನ್ನು ತಮ್ಮ ಕೃತಿಯಲ್ಲಿ ಅಳವಡಿಸಿಕೊಂಡು ಸಂಗ್ರಹಿಸುವ, ಸಂರಚಿಸುವ ಕೆಲಸ ಮಾಡುತ್ತ ಬಂದಿವೆ. ಆ ಮೂಲಕ

೧) ಸ್ವಧರ್ಮದ ತತ್ವ ಸಿದ್ಧಾಂತಗಳನ್ನು ಸಮರ್ಥಿಸುವುದು.

೨) ಅನ್ಯಧರ್ಮದ ಜೊತೆಗೆ ಸಂಘರ್ಷಗೊಳಿಸುವ ಅನ್ಯಧರ್ಮದ ವಿಡಂಬಣೆ ಮಾಡುವುದು. ಪ್ರಮುಖವಾಗಿ ಕಂಡುಬರುತ್ತದೆ.

ಧರ್ಮವು ಪ್ರಾಚೀನ ಗ್ರಂಥಗಳ ಸಂಗ್ರಹ, ಸಂರಕ್ಷಣೆ, ಸಂವರ್ಧನೆ ಜೊತೆಗೆ ಕನ್ನಡ ಸಂಸ್ಕೃತಿಯ ಜ್ಞಾನ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಉದಾ: ಮಠ-ಮಾನ್ಯಗಳು, ಜೈನ ಬಸದಿಗಳು, ಚೈತ್ಯಾಲಯಗಳು, ಅಗ್ರಹಾರಗಳು, ಚರ್ಚು, ಮಸೀದಿ ಹಾಗೂ ಗುರುದ್ವಾರಗಳು ಗ್ರಂಥಗಳನ್ನು ಬರೆಸಿ, ಸಂರಕ್ಷಿಸಿ, ಅಧ್ಯಯನಿಸಿ ಧರ್ಮದ ತತ್ವ ಸಿದ್ಧಾಂತಗಳು ಉಳಿಸುವಲ್ಲಿ ಬೆಳೆಸುವಲ್ಲಿ ಪ್ರಧಾನಪಾತ್ರವಹಿಸಿದ್ದು ಕಂಡುಬರುತ್ತದೆ. ಧರ್ಮವನ್ನು ಕಾಪಾಡುವದು ಇಂಥ ಧಾರ್ಮಿಕ ವ್ಯಕ್ತಿ ಹಾಗೂ ಸಂಸ್ಥೆಗಳು ಗುರಿಯಾದಂತೆ ಧಾರ್ಮಿಕ ಗ್ರಂಥಗಳ ಸಂಗ್ರಹ, ಸಂರಕ್ಷಣೆ, ಸಂವರ್ಧನೆ, ಪುನರುತ್ಪಾದನೆ ಹಾಗೂ ಪ್ರಸಾರ ಕಾರ್ಯವನ್ನು ನಿಷ್ಠೆಯಿಂದ ಮಾಡುತ್ತ ಬಂದಿವೆ.

ಧರ್ಮ ಧರ್ಮಗಳ ನಡುವಿನ ಸಂಘರ್ಷದ ಜೊತೆಗೆ ತನ್ನ ಧರ್ಮದ ಅಸ್ತಿತ್ವವನ್ನು ಅನನ್ಯತೆಯನ್ನು ಕಾಪಾಡಿಕೊಳ್ಳುವ ತನ್ನದೇ ಆದ ಆಚಾರ-ವಿಚಾರ ಚಿಂತನ ಮಂಥನದ ನಡುವೆ ಇನ್ನೊಂದು ಧರ್ಮದ ದಮನಕಾರಿ ನೀತಿಯಿಂದ ತನ್ನನ್ನು ತಾನು ರಕ್ಷಿಸಿಕೊಳ್ಳುವ ಪ್ರಕ್ರಿಯೆ ಕಾಲದಿಂದ ಕಾಲಕ್ಕೆ ಸಾಗುತ್ತಾ ಬಂದಿದೆ. ಪ್ರಕೃತಿಯಲ್ಲಿ ಪ್ರತಿಯೊಂದು ಜೀವಿಗಳು ತನ್ನನ್ನು ತಾನು ರಕ್ಷಿಸಿಕೊಳ್ಳುವ ಮನೋಧರ್ಮವನ್ನು ಹೊಂದುವುದರ ಜೊತೆಗೆ ವಿಕಾಸವಾದದ ತತ್ವ ಸಿದ್ಧಾಂತವನ್ನು ತನ್ನೊಳಗೆ ರೂಪಿಸಿಕೊಂಡಿವೆ.

ನಮ್ಮ ಧರ್ಮ ಹಿರಿದು ಎನ್ನುವವರು ತಮ್ಮ ಧರ್ಮದ ಉತ್ತಮ ಭಾಗವನ್ನು ಇತರ ಧರ್ಮದ ನಿಕೃಷ್ಟ ಭಾಗಗಳನ್ನು ತೆಗೆದುಕೊಳ್ಳುತ್ತಾರೆ. ಧರ್ಮವೆಂಬ ಹೆಸರು ಒಪ್ಪುವ ಎಲ್ಲ ಮತಧರ್ಮದಲ್ಲಿಯೂ ಉತ್ತಮವಾದ ನೀತಿಬೋಧೆ ಮತ್ತು ತತ್ವ ಸಿದ್ಧಾಂತಗಳಿವೆ. ಅದನ್ನು ಅನುಸರಿಸುವ ಜನರಲ್ಲಿ ಉತ್ತಮ ಜೀವನವೂ ಇದೆ. ನಿಕೃಷ್ಟ ಆಚಾರವೂ ಇದೆ. ಸಕಾರಾತ್ಮಕ ದೃಷ್ಟಿಯಿಂದ ನೋಡುವವನಿಗೆ ಆಯಾ ಮತಧರ್ಮದ ಉನ್ನತ ಭಾಗವೇ ಮುಖ್ಯವೆಂದು ಕಾಣುವದು.

ಧರ್ಮವೆಂಬುದು ಪ್ರಶ್ನಾತೀತವಾದ ಪವಿತ್ರಲೋಕ ಎಂಬುದರ ಜೊತೆಗೆ ಅದೊಂದು ಆಫೀಮು ಅದನ್ನೊಂದು ತಟಸ್ಥ ಗ್ರಹಿಕೆಯನ್ನಾಗಿ ನೋಡುವ ಸಂದರ್ಭಗಳು ಚಾಲ್ತಿಯಲ್ಲಿವೆ. ಧರ್ಮಬೀರುಗ್ರಹಿಕೆ ಮನುಷ್ಯನಲ್ಲಿನ ಸೃಜನಾತ್ಮಕ ಮತ್ತು ಪ್ರತಿರೋಧದ ಶಕ್ತಿಯನ್ನು ಬೆಳೆಸುತ್ತದೆ. ಚರಿತ್ರೆಯಲ್ಲಿ ನಡೆದಿರುವ ಯುದ್ಧ ರಕ್ತಪಾತಗಳಂತಹ ಘಟನೆಗಳಿಗೆ ಈ ಮತಧರ್ಮಗಳೇ ಕಾರಣವಾಗಿದ್ದನ್ನು ಕಾಣುತ್ತೇವೆ. ಬದಲಾಗುತ್ತಿರುವ ಸಮಕಾಲೀನ ಸಂದರ್ಭದಲ್ಲಿ ಧರ್ಮವನ್ನು ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅನುಸಂಧಾನಕ್ಕೊಳಪಡಿಸುವುದು ಎಷ್ಟು ಸೂಕ್ತ ಎಂಬ ಮನೋಭಾವನೆ ಹುಟ್ಟಿಕೊಳ್ಳುತ್ತದೆ.

"ದ್ರಾವಿಡ ಭಾಷೆಯಿಂದ ಬೇರ್ಪಟ್ಟ ಕನ್ನಡ ಸುಮಾರು ಕ್ರಿಶ. ೨,೩ ನೆಯ ಶತಮಾನದ ಹೊತ್ತಿಗೆ ಕನ್ನಡ ಸಾಹಿತ್ಯವು ಜೈನ, ಬೌದ್ಧ ಧರ್ಮಗಳು ಕನ್ನಡದಲ್ಲಿ ಧಾರ್ಮಿಕ ಸಾಹಿತ್ಯದ ಸೃಷ್ಟಿಗೈಯುವ ತನ್ನ ಧರ್ಮ ತತ್ವ ಸಿದ್ಧಾಂತಗಳನ್ನು ಕೃತಿಗಳಲ್ಲಿ ಚಿತ್ರಿಸಿದ್ದಾರೆ. ನಂತರದ ಕಾಲದಲ್ಲಿ ಶೈವ, ವೈದಿಕ ಧರ್ಮಗಳು ತಮ್ಮ ಕೃತಿಗಳಲ್ಲಿ ತಮ್ಮ ಧರ್ಮಸಿದ್ಧಾಂತಗಳನ್ನು ಬಿಂಬಿಸುವ ಅಂಶಗಳೂ ಒಳಗೊಂಡಿವೆ. ಲೌಕಿಕ ಸಾಹಿತ್ಯ ಶಿಕ್ಷಣ ಪ್ರಸಾರಕ್ಕಾಗಿ ಹಸ್ತಪ್ರತಿಗಳ ಅಗತ್ಯವನ್ನು ಆಗಲೇ ಕಂಡುಕೊಂಡಿದ್ದ ಕನ್ನಡಿಗರಿಗೆ ಜೈನ-ಬೌದ್ಧ ಧರ್ಮಗಳು ಹಸ್ತಪ್ರತಿಗಳ ಧಾರ್ಮಿಕ ಮಹತ್ವವನ್ನು ಮನವರಿಕೆ ಮಾಡಿಕೊಟ್ಟಂತಿವೆ".[೧]

ಅಗ್ರಹಾರಗಳು, ಮಠ-ಮಾನ್ಯಗಳು, ಜಿನಾಲಯದಲ್ಲಿ ಮುನಿಗಳು ಸ್ವಾಮಿಗಳು ಅಧಿಕಾರವಹಿಸಿಕೊಳ್ಳುವಾಗ ಜ್ಞಾನದ ಸಂರಕ್ಷಣೆಯ ಹೊಣೆಯನ್ನು ಅವರಿಗೆ ವಹಿಸಲಾಗುತ್ತಿತ್ತು. ಆ ಧರ್ಮದ ಕೃತಿಗಳನ್ನು ಅವರ ಕೈಯಲ್ಲಿ ಕೊಡುವ ಮೂಲಕ ಅವರಿಗೆ ಜ್ಞಾನದ ಸಂಗ್ರಹ, ಸಂರಕ್ಷಣೆ ಸಂವರ್ಧನೆ ಹಾಗೂ ಪ್ರಸಾರದ ಹೊಣೆಯನ್ನು ಹೊರಿಸಲಾಗುತ್ತಿತ್ತು. ವೀರಶೈವ ಧರ್ಮದಲ್ಲಿ ಸ್ವಾಮಿಗಳು ಅಧಿಕಾರವಹಿಸಿಕೊಳ್ಳುವಾಗ ಅವರ ಕೈಯಲ್ಲಿ ವೀರಶೈವ ತತ್ವ ಸಿದ್ಧಾಂತಗಳಾದ ಪಂಚಾಚಾರ ಷಟ್ಸ್ಥಲ ವಿಚಾರಗಳನ್ನು ಒಳಗೊಂಡ ಹಸ್ತಪ್ರತಿಗಳ ಕಟ್ಟನ್ನು ನೀಡಲಾಗುತ್ತಿತ್ತು. ಸಾಮಾಜಿಕ ಹಾಗೂ ಸಾಹಿತ್ಯಿಕ ಕಳಕಳಿಯ ಮೂಲಕ ಆ ಕೃತಿಗಳನ್ನು ಪೋಷಿಸುವದು ಅವರ ಕರ್ತವ್ಯವಾಗಿತ್ತು. ಸಾಮಾಜಿಕ ಧಾರ್ಮಿಕ ಭದ್ರತೆಯ ಹೊಣೆಯನ್ನು ತನ್ನ ಅಧಿಕಾರ ಸ್ವೀಕರಣ ಸಮಯದಲ್ಲಿ ವಹಿಸಿಕೊಂಡು ತನ್ನ ಧರ್ಮದ ಕೃತಿಗಳ ಪಾಲನೆ-ಪೋಷಣೆ, ಸಂರಕ್ಷಣೆ ಸಂವರ್ಧನೆ ಸಂಗೋಪನೆಯನ್ನು ಮಾಡುವುದು ಮಠಾಧೀಶರ ಮುಖ್ಯ ಕರ್ತವ್ಯ. ಸ್ವಧರ್ಮ ಸಾಹಿತ್ಯ ಕುರಿತ ಅತಿಯಾದ ಭಾವನೆ ಒಮ್ಮೊಮ್ಮೆ ಅನ್ಯ ಧರ್ಮದ ಕೃತಿಗಳ ವಿನಾಶಕ್ಕೂ ಕಾರಣವಾದದ್ದಿದೆ.

ಮಠಾಧೀಶರಿಗೆ ಹಸ್ತಪ್ರತಿಯ ಕಟ್ಟುಗಳನ್ನು ನೀಡುವುದರ ಹಿಂದೆ ಆ ಧರ್ಮದ ತತ್ವ ಸಿದ್ಧಾಂತಗಳನ್ನು ಒಳಗೊಂಡ ಗ್ರಂಥಗಳ ಸಂರಕ್ಷಣೆ ಹೊಣೆ ಮಾತ್ರವಲ್ಲದೆ ಧಾರ್ಮಿಕ ಹಾಗೂ ಸಾಮಾಜಿಕ ಸಂಗತಿಗಳನ್ನು

ಸಂರಕ್ಷಿಸುವ ಮನೋಭಾವನೆಯನ್ನು ಇಲ್ಲಿ ಕಾಣಬಹುದಾಗಿದೆ. ಇತರೆ ಧರ್ಮದ ಪ್ರಭಾವ ಅಥವಾ ಅತಿ ಬಳಕೆಯಿಂದ ವಿನಾಶದ ಅಂಚಿನಲ್ಲಿರುವ ಗ್ರಂಥಗಳನ್ನು ಇಂಥ ನೆಲೆಯಲ್ಲಿ ಸಂರಕ್ಷಿಸುತ್ತಾ ಬರಲಾಗಿದೆ.

ಧರ್ಮ ಮತ್ತು ಕಾವ್ಯ ಧರ್ಮಗಳು ಒಡನೊಡನೆ ಬೆರೆತು ಹರಿದಿರುವುದು ನಮ್ಮ ಸಾಹಿತ್ಯದ ವೈಶಿಷ್ಟ್ಯ ಪಂಪಕವಿ "ಬೆಳಗುವೆನಿಲ್ಲ ಲೌಕಿಕಂ ಅಲ್ಲಿ ಜಿನಾಗಮಂ" ಎಂದು ಹೇಳಿದ ಮಾತನ್ನು ಮುಂದೆ ಬಂದ ರನ್ನ ಪೊನ್ನ ಜನ್ನರಂತವರು ಪಾಲಿಸಿಕೊಂಡು ಬಂದರು. ಕೆಲವು ಮತದವರು ತಮ್ಮ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ಸಲುವಾಗಿ ಬೇರೆ ಬೇರೆ ಪುರಾಣಗಳಿಂದ ಸಂಬಂಧಪಟ್ಟ ಭಾಗಗಳನ್ನು ಆರಿಸಿಕೊಂಡು ಗ್ರಂಥ ರಚನೆ ಮಾಡಿರುವುದನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸಬಹುದು. ಅವು ಧಾರ್ಮಿಕಾಂಶ ಮತ್ತು ಕಾವ್ಯಾಂಶವೂಗಳೆರಡರಿಂದಲೂ ಶೋಭಿಸಿವೆ. ಧಾರ್ಮಿಕ ಗ್ರಂಥಗಳಲ್ಲಿ ಕಾವ್ಯಾಂಶವೂ ಕಾವ್ಯಗಳಲ್ಲಿ ಧಾರ್ಮಿಕಾಂಶವೂ ಬೆರೆತು ಕನ್ನಡ ಕಾವ್ಯ ಕೃಷಿ ಸಾಗಿದೆ.

### ೪.೧. ಜೈನಧರ್ಮ

ಹಸ್ತಪ್ರತಿಗಳ ರಚನೆ, ಪೋಷಣೆ ಹಾಗೂ ಪ್ರಸರಣಗಳನ್ನು ಜೈನರು ಗಂಭೀರ ಧಾರ್ಮಿಕ ಕಾರ್ಯವನ್ನಾಗಿ ಮಾಡಿಕೊಂಡಿದ್ದರು. ಚತುರ್ವಿದ ದಾನಗಳಲ್ಲಿ ಒಂದಾದ ಶಾಸ್ತ್ರದಾನ ಅವರ ಉಜ್ವಲ ಪರಂಪರೆಯ ಪ್ರತೀಕವಾಗಿದೆ. ಶಾಸ್ತ್ರದಾನ ಚಟುವಟಿಕೆ ಕವಿಗಳ ಪ್ರತಿಭೆಗೆ, ಶಾಸ್ತ್ರಕಾರರ ವಿದ್ವತ್ತಿಗೆ, ದೊರೆ ಧರ್ಮದರ್ಶಿಶ್ರಾವಕಾದಿಗಳ ಶ್ರದ್ಧೆಗೆ ಎಲ್ಲಕ್ಕೂ ಮಿಗಿಲಾದ ಅವಕಾಶಗಳನ್ನಿಯುತ್ತ ಬಂದಿದೆ.

ಪರಮಾಗಮದಿಂದಲ್ಲದೆ
ಪರತ್ರೆಯಂ ಪಡೆವುಪಾಯಮಿಲ್ಲದಯಿಂದು
ವರಶಾಸ್ತ್ರಂ ಮಿಗಿಲೆಂದಾ
ದರದಿಂ ಮಾಡುವುದು ಶಾಸ್ತ್ರದಾನಮನಳಿಪಿ
ಶ್ರುತವನಿತೆಯ ಮುಕ್ತಿ ಶ್ರೀ
ಸತಿಯಲ್ಲಿಗೆ ಬೇಗಮುಯ್ವ ದೂದವಿಯೆಂಬೀ
ಮತಮನಮಿದೋತು ಮಾಡುವು
ದತಿಯಶದಿಂ ಶಾಸ್ತ್ರದಾನಮಂ ಪದಪಿಂದಂ[೨]

ಇನ್ನೂ ಮುಂದುವರೆದು 'ಕ್ಷತ್ರಿಯಂ ಕೈವಲ್ಯಶ್ರೀ ಸಲೆ ಸಾರ್ಗುಂ ಶಾಸ್ತ್ರದಾನದುನ್ನತಿ ಕಿಂದೇ' ಎಂದು ಶಾಸ್ತ್ರದಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಇನ್ನೂ ಹಲವಾರು ಹಸ್ತಪ್ರತಿಗಳಲ್ಲಿ ಕಾಣಬಹುದು.

ದಾನ, ಧರ್ಮ, ಉಡುಗೊರೆ ಇವುಗಳ ಹೆಚ್ಚು ಉಲ್ಲೇಖ ಕಂಡುಬರುವುದು ಮಧ್ಯಕಾಲೀನ ಭಾರತ ಚರಿತ್ರೆಯಲ್ಲಿ ಮಧ್ಯಯುಗೀನ ಕರ್ನಾಟಕದಲ್ಲಿ ಯಾವುದೇ ರೀತಿಯ ಲೌಕಿಕಾಧಿಕಾರದ ವರ್ಚಸ್ಸು ದಾನದತ್ತಿಗಳ ಆಧಾರದ ಮೇಲೆ ನಿಂತಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಧಾರ್ಮಿಕ ದಾನದತ್ತಿ ಉಂಬಳಿ ಇದಕ್ಕೆ ಈ ಕಾಲದ ಹಲವಾರು ಕೃತಿಗಳು ಮತ್ತು ಶಾಸನಗಳು ಪುಷ್ಟಿ ನೀಡುತ್ತವೆ. ದಾನದತ್ತಿ ಎಂಬೆರಡು ಸಂಗತಿಗಳು ಅಧಿಕಾರದ ವರ್ಚಸ್ಸಿಗೆ, ಸಾಮಾಜಿಕ ಕಳಂಕದ ಶುದ್ಧಿಗೆ, ಆಧ್ಯಾತ್ಮಿಕವಾಗಿ ತ್ಯಾಗ ಮಾರ್ಗದ

ಧಾರ್ಮಿಕ ನೆಲೆಯಿಂದ ಹಸ್ತಪ್ರತಿ ಗ್ರಂಥಗಳು ಸಂರಕ್ಷಣೆಗೊಂಡವು. ಹಿರಿಯರ ಮರಣಾನಂತರದಲ್ಲಿ ಅವರ ನೆನಪಿನಲ್ಲಿ ಧಾರ್ಮಿಕ ಕಾವ್ಯಗಳ ರಚನೆಗೆ ಪ್ರೇರಕವಾಗುವುದು ಪುಣ್ಯಕಾರ್ಯವೆಂದು ಜೈನರು ಭಾವಿಸಿದ್ದರು.

ಗುರು ಜಿನಚಂದ್ರ ಮುನೀಂದ್ರರ
ಪರೋಕ್ಷದೊಳ್ ತಂಮುತಿರ್ವರುಂ ಪೊನ್ನಿಗನಿಂ
ಬರೆಯಿಸಿದರ್ ಸಕಲೋರ್ವಿಗೆ
ಪರೆಯಿಸಿದರ್ ಸಲೆ ಪುರಾಣ ಚೂಡಾಮಣಿಯಂ॥[೩]

ಎಂದು ಹೇಳುವ ರನ್ನನು ಅತ್ತಿಮಬ್ಬೆಯೂ ಕೂಡ ತನ್ನಿಂದ ಅಜಿತಪುರಾಣವನ್ನು ಬರೆಯಿಸಿದಳೆನ್ನುತ್ತಾನೆ.

ಎಸೆಯದೆ ಪೂಮ್ಡಿಕೆಟ್ಟುವುದು ಶಾಂತಿ ಪುರಾಣಮದಂ ನೆಗಮ್ಚಿವೆಂ!
ಮಸುಧೆಯೊಳೆನ್ನ ತಂದೆಯ ಪರೋಕ್ಷದೊಳೆಂದು ಸಹಸ್ರ ಪುಸ್ತಕ
ಪ್ರಸರಮನತ್ತಮಬ್ಬೆ ಪರಮಾದರದಿಂ ಬರೆಯಲ್ಕೆವೇಬ್ದಿ ಪೆಂ
ಪಸದಳವುದ್ವಿತೀಯಮಸಮಂ ಸತಿ ಭಾವಿಸಲೆಯ್ದೆ ಬಣ್ಣಿಸಲ್[೪]

ಈ ಪದ್ಯದಲ್ಲಿ ತಂದೆಯ ಪರೋಕ್ಷ (ಮರಣಾನಂತರ) ದಲ್ಲಿಯೆ ಶಾಂತಿ ಪುರಾಣದ ಒಂದು ಸಾವಿರ ಪ್ರತಿಗಳನ್ನು ಅತ್ತಿಮಬ್ಬೆ ಬರೆಯಿಸಿದಳೆಂಬುದು ತಿಳಿದುಬರುತ್ತದೆ. ಓದಲು ಶಾಸ್ತ್ರಮನೀನ ಪೆಂಪನ್ನು ಒಳಗೊಂಡ ಚತುರ್ವಿದ ಧಾನಶಕ್ತಿಯನ್ನು ಹರಿಯವ್ವೆ ಮೆರೆದಳೆಂದು ಮೂಡಿಗೆರೆಯ ಶಾಸನ ವರ್ಣಿಸಿದೆ. ಹೊಯ್ಸಳ ವಿಷ್ಣುವರ್ಧನನ ಹಿರಿಯ ಸೇನಾಪತಿಯಾಗಿದ್ದ ಗಂಗರಾಜನನ್ನು ಶ್ರೀ ಜೈನಧರ್ಮಮೃತಾಂಬುಧಿ ಪ್ರವರ್ಧಮಾನ ಸುಧಾಕರ, ಸಮತ್ವ ರತ್ನಾಕರ, ಆಹಾರ ಅಭಯ ಭೈಷಜ್ಯಶಾಸ್ತ್ರದಾನ ವಿನೋದಿ ಎಂದು ಬಣ್ಣಿಸಲಾಗಿದೆ.

ಜೈನ, ಶೈವ,ವೀರಶೈವ, ವೈಷ್ಣವ ಮುಂತಾದ ಪ್ರಮುಖ ಧರ್ಮಗಳು ಕರ್ನಾಟಕದಲ್ಲಿ ವ್ಯಾಪಕವಾಗಿ ಪಸರಿಸಿ ಸಾಂಸ್ಕೃತಿಕವಾದ ಪರಂಪರೆಗೆ ಜೀವ ನೀಡಿವೆ. ಅಲ್ಲದೇ ಕನ್ನಡ ಸಾಹಿತ್ಯ – ಕನ್ನಡ ಹಸ್ತಪ್ರತಿಗಳ ಹುಲುಸಿಗೂ ಕಾರಣವಾಗಿವೆ. ಈ ಧರ್ಮಗಳು ತತ್ವ ಪ್ರಚಾರ, ಸ್ವಧರ್ಮನಿಷ್ಠೆ ಮತ್ತು ಅದರ ಸಮರ್ಥನೆ, ಶಿಕ್ಷಣ ಪ್ರಸಾರ ಹಾಗೂ ಸಾಹಿತ್ಯ ಪ್ರಸಾರಾದಿ ಕಾರ್ಯಗಳಿಗೆ ಹಸ್ತಪ್ರತಿಗಳ ಅಗತ್ಯವನ್ನು ಕಾಲಾಂತರದಲ್ಲಿ ಕಂಡುಕೊಂಡಿರಬಹುದು. ಲೌಕಿಕ ಸಾಹಿತ್ಯ, ಶಿಕ್ಷಣ ಪ್ರಸಾರಕ್ಕಾಗಿ ಹಸ್ತಪ್ರತಿಗಳ ಅಗತ್ಯವನ್ನು ಆಗಲೇ ಕಂಡುಕೊಂಡಿದ್ದ ಕನ್ನಡಿಗರಿಗೆ ಜೈನ – ಬೌದ್ಧ ಧರ್ಮಗಳು ಹಸ್ತಪ್ರತಿಗಳ ಧಾರ್ಮಿಕ ಮಹತ್ವವನ್ನು ಮನವರಿಕೆ ಮಾಡಿಕೊಟ್ಟಂತಿದೆ. ಹೀಗಾಗಿ ಹಸ್ತಪ್ರತಿಗಳನ್ನು ದೈವಿಕತೆಯ ನೆಲೆಯಲ್ಲಿ ದೈವಿಸ್ವರೂಪದಲ್ಲಿ ಸರಸ್ವತಿಯ ಪ್ರತಿರೂಪವಾಗಿ ಸಂರಕ್ಷಿಸಲಾಗುತ್ತಿತ್ತು.

.......... .......... .......... ..........
ಮೆಮಿವ ಪೆಗೊಂಡೆಯ ಸುಶಾಂತೀ
ಶ್ವರನ ಜಿನವಾಸದಲಿ ಜೀವಂ
ಧರನ ಚರಿತೆಯ ರಚಿಸಿದನು ಜಾಣ್ಮೆಯಲಿ ಬಾಸ್ಕರನು[೫]

ಕವಿ ಭಾಸ್ಕರನು ಜೀವಂಧರ ಚರಿತ್ರೆಯನ್ನು ಬಸದಿಯಲ್ಲಿಯೇ ರಚಿಸಿದ್ದನು ಎಂಬುದು ಈ ಪದ್ಯಭಾಗದಿಂದ ತಿಳಿಯುತ್ತದೆ. ಅಲ್ಲದೇ ಶಾಂತಕೀರ್ತಿ ಮುನಿಯ 'ಚತುರ್ವಿಂಶತಿ ತಿರ್ಥಂಕರ ಕಿರಿದಾದ ಪಂಚಕಲ್ಯಾಣ' ಎಂಬ ಸಾಂಗತ್ಯ ಕೃತಿಯು ರಚನೆಗೊಂಡುದು ಜಿನಾಲಯದಲ್ಲಿಯೇ ಎಂದು ಹೇಳಿದ್ದಾನೆ.

ವರ ಮಾರ್ಗ್ಗಶಿರ ಶುದ್ಧ ಚತುರ್ದಸಿ ಗುರುವಾರ
ನಿರುಪಮ ತುಳುವ ದೇಶದೊಳು
ವರವೇಣುಪುರದಾದಿನಾಥ ಸಂನಿಧಿಯೊಳು
ಪರಿಪೂರ್ಣವಾಯ್ತೀ ಕೃತಿಯು[೬]

ಜೈನ ಬಸದಿಗಳು ಕೇವಲ ಪೂಜಾ ವಿಧಾನಕ್ಕೆ ಮಾತ್ರ ಸೀಮಿತವಾಗಿರದೇ ಅವು ಹಸ್ತಪ್ರತಿಗಳ ರಚನೆ ಮತ್ತು ಹಸ್ತಪ್ರತಿಗಳ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿದ್ದವು. "ಮೂಲತ: ಜೈನ ಮುನಿಗಳಿಗೆ ಆಶ್ರಯಗಳಾಗಿ, ಚಾತುರ್ಮಾಸಗಳ ವಸತಿಗಾಗಿ ನಿರ್ಮಿತವಾದ ಈ ಬಸದಿಗಳು ಮುಂದೆ ಧರ್ಮೀಯರ ಅಧ್ಯಯನ, ಅಧ್ಯಾಪನ, ವಾಚನ, ಲೇಖನ ಮತ್ತು ಧರ್ಮ ಶ್ರವಣಾದಿಗಳ ನೆಲೆಯಾಗಿ ರೂಪುಗೊಂಡು ಜೈನಧರ್ಮವನ್ನು ಸಂರಕ್ಷಿಸಿದ್ದವು.

ದೋರ ಸಮುದ್ರದೊಳ್ ವುಜಯಪಾರ್ಶ್ವಜಿನೇಶ್ವರ ದಿವ್ಯಮಂದಿರ
ದ್ವಾರದ ಮುಂತೆ ಮಾಡಿಸಿದ ಶಾಂತಿ ಜಿನಾಲಯದೊಳಗಿನ ಮೇರು ಮಂ
ದಾರದ ಕೊಂಬನರ್ಥಿಯನಲುಂಬಿದಮೋಲ್ ಕವಿಭಾಳಲೋಚನಂ
ಧಾರಣೆಗಿಂತು ಮಾಡಿದನನಂತ ಪುರಾಣದ ಸುಪ್ರತಿಷ್ಠೆಯಂ॥[೭]

ಹೊಸ ಹಸ್ತಪ್ರತಿಗಳನ್ನು ವೈಭವಪೂರ್ಣವಾಗಿ ಉತ್ಸವಿಸುತ್ತ ತಂದು ಜಿನಮಂದಿತದಲ್ಲಿ ಪ್ರವಚಿಸಿದರೆ ಅದು ಕೂಡ ಪುಣ್ಯಕಾರಕವಾದ ಕಾರ್ಯವೆಂದು ಪರಿಗಣಿತವಾಗುತ್ತಿತ್ತು. ಅನಂತನಾಥ ಪುರಾಣದ ಹಸ್ತಪ್ರತಿಯು ಸಿದ್ದಗೊಂಡ ಮೇಲೆ ಅದನ್ನು ತಂದು ಪ್ರತಿಷ್ಠಾಪಿಸಿದ ಸಂಗತಿಯನ್ನು ಕವಿ ಜನ್ನ ಹೇಳುತ್ತಾನೆ.

ವಸಗೆವರೆ ಛತ್ರಚಾಮರ
ಶಶಿಮುಖಿಯರು ಪಾಡಿ ಕಳಶಕಂನಡಿ ಸಹಿತಂ
ಹೊಸಕೃತಿಯನೊಯ್ದು ಪುಣ್ಯಮದಕ್ಕುಂ[೮]

ಎಂದು ಬ್ರಹ್ಮಕವಿಯು ತನ್ನ ವಜ್ರಕುಮಾರ ಚರಿತೆಯಲ್ಲಿ ಹೇಳಿದ್ದಾನೆ.

ಹೀಗೆ ಜೈನಧರ್ಮವು ತನ್ನ ಧಾರ್ಮಿಕ ತತ್ವಸಿದ್ಧಾಂತಗಳೊಂದಿಗೆ ಹಸ್ತಪ್ರತಿಗಳ ಸಂರಕ್ಷಣೆ, ಸಂವರ್ಧನೆ, ಅಧ್ಯಯನ, ಹಾಗೂ ಪ್ರಸಾರಣೆಗೆ ತನ್ನದೇ ಆದ ಕೊಡುಗೆ ನೀಡಿದ್ದು ಗಮನಾರ್ಹ. ವಿಶೇಷವಾಗಿ ಜೈನ ಸನ್ಯಾಸಿಗಳು, ಕಂತಿಯರು ಇಂಥ ಲಿಪೀಕರಣ ಕೆಲಸದಲ್ಲಿ ತನ್ಮಯರಾಗಿರುತ್ತಿದ್ದರು. ಶಾಸ್ತ್ರದಾನ ಎನ್ನುವ ವಿನೂತನ ಪರಿಕಲ್ಪನೆಯನ್ನು ಕನ್ನಡಕ್ಕೆ ನೀಡಿ ಹಸ್ತಪ್ರತಿ ಲಿಪೀಕರಣ, ಸಂಗ್ರಹ, ಸಂರಕ್ಷಣೆ ಹಾಗೂ ಪ್ರಸಾರಕ್ಕೆ ವಿಶಿಷ್ಟ ಸೇವೆ ಗೈದು ಕನ್ನಡ ಭಾಷಾ ಮತ್ತು ಸಾಹಿತ್ಯದ ವಿಸ್ತರಣೆಗೆ ಕಾರಣರಾಗಿದ್ದಾರೆ.

## ೪.೨. ವೀರಶೈವ ಧರ್ಮ

ಪ್ರೌಢದೇವರಾಯ ಸರ್ವಧರ್ಮದ ಸಹಿಷ್ಣುತೆ ಗುಣವನ್ನು ಹೊಂದಿದವನಾಗಿದ್ದನು. ಅವನ ಕಾಲದಲ್ಲಿ ವೀರಶೈವ ಧರ್ಮದ ೧೦೧ ವಿರಕ್ತರಿಗೆ ಆಶ್ರಯ ನೀಡಿ ವೀರಶೈವ ಧರ್ಮದ ಪುನರುತ್ಥಾಣಕ್ಕೆ ಹಂಬಲಿಸಿದನು. ಒಂದು ಧರ್ಮ ತನ್ನ ಉಚ್ಛಾಯ ಕಾಲದಿಂದ ಅವನತಿ ಕಾಲದ ವರೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಹರಸಾಹಸ ಪಡುತ್ತಾ ಬಂದಿರುತ್ತದೆ. ತನ್ನನ್ನು ತಾನು ರಕ್ಷಿಸಿಕೊಳ್ಳಲು ಧರ್ಮಗಳು ಧಾರ್ಮಿಕ ದಮನಕಾರಿ ನೀತಿಯನ್ನು ಅನುಸರಿಸಿರುವ ಸಾಧ್ಯತೆಗಳಿವೆ. ಅವನತಿಯ ಅಂಚಿನಲ್ಲಿರುವ ಒಂದು ಧರ್ಮ ಆ ಧರ್ಮದಿಂದ ಬೇರಪಟ್ಟಿದ್ದು ಕಾಣಬಹುದು. ಉದಾ: ಶೈವ ಧರ್ಮ ನಂತರ ವೀರಶೈವ ಧರ್ಮವಾಗಿ ರೂಪಗೊಂಡದ್ದು.

ಕವಿ/ಲಿಪಿಕಾರರು ಕಾವ್ಯಗಳ ಮೂಲಕ ಧಾರ್ಮಿಕ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. ಶಿವಲೀಲೆಗಳು, ಪುರಾಣಗಳು, ಶತಕಸಾಹಿತ್ಯ, ಶರಣರ ಚರಿತ್ರೆಗಳ ರಚನೆಗಳು ಈ ಹಂತದಲ್ಲಿ ಥಾಳಾಗಿ ನಡೆದಿವೆ. ಪ್ರತಿಭಾವಂತ ಕವಿಗಳು, ಬಹುಭಾಷಾ ಪಂಡಿತರು, ಧರ್ಮಾಭಿಮಾನಿಗಳಾದ ಕವಿಗಳು ಈ ಬಗೆಯ ಕಾವ್ಯ ಸೃಷ್ಟಿ ನಡೆಸಿದ್ದಾರೆ. ವೀರಶೈವ ಧರ್ಮದ ತಾತ್ವಿಕ ವಿವೇಚನೆ ಹಾಗೂ ಪ್ರತಿಪಾದನೆಗಳಿಗೇ ಮಿಸಲಾದ ಸೂಚೀಕರಣ, ಮಿಶ್ರಾರ್ಪಣ, ಕರಣಹಸಿಗೆ ಕೃತಿಗಳು ಹುಟ್ಟಿದವು. ವೇದಾಂತ, ಸಿದ್ಧಾಂತ, ಧಾರ್ಮಿಕ ಜಿಜ್ಞಾಸೆ, ನೀತಿನಿರೂಪಣೆಗಳು ಇರುವ ಕೃತಿಗಳು ಮೂಡಿದವು.

ಪ್ರಭುತ್ವ ಮತ್ತು ಪುರೋಹಿತಶಾಹಿ ವ್ಯವಸ್ಥೆ ಧರ್ಮವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದ್ದಲ್ಲದೆ ಅದನ್ನು ಜನರ ಮನೋಭಿತ್ತಿಯಲ್ಲಿ ಅಳಿಸಿ ಹೋಗದಂತೆ ಖಾಯಂಗೊಳಿಸಿತು. ದೇವರು ಧರ್ಮ ಮತ್ತು ಭಕ್ತಿಯ ಹೆಸರಿನಲ್ಲಿ ಜನರನ್ನು ಸಂಘಟಿಸುವ, ಜನರನ್ನು ಧಾರ್ಮಿಕರನ್ನಾಗಿಸುವ ಮೂಲಕ ಇಂಥ ಸಾಂಸ್ಥಿಕ ಧರ್ಮಗಳು ಆಸ್ತಿಕ ಜನರನ್ನು ತಮಗಿಷ್ಟವಾದ ದೈವದಲ್ಲಿ ಭಕ್ತಿ ತೋರಿಸುವಂತೆ ಒತ್ತಾಯಿಸುತ್ತದೆ. ದೇವರು ಧರ್ಮ ಮತ್ತು ಭಕ್ತಿಗಳ ಹೆಸರಿನಲ್ಲಿ ಸಂಘಟಿಸಿ ಧರ್ಮಕ್ಕೆ ಸಾಂಸ್ಥಿಕರೂಪ ಕೊಡುವುದು ಇಲ್ಲಿ ಮುಖ್ಯ. ಭಾವಸಂವಾದಿಯಾದ ಭಕ್ತಿ-ನಂಬಿಕೆಗಳನ್ನು ಬುದ್ಧಿ ರೂಪಕ್ಕೆ ಪರಿವರ್ತಿಸುವ, ಮನಷ್ಯನ ಮತ್ತು ದೈವದ ನಡುವಿನ ಖಾಸಗಿತನವನ್ನು ಸಾಂಸ್ಥಿಕವಾಗಿಸುವ ಕ್ರಮಗಳನ್ನು ಇಂಥ ಆಚಾರಗಳಲ್ಲಿ ಕಾಣಬಹುದು. ಯಾಕೆಂದರೆ ಇಂಥ ಸಾಂಸ್ಥಿಕ ಧರ್ಮವು ರಾಜಕೀಯ ಶಕ್ತಿಯಿಂದ ಕೂಡಿರುತ್ತದೆ. ರಾಜಕೀಯ ಶಕ್ತಿ ಪ್ರವರ್ಧನೆಗೆ ಇಂಥ ಸಾಂಸ್ಥಿಕ ಧರ್ಮವು ಲಾಭದಾಯಕ ಆಗುತ್ತದೆ. ಈ ಲಾಭಕ್ಕಾಗಿ ಧರ್ಮದ ನೇತಾರರು ಮತ್ತು ಪ್ರಭುತ್ವಶಾಹಿಗಳು ಭಾಷೆ, ಸಂಸ್ಕೃತಿ ಮುಂತಾದ ಜನಪ್ರಿಯ ಮಾದರಿಗಳ ಮೂಲಕ ಧರ್ಮದ ಮೂಲಭೂತವಾದವನ್ನು ಪ್ರಚಾರಮಾಡುತ್ತ ಬಂದಿದ್ದಾರೆ.

ಗ್ರಂಥೋತ್ಪಾದನೆ ಹಾಗೂ ಶಾಸ್ತ್ರದಾನ ಹಸ್ತಪ್ರತಿಗಳ ಉತ್ಪಾದನೆ, ಪೋಷಣೆ ಅಭಿವೃದ್ಧಿ ಕಾರ್ಯಗಳನ್ನು ಸಾಮಾಜಿಕ ಅದಕ್ಕೂ ಮಿಗಿಲಾದ ಧಾರ್ಮಿಕ ಕರ್ತವ್ಯ ಎನ್ನುವಂತೆ ಭಾವಿಸುತ್ತಾ ಬರಲಾಗಿದೆ. ರಾಜನ ಸಪ್ತಸಂತಾನವೆನಿಸಿದ ರಾಜಕಾರ್ಯಗಳಲ್ಲಿ ಗ್ರಂಥೋತ್ಪಾದನೆ ಅಥವಾ ಹಸ್ತಪ್ರತಿಗಳ ನಿರ್ಮಾಣವೂ ಪ್ರಮುಖವಾಗಿತ್ತು. ಲೌಕಿಕದ ನೀಗುಪಿಕೆಗಾಗಿ ಅಥವಾ ಇಷ್ಟಾರ್ಥ ಸಿದ್ಧಿಗಾಗಿ ನಡೆಯುತ್ತಿದ್ದ ಈ

ಪ್ರಕ್ರಿಯೆಯನ್ನು ಗಮನಿಸಿದರೆ ಹಸ್ತಪ್ರತಿಗಳ ರೂಪಿಕೆ ಮತ್ತು ಅವುಗಳ ದಾನದ ಪ್ರಕ್ರಿಯೆಯ ಹಿಂದೆ ಇದ್ದ ಅಲೌಕಿಕತೆಯ ಬಗ್ಗೆ ಪ್ರಶ್ನೆ ಏಳುತ್ತದೆ. ಧರ್ಮದ ಆಶ್ರಯದಲ್ಲಿ ಈ ಪ್ರಕ್ರಿಯೆ ನಡೆದಿದ್ದರೂ ಕೃತಿಗಳಲ್ಲಿ ಅದನ್ನು ಮೀರುವ ಕ್ರಿಯೆ ಇರುವುದು ಗಮನಾರ್ಹ.

ಗ್ರಂಥ ಸಂರಕ್ಷಣೆಯ ದೃಷ್ಟಿಯಿಂದ ಶಾಸ್ತ್ರದಾನದ ಪರಿಕಲ್ಪನೆಯ ಎರಡು ಪ್ರಮುಖ ಪ್ರಸಂಗಗಳನ್ನು ನೋಡಬಹುದು. ಪುರಾಣ ಚರಂತಿಗೆ ಮತ್ತು ವೀರಶೈವ ಮಠಗಳ ಅಧಿಕಾರವಹಿಸಿಕೊಡುವಾಗ ಪ್ರತಿಯೊಬ್ಬ ಉತ್ತರಾಧಿಕಾರಿಗಳ ಮೊದಲ ಕಾಣಿಕೆಯಾಗಿ ಗುರುಗಳಾದವರು ಹಸ್ತಪ್ರತಿಗಳ ಗ್ರಂಥಗಳನ್ನು ನೀಡುವುದರ ಬಗ್ಗೆ ನಿರಂಜನ ವಂಶರತ್ನಾಕರ ಗ್ರಂಥದಲ್ಲಿ ಉಲ್ಲೇಖಗಳಿವೆ.

"ಮಠಸ್ಥರಾದ ಆ ಮೂರ್ತಿಗಳಲ್ಲಿ ಸ್ಥಲಕೂಡಿ ಶಾಸ್ತ್ರ ಸಂಪಾದನೆಯಂ ಮಾಡಿಕೊಂಡ ಗಣವರರು ಈ ಬುಡಕಟ್ಟಿನ ಚರಮೂರ್ತಿಗಳಿಂದ ಚರಂತಿಗೆ ಪುಸ್ತಕವೆಂದರೆ ಚನ್ನಬಸವಪುರಾಣ, ಬಸವಪುರಾಣ ಮುಂತಾದ ಶಿವಪುರಾಣಗಳನ್ನು ತಮ್ಮಿಂದ ಪಟ್‌ಸ್ಥಲ ಜ್ಞಾನೋಪದೇಶಂ ಪಡೆದು ಷಟ್‌ಸ್ಥಲಾಶ್ರಮವಂ ಹೊಂದಿದ ತಮ್ಮಯ ಶಿಷೋತ್ತಮನಿಗೆ ಭಕ್ತಗಣವರರ ಮಧ್ಯದಿ ಆ ಪುಸ್ತಕಗಳಂ ಕೊಟ್ಟು ಸ್ವಯಾಸನವಂ ಕೊಟ್ಟರೆ ಪುರಾಣ ಚರಂತಿಗೆ ಎಂತಲೂ ಈ ಎರಡು ನಾಮಗಳು ಇವರಿಗೆ ಬರುತ್ತವೆ. ಈ ಚರಮೂರ್ತಿಗಳು ತಮ್ಮ ಮಠಿಗಳಿಗೆ ಸ್ಥಲವಂದ ಕೂಡಿಸಿ ಶಿವಾನುಭವ ಶಾಸ್ತ್ರವಂ ಸಂಪಾದಿಸಿ ವಿರಕ್ತರು ಮಾಡಿಕೊಳ್ಳುವುದಕ್ಕೆ ಬರುವುದಿಲ್ಲ. ಈ ಚರಮೂರ್ತಿಗಳು ಪೂಜೆಗೆ ವಂದನೆಗೆ ಬಾಧ್ಯರು. ಯಾರು ಬಾಧ್ಯರು ಎಂದರೆ ಪ್ರಭು ಚನ್ನಬಸವರಾಜೇಂದ್ರರು ಶಿವಮೂರ್ತಿಯಾದ ಸೊನ್ನಲಿಗೆಯ ಸಿದ್ಧರಾಮೇಶಂಗೆ ನಿರೂಪಿಸಿದ ಗುಹೇಶ್ವರನ ವಚನ ಕರಣ ಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರ ವಚನ, ಹಿರಿಯ ಮಂತ್ರಗೋಪ್ಯ, ಶೂನ್ಯಸಂಪಾದನೆ, ಮುಂತಾದವುಗಳ ಸಂಗ್ರಹಿಸಿ ಪುಸ್ತಕವ ಸಭಾಮಧ್ಯದಲ್ಲಿ ಆ ಶಿವಾನುಭವ ಚರಂತಿಗೆ ತೆಗೆದುಕೊಂಡ ಗುರುವರನ ಕಡೆಯಿಂದ ಆ ಶಾಸ್ತ್ರವಂ ಶಿಷ್ಯೋತ್ತಮನು ಶಿವಮಂತ್ರ ಗುರುಪ್ರಸಾದ ಮುಖನಾದ ಅಂಗಲಿಂಗ ಸಾಮರಸ್ಯ ಮುಂತಾಗಿ.......... ೩೬ ತತ್ವಂಗಳಂ ತಿಳಿದಾತನು ಶಾಸ್ತ್ರವಂ ಗುರುಗಳಿಂ ಶ್ರವಣಗೊಂಡಾತನಾದ ವಿರಕ್ತನ ಶಾಸ್ತ್ರದ ಕಟ್ಟು ಹಿಡಿಯಬೇಕು............ ಈತನಿಗೆ ಶಿವಾನುಭವ ಶಾಸ್ತ್ರವೇ ಆಗಲಿ ಪುರಾಣ ಪುಸ್ತಕವೇ ಆಗಲಿ ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿ ಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಿಕೊಳ್ಳಲು ಆ ಗಣವರಗೆ ಚರಮೂರ್ತಿ ಎನಿಸುವನು.

ಲಕ್ಕಣ ದಣ್ಣಾಯಕರು ಮುನ್ನ ಭಂಡಾರಿ
ಜಕ್ಕಪ್ಪ ಕಲ್ಲೆಹದ ಕೇತಿಶೆಟ್ಟಿಯರಿವರು
ಲಕ್ಕ ಸಂಖ್ಯೆಯ ವಿತ್ತಮಂ ವೆಚ್ಚಿಸುತ್

ವೀರಶೈವಾಮೃತ ಪುರಾಣದಲ್ಲಿ ಹೇಳಿದಂತೆ ಹಸ್ತಪ್ರತಿಗಳ ಅಭಿವೃದ್ಧಿಗೆ ವೀರಶೈವರು ಆಶ್ರಯದಾತರಾಗಿದ್ದರು. ತನ್ನ ಮನೆಯಲ್ಲಿಯೇ ವೀರಶೈವಾಮೃತ ಪುರಾಣದ ಬರವಣಿಗೆಗೆ ಅವಕಾಶ ಮಾಡಿಕೊಟ್ಟವಳು ಜ್ಯೋತಿಯಮ್ಮನೆಂಬ ಸದ್ಭಕ್ತೆ.

ಈ ವೀರಶೈವಾಮೃತ ಪ್ರಬಂಧಮನಿನ್ನ
ದಾವತಾವಿನೊಳು ಹಲಗೆಯ ದೇವರೆಸಗಿದರು
ಭೂವಳಯದೊಳಗೆನಲ್ ಜ್ಯೋತಿಯಂಮನ ಗೃಹದೊಲ್[೧೦]

ಅಂದರೆ ಸ್ತ್ರೀಯರು ಕೂಡ ಹಸ್ತಪ್ರತಿ ಬರವಣಿಗೆಯ ಧಾರ್ಮಿಕ ಕೈಂಕರ್ಯಗಳಲ್ಲಿ ತೊಡಗಿರುವುದು ಹೊಸ ವಿವೇಚನೆಗೆ ದಾರಿಯಾಗಿದೆ. ಕನ್ನಡ ಹಸ್ತಪ್ರತಿಗಳ ವೈಶಿಷ್ಟ್ಯವೆಂದರೆ ಆದಿ ಅಂತ್ಯಗಳು ಧಾರ್ಮಿಕ ಅಂಶಗಳಿಂದ ಕೂಡಿರುವುದು.

"ಗುರುಬಸವ ಲಿಂಗಾಯನಮ:। ವಾರ್ಧಿಕ ಷಟ್ಪದಿ॥ ಕದಂಬನೀತಿ ಮಾಲಿಕೆ ಬರೆಯುವುದಕ್ಕೆ ಶುಭಮಸ್ತು॥ ಪರಮ ಪಾವನ ಕಾಯ ಸಂಪಗತ ನಿರ್ಮಾಯಾ ಶರಣ ಜನಮಂದಾರಸಾರ ಕರುಣಾಪೂರ। ವರಮಂತ್ರದಾಗರ ವರವಿಲಾಕಾರ ನಂದಿಸಂಪದ್ಭರ್ತೃ ಪೊರೆವುತಿಹ ನಮ್ಮ ಗುರು ಚನ್ನವೀರೇಶನ। ಚರಣ ಸರಸಿಜನರ ಹೃತ್ಕಮಲದೊಳಗಿಟ್ಟು ವರದೆ ನಾ ನೀ ಕದಂಬ ನೀತಿ ಮಾಲಿಕೆಯ ಬರದೋದಿ ಲಾಲಿಸುವುದು .........ಶ್ರೀ ಗುರುಲಿಂಗಾಯನಮ: ಖರ್ಚುವೆಚ್ಚದ ವಿವರವು"

".........ಶ್ರೀ ಗಣಾದಿಪತಯೋನಮ: ಶ್ರೀಗುರುವೇಗತಿ। ನಂಜನಗೂಡು ನಂಜುಂಡೇಶ್ವರ ಸ್ವಾಮಿಯವರ ಪಾದವೇಗತಿ। ರವ್ರುದ್ಧಿಸಂವತ್ಸರದ। ವೈಶಾಖ ಖ॥೫/೨ಉಲ್ಲು ಪಾರ್ವತಿ ಕೊರಮಂಜಿ ಯಕ್ಷಗಾನ ಪುಸ್ತಕ ಬರೆಯುವುದಕ್ಕೆ ನಿರ್ವಿಘ್ನಮಸ್ತು।

ಕೆಳದಿನೃಪ ವಿಜಯದಲ್ಲಿ ಶಾಶ್ವತ ಧರ್ಮ ಕೀರ್ತಿಗಳನ್ನು ಸಂಪಾದಿಸಿ ರಾಜಗೈದ ಬಸವ ನರೇಂದ್ರನ ಕಾಲದಲ್ಲಿ ನಡೆದ ಶಾಸ್ತ್ರದಾನದ ಪ್ರಸಂಗ ಗಮನಾರ್ಹವಾದುದು. ಈತನು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ಮೂರ್ತಿಗಳಿಗೆ ಪ್ರಸಾದ ಸಂತೃಪ್ತಿಗೈದು ವಸ್ತ್ರ ಕಂಬಳಿ ಕಂಥೆ ಶಿವಧಾರ ವಿಭೂತಿಯಾಧಾರ, ಭಸ್ಮ ರುದ್ರಾಕ್ಷಿ ಮುಂತಾಗಿ ಇಚ್ಛಾ ಪದಾರ್ಥಗಳ ಜೊತೆಗೆ ಅವರೆಲ್ಲರಿಗೂ ಶಿವಶಾಸ್ತ್ರ ಲಿಖಿತ ಪುಸ್ತಕಗಳನ್ನು ಕೊಡಮಾಡಿ ಮೆರವಣಿಗೆ ಮಾಡಿಸಿದ ಬಗ್ಗೆ ತಿಳಿದು ಬರುತ್ತದೆ.[೧೧] ಶಾಸನ ಮತ್ತು ಹಸ್ತಪ್ರತಿಗಳಿಗೆ ಸಂಬಂಧಿಸಿದ ಉಲ್ಲೇಖಗಳು ಲೌಕಿಕಾಧಿಕಾರವು ಧರ್ಮಾಧಿಕಾರಕ್ಕೆ ಪಾದ ತೊಳೆದು ದಾನದತ್ತಿ ನೀಡಿದರೆ, ಕೃತಾರ್ಥರು ಎನ್ನುವ ಅಂಶವನ್ನು ಒತ್ತಿ ಹೇಳುತ್ತದೆ. ಪಟ್ಟಾಧಿಕಾರದಂತಹ ಧಾರ್ಮಿಕ ಸಂದರ್ಭಗಳಲ್ಲಿ ಹಸ್ತಪ್ರತಿಗಳನ್ನು ನೀಡುವ, ಸಂಪ್ರದಾಯವು ಸಾಮಾಜಿಕ ಕಳಕಳಿಯಷ್ಟೆ ಧಾರ್ಮಿಕ ಕಳಕಳಿಯೂ ಅಗಿತ್ತು ಧಾರ್ಮಿಕ ಗ್ರಂಥಗಳನ್ನು ರಕ್ಷಿಸುವುದು, ಅವುಗಳ ಪುನರ್ ಉತ್ಪಾದನೆ, ಸಂರಕ್ಷಣೆ, ಸಂವರ್ಧನೆ ಸಂಗೋಪನೆಯ ಜವಾಬ್ದಾರಿಯನ್ನು ಧಾರ್ಮಿಕ ಕೇಂದ್ರಗಳಿಗೆ ವಹಿಸಲಾಗುತ್ತಿತ್ತು. ಅವು ಅವುಗಳನ್ನು ತನ್ನ ಕರ್ತವ್ಯವೆಂದು ಪಾಲಿಸಬೇಕಾಗಿತ್ತು. ಅರಮನೆ-ಗುರುಮನೆ ದೇವಾಲಯಗಳು ಮಠ-ಮಾನ್ಯಗಳ ನಡುವೆ ಅವಿನಾಭಾವ ಸಂಬಂಧ ಹೊಂದಿದ್ದು ಮಧ್ಯಕಾಲೀನ ಸಾಹಿತ್ಯದಿಂದ ತಿಳಿಯಬಹುದು. ಈ ಅಂಶ ಮಧ್ಯಕಾಲೀನ ಬರಹಗಾರರಿಗೆ ಪ್ರಾಣಪೋಷಕವೂ ಪ್ರಾಣಘಾತಕವೂ ಆಗಿತ್ತು. ಉದಾ: ಶೈವ, ವೀರಶೈವ ಕವಿಗಳಾದ ಹರಿಹರ ರಾಘವಾಂಕ. ವೀರಶೈವ ಕವಿ ಹರಿಹರ ತನ್ನ ಕೃತಿ ಮತ್ತು ಎಲ್ಲಾ ಗ್ರಂಥಗಳು ಹೇಗಿರಬೇಕು ಎಂಬುದನ್ನು ಈ ಕೆಳಗಿನ ಪದ್ಯದಲ್ಲಿ ಹೇಳಿದ್ದಾನೆ.

ಸತ್ತವರ ಕಥೆಯಲ್ಲ
ಜನನದ ಕುತ್ತದಲಿ ಕುದಿಕುದಿದು
ಕರ್ಮದ ಕತ್ತಲೆಗೆ ಸಿಲುಕುವವರ ಹೊಲಬು ತಾನಲ್ಲ
ಹೊತ್ತು ಹೋಗದ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲ[೨]

ಈಶ್ವರನನ್ನು ಈಶ್ವರನಿಗೆ ಭಕ್ತರಾದ ಶರಣರನ್ನು ಹೊರತು ಅನ್ಯರನ್ನು ಸುತ್ತಿಸಬಾರದು "ವಾಗ್ವೀಶ್ವರೀಯ ಪ್ರಸಾದವನ್ನು ಆ ಮಹೋನ್ನತ ಗರಿಗೇ, ಉಸಲು ಮಾಡಿ ಜೀವನವನ್ನು ಸಾರ್ಥಕಗೊಳಿಸಬೇಕು, ಎನ್ನುವ ತತ್ವವೇ ವೀರಶೈವ ಸಾಹಿತ್ಯದ ಕೈದಿವಿಗೆ.[೩]

ಧಾರ್ಮಿಕ ಪವಾಡಗಳ ಮೂಲಕ ತನ್ನ ಧರ್ಮದ ಕೃತಿಗಳ ಸಂಘಟನೆಯನ್ನು ಈ ಸಂದರ್ಭದಲ್ಲಿ ಮಾಡಲಾಗುತ್ತಿತ್ತು. ಸಾಹಿತ್ಯವು ಧರ್ಮದಲ್ಲಿ ನಂಬಿಕೆ, ಹಾಗೂ ಸಾಹಿತ್ಯ ಸೃಷ್ಟಿ ಸಂರಕ್ಷಣೆ ಮಾಡಲು ಧಾರ್ಮಿಕ ಮಹಾಪುರುಷರನ್ನು ಕುರಿತು ಹುಟ್ಟಿಕೊಂಡಿದ್ದ ಪವಾಡ ಕಥೆಗಳನ್ನು ಪ್ರಸಾರ ಮಾಡಲಾಯಿತು. ಸಾಮಾನ್ಯವಾಗಿ ವ್ಯಕ್ತಿ ಸಾಧಿಸಿದ ಮಹತ್ಕಾರ್ಯ ಹಾಗೂ ಭಕ್ತ ಜನತೆಯಲ್ಲಿ ಅವರಿಗೆ ನೇರ ಸಂಬಂಧ ಬಂದ ವಸ್ತು ಸ್ಥಳ ಮುಂತಾದುವನ್ನು ಕುರಿತು ಕಥೆಗಳು ಐತಿಹ್ಯಗಳುಳ್ಳ ಗ್ರಂಥಗಳನ್ನು ಭಯ-ಭಕ್ತಿಯಿಂದ ಸಂರಕ್ಷಿಸಲಾಯಿತು.

೧೨ನೆಯ ಶತಮಾನದಲ್ಲಿ ಸಮಾವೇಶಗೊಂಡ ಧಾರ್ಮಿಕ ಸಾಮಾಜಿಕ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಆಂದೋಲನದಲ್ಲಿ ಬಸವಣ್ಣ ಅಲ್ಲಮರ ಪಾತ್ರ ಪ್ರಮುಖವಾಗಿದೆ. ದೇವರೊಡನೆ ವ್ಯವಹರಿಸುವ ಸರ್ವಾಂತರ್ಯಾಮಿಗಳು ಪವಾಡ ಪುರುಷರು ಎಂದು ಸಾಮಾನ್ಯ ಜನತೆಗೆ ಭಿನ್ನರಾದವರು ಎಂದು ತಿಳಿಸುವ ಮೂಲಕ ಅವರ ಚರಿತ್ರೆಯನ್ನು ಬರೆಯಲಾಯಿತು. ಜೊತೆಗೆ ಪುರಾಣ ಕಲ್ಪನೆಯಿಂದ ಗ್ರಂಥಗಳಿಗೆ ಪೂಜ್ಯನೀಯ ಭಾವನೆಯನ್ನು ಪಾವಿತ್ರತ್ಯೆಯನ್ನು ನೀಡಿ ಹಾಗೂ ಭಕ್ತಿ ಭಾವದಿಂದ ಗ್ರಂಥಗಳನ್ನು ಸಂರಕ್ಷಿಸುವದು ಹಾಗೂ ಆ ಗ್ರಂಥಗಳ ಪ್ರತಿಯನ್ನು ಮಾಡುವದು ಅಥವಾ ಮಾಡಿಸುವುದು ಅವರ ಆದ್ಯ ಕರ್ತವ್ಯವಾಗಿತ್ತು.

ಪವಾಡಗಳಿಗೆ ಕಾರಣವಾಗುವ ವಿವಿಧ ಮನೋಧರ್ಮದ ಹಿನ್ನೆಲೆಯನ್ನು ಅವುಗಳ ಆಶೆ ಆಶಯ ಪ್ರೇರಣೆ ಪೋಷಣೆಗಳನ್ನು ವಿವೇಚಿಸುವಲ್ಲಿ ಹರಿಹರ ರಾಘವಾಂಕರಂತಹ ವೀರಶೈವ ಕವಿಗಳ ಪ್ರತಿಭೆ ಅದ್ಭುತ ಕೆಲಸಮಾಡಿದೆ. "ಧಾರ್ಮಿಕ ಮಹಾಪುರುಷರ ಕುರಿತ ಪ್ರಚಲಿತವಿದ್ದ ಪವಾಡಗಳನ್ನು ಜನತೆ ಬಹು ಹಿಂದಿನಿಂದಲೂ ನಂಬಿಕೊಂಡು ಅವುಗಳನ್ನು ಪೂಜ್ಯ ದೃಷ್ಟಿಯಿಂದ ಕಾಣುತ್ತ ಬಂದುದಕ್ಕೆ ಅವು ಆಯಾ ಧಾರ್ಮಿಕ ಸಾಹಿತ್ಯದಲ್ಲಿ ಕಥೆಗಳ ರೂಪದಲ್ಲಿ ವರ್ಣಿತವಾಗಿವೆ"[೪] ಪವಾಡಗಳು ಯವಾಗಲೂ ಒಳ್ಳೆಯದನ್ನೇ ಮಾಡುತ್ತವೆಯೆಂಬ ಭಾವನೆಯಿಂದ ಜನಸಾಮಾನ್ಯರು ಪವಾಡಪುರುಷರ ಮೇಲೆ ನಂಬಿಕೆ ಇಟ್ಟು ಪೂಜ್ಯಭಾವನೆಯಿಂದ ಭಕ್ತಿ-ಶ್ರದ್ಧೆಯಿಂದ ಹೇಳುವ-ಕೇಳುವ ಪ್ರಧಾನ ಸಂಸ್ಕೃತಿಯನ್ನು ಕಟ್ಟಿಕೊಟ್ಟರು.

ರಾಘವಾಂಕನ ಕಾಲಕ್ಕೆ ಜನತೆ ಪುರಾಣ ಶ್ರವಣ, ವಾಚನದತ್ತ ಆಸ್ತಕರಾಗಿದ್ದರೆಂಬುದೂ, ಧರ್ಮ ತತ್ವಗಳಲ್ಲಿ ಅತ್ಯಂತ ಶ್ರದ್ಧೆಯುಳ್ಳವರಾಗಿದ್ದರೆಂಬುದೂ ತಿಳಿದುಬರುತ್ತದೆ.

ವಾಚಕರಮಟ ಕಿಟನರಸಿಂಹ ವಾಮನಾ
ಖ್ಯಾಚ್ಯುತ ಮಹಾವತಾರಪುರುಷ ಕಥೆಗಳು
ವಾರ್ಚರ ಧ್ವಜಯನು ತ್ರಿಪುರದಹನ ಜವನ್ರಹೃತಿ ದಕ್ಷಾಧಾರಗಳಾ
ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಪದ್ಯಮಂ
ತನತನಗಿಂದ್ರಚಂದ್ರ ರವಿಕರ್ಣದಧೀಜಿ ಬಲೀಂದ್ರನೆಂದು ತಾ
ನನವರತಂ ಪೊಗಳ್ದು ಕೆಡುಬೇಡಲಡ ಮಾನವ ನೀನಹರ್ನಿಸಂ
ನೆನೆಪೊಗಳರ್ಚಿಸೆಮ್ಮ ಕಡುಸೊಂಪಿನ ಹಂಪೆಯಾಳ್ದಂ॥[೧೫]

ರಾಘವಾಂಕ ಜನ ಬದುಕಬೇಕೆಂದು, ಕಾವ್ಯ ಬರೆದ. ಹರನೆಂಬುದು ಸತ್ಯ ಸತ್ಯವೆಂಬುದು ಹರನು ಎಂಬ ಸೂತ್ರವನ್ನನುಸರಿಸಿ ಕಾವ್ಯ ರಚನೆ ಮಾಡಿದ. ಈ ಮೇಲಿನ ಮಾತು ರಾಘವಾಂಕನ ಧಾರ್ಮಿಕ ನಿಷ್ಠತೆಯನ್ನು ತೋರುತ್ತದೆ. ಹರಿಶ್ಚಂದ್ರ ಸತ್ಯನಿಷ್ಠನಾದರೂ ನರಶ್ರೇಷ್ಠನೆನಿಸಿದ್ದ ಹರಿಶ್ಚಂದ್ರನ ಮೇಲೆ ಕಾವ್ಯವನ್ನು ಬರೆದಿರುವುದಕ್ಕಾಗಿ ಹರಿಹರನಿಂದ ರಾಘವಾಂಕ ದಂಡಿಸಿಕೊಂಡನೆಂಬ ಐತಿಹ್ಯವೂ ಇದೆ. ಇದರ ಪ್ರಾಯಶ್ಚಿತ್ತಕ್ಕಾಗಿ ಸಿದ್ಧರಾಮಚಾರಿತ್ರ್ಯ ವೀರೇಶಚರಿತೆ ಯಂತಹ ಕಾವ್ಯಕೃತಿಗಳನ್ನು ರಾಘವಾಂಕ ರಚಿಸಿದನು.

ರಸೆಯೊಳ್ ರಸವತ್ಕವಿತೆಯ
ನುಸಿರಲ್ಪಡೆದ ಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಂ ಕಳೆದು ಕಸವನಾಂತವೊಲಕ್ಕುಂ
ಅದರಿಂದೆ ಮಹಿತಮಹಿಮಾ
ಸ್ಪಂದನಂ ಶಿವನಂ ತದೀಯ ಶರಣವ್ರಜಮಂ
ಪಡೆದು ಮುದಮುದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ[೧೬]

ಹರಿಹರನಂತೆ ರಾಘವಾಂಕ ವೀರಶೈವ ಧಾರ್ಮಿಕ ನೆಲೆಗಟ್ಟಿನಲ್ಲಿ ಕಾವ್ಯವನ್ನು ರಚಿಸಿದಲ್ಲದೇ ನಂತರ ಬಂದ ಷಡಕ್ಷರ ದೇವನೂ ಈ ಮಾರ್ಗವನ್ನು ಅನುಸರಿಸಿದನು. ಧರೆಯೊಳ್ ಮೆಟ್ಟಿಪುಟ್ಟುತ್ತರುಳ್ವ ನರರ ಮೇಲರ್ಬಿ ಕರ್ಬಂಗಳಂ ಬಿತ್ತರಿಸುತ್ತ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟು ಪೋದರ್!! ಹರಿದೇವಂ ದೇವದೇವೋತ್ತಮನ ಶರಣಂ ಪಾಡಿ ಕೈವಲ್ಯ ಲಕ್ಷ್ಮೀ ವರನಾದಂ ಮತ್ತವಂಗಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪನ್॥[೧೭]

ಮಾನವ ಸಂಸ್ಕೃತಿಯನ್ನು ಉಚ್ಚಗೊಳಿಸಿ, ಮಾನವನನ್ನು ಉನ್ನತ ವಿಚಾರಗಳಲ್ಲಿ ಲೀನನ್ನಾಗಿ ಮಾಡುವುದೇ ವೀರಶೈವ ಸಾಹಿತ್ಯದ ಗುರಿಯೆಂದು ಒಪ್ಪಿಕೊಂಡ ರೀತಿಯಲ್ಲಿ ವೀರಶೈವ ಸಾಹಿತ್ಯ ರಚನೆಗೊಂಡಿತು. ವಚನ ಸಾಹಿತ್ಯವೂ ಸರ್ವಜನಾದರಣೀಯವಾಗಿ ಸರ್ವರಿಗೂ ಸುಲಭವಾಗಿ ಅರ್ಥೈಸಿಕೊಳ್ಳುವ ರೀತಿಯಲ್ಲಿ ಸೃಷ್ಟಿಯಾಯಿತು. ಅಲ್ಲಮ ಬಸವಣ್ಣರಂತಹ ವಚನಕಾರರು ಕಾವ್ಯಗಳನ್ನು ರಚಿಸಲು ಇಚ್ಛೈಸಲಿಲ್ಲ. ಆದರೆ ತಮ್ಮ ವಿಚಾರಗಳನ್ನು ತಮ್ಮ ಅನುಭವಗಳನ್ನು ತಮ್ಮ ಆಧ್ಯಾತ್ಮಿಕ ಚಿಂತನೆಗಳನ್ನು ಜನಸಾಮಾನ್ಯರ ಕಲ್ಯಾಣಕ್ಕಾಗಿ ನುಡಿಯುತ್ತಾ ಹೋದರು.

ರಾಘವಾಂಕನಂತಹ ಕವಿ ಹರಿಶ್ಚಂದ್ರ ಕಾವ್ಯವನ್ನು ವಿದ್ವಾಂಸರು ಮೆಚ್ಚುವಂತೆ ರಚಿಸಿ ಓದಿದಕ್ಕಾಗಿ ಸೋದರ ಮಾವನಾದ ಹರಹರನಿಂದ ಹಲ್ಲುಗಳನ್ನು ಮುರಿಸಿಕೊಂಡನೆಂದು ದಂತಕಥೆಯಿದೆ. ಆ ಪಾಪದ ನಿವಾರಣೆಗಾಗಿ 'ಸಿದ್ಧರಾಮ ಚಾರಿತ್ರ, ಸೋಮನಾಥ ಚರಿತೆಗಳನ್ನು ಬರೆದು ಮರಳಿ ಹಲ್ಲುಗಳನ್ನು ದೊರಕಿಸಿಕೊಂಡನಂತೆ. ಆದ್ದರಿಂದ 'ಹಂಪೆಯರಸನ ಪೊಗಳ್ವ ನಾಲಗೆಯೊಳನ್ಯ ದೈವವ ಭವಿಗಳಂ ಕೀರ್ತಿಸಿದೆನಾದಡೆ ಮನಸಿಜಾರಿಯ ಭಕ್ತನಲ್ಲ' ಎನ್ನುವ ಮೂಲಕ ತನ್ನ ಧಾರ್ಮಿಕ ಬದ್ಧತೆಯನ್ನು ಮೆರೆದಿದ್ದಾನೆ. ಜನಸಾಮಾನ್ಯರು ತಮ್ಮ ಬದುಕಿನಲ್ಲಿ ಸಂಭವಿಸುವ ಘಟನೆಗಳಿಗೆ ದೇವನೇ ಕಾರಣವೆಂದು ನಂಬಿ, ದೇವನ ಮೇಲೆ ಭಯ–ಭಕ್ತಿಯಿಂದ ಶ್ರದ್ಧೆಯಿಟ್ಟು ಸುಖ–ಶಾಂತಿಯನ್ನು ಪಡೆಯುತ್ತಾ ಬಾಳುತ್ತಿದ್ದರು. ಶ್ರದ್ಧೆಯಿಂದ ಮಹಾತ್ಮರ ಕಥೆಗಳನ್ನು ಕೇಳುವುದರಿಂದ ಜನನ–ಮರಣದ ಜಂಜಾಟದಿಂದ ಮುಕ್ತಿ ಹೊಂದುವಂತಹ ಭಾವನೆಯಿತ್ತು. ಇಂಥ ಮೋಕ್ಷ ಹೊಂದಿದ ಮಹಾತ್ಮರ ಚರಿತ್ರೆಯೂ ಇದುವರೆಗೂ ಹೆಚ್ಚು ಪ್ರಚಲಿತವಾಗಿವೆ. ಪುರಾಣ–ಪ್ರವಚನಗಳಿಂದ ಹಿರಿಯರಿಂದ ಆಲಿಸುವುದು ಆ ಮಹಾತ್ಮರ ಜೀವನಾದರ್ಶವನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಳ್ಳಲು ಪ್ರೇರಣೆ ನೀಡಲಾಯಿತು. ಪುರಾಣ–ಪ್ರವಚನಗಳನ್ನು ಆಲಿಸುವುದರ ಜೊತೆಗೆ ಹೇಳುವ ಕೇಳುವ ಅಕ್ಷರ ಕೇಂದ್ರಿತದಾಚೆಯ ಸಂಸ್ಕೃತಿಯಲ್ಲಿ ಶೋತೃಗಳ ಸಂಖ್ಯೆ ಹೆಚ್ಚುತ್ತಾ ಪುರಾಣಗಳ ಬಗ್ಗೆ ಭಯ–ಭಕ್ತಿ ಉತ್ಸುಕ ವಾತಾವರಣ ನಿರ್ಮಾಣವಾಯಿತು. ಇಂತಹ ಕೇಳುಗ ವರ್ಗದ ಅಭಿರುಚಿಯನ್ನು ಅನುಲಕ್ಷಿಸಿ ಪುರಾಣಕಾರರು ಭಾವುಕರಾಗಿ ಪುಣ್ಯಪುರುಷರ ಚರಿತ್ರೆಯನ್ನು ರಚಿಸಿದರು. ಇಂತಹ ಪುರಾಣ ಗ್ರಂಥಗಳು ಜನಸಾಮಾನ್ಯರು ಮೇಲೆ ಗಾಢ ಪರಿಣಾಮ ಬೀರಿ ಅವರಲ್ಲಿ ಭಕ್ತಿಯ ವಾತಾವರಣ ನಿರ್ಮಾಣ ಮಾಡಿದವು. ಜೊತೆಗೆ ಉತ್ತಮ ಬದುಕನ್ನು ಕಟ್ಟಿಕೊಳ್ಳಲು ದಾರಿದೀಪಗಳಾಗಿ ಕಂಗೊಳಿಸಿದವು.

ಮಧ್ಯಕಾಲೀನ ಕನ್ನಡ ಸಾಹಿತ್ಯ ಚರಿತ್ರೆಯ ಸಂಗೋಪನ ಹಾಗೂ ಸಂವರ್ಧನೆಗೆ ವೀರಶೈವ ಧರ್ಮ ವಿಶೇಷ ಕೊಡುಗೆ ನೀಡಿತು. ಶೂನ್ಯ ಸಂಪಾದನೆಯಂಥ ಕೃತಿಗಳನಲ್ಲದೆ ಸಂಪಾದನ ಸಮಯ ಎನ್ನುವ ಪರಿಕಲ್ಪನೆಯನ್ನೇ ಹುಟ್ಟು ಹಾಕಲಾಯಿತು. ವೀರಶೈವ ಧಾರ್ಮಿಕ ನಿಷ್ಠೆ ಹಸ್ತಪ್ರತಿಗಳನ್ನು ದಾಸೋಹದ ರೀತಿ ಜ್ಞಾನ ದಾಸೋಹದ ಮೂಲಕ ಸಂರಕ್ಷಿಸಿದ್ದು ಅಭ್ಯಾಸಾರ್ಹವಾದುದಾಗಿದೆ.

### ೪.೩. ವೈದಿಕ ಧರ್ಮ

> ಬರೆಹ ವಾಚನ ಗಣಿತ ಶಬ್ದಾ
> ರ್ಥ ರಸಭಾವೋಕ್ತಿ ಪ್ರವೀಣತೆ
> ಭರತ ಛಂದೋ ವ್ಯಾಕರಣ ಸಂಗೀತ ಸಾಹಿತ್ಯ
> ಹರರಹಸ್ಯಾಗಮ ಪುರಾಣೋ
> ತ್ಕರ ಸಕಳ ವೇದಾದಿ ಕಲೆಗಳು[೧೮]
> ವ್ಯಾಕರಣಮರ್ಥಶಾಸ್ತ್ರಾ
> ನೀಕಂ ಸಾಹಿತ್ಯ ವಿದ್ಯೇತಿಹಾಸಂ ಮಿ
> ಕ್ಕೇಕಾಕ್ಷರಮಿನಿ ತರ್ಕ್ಕಂ
> ಟೀಕಂ ಬರೆಯಲ್ ನಮಗ್ರಭ್ಯಾಸಿಸುವರ್[೧೯]

ಹಸ್ತಪ್ರತಿಗಳ ಭೌತಿಕ ಸ್ವರೂಪವಾದ ಹೊದಿಕೆ, ರಂಧ್ರ, ಅಳತೆ, ದಾರ, ಅಕ್ಷರ, ಬಣ್ಣ, ಲಿಪೀಕರಣದಂತಹ ಕೆಲಸಗಳನ್ನು ನಿರ್ವಹಿಸುವವರು ಖಂಡಿತ ಅಕ್ಷರಸ್ಥರಾಗಿರಲಿಲ್ಲ. ಇದಕ್ಕೆ ಹಸ್ತಪ್ರತಿಯ ಚರಿತ್ರೆಯಲ್ಲೇ ಬೇಕಾದಷ್ಟು ನಿದರ್ಶನಗಳು ದೊರಕುತ್ತವೆ. ಹಸ್ತಪ್ರತಿಗಳಿಗೆ ರಂಧ್ರ ಕೊರೆವ ರೀತಿಗಳಲ್ಲಿ, ಬಣ್ಣಹಾಕುವ ಸಂಗತಿಗಳಲ್ಲಿ, ವಿನ್ಯಾಸಗೊಳಿಸುವ, ಬರೆವ ಇತ್ಯಾದಿ ಸ್ವರೂಪಗಳಿಗೆ ಸಂಹಿತೆಗಳನ್ನು ಹಾಕಿದ್ದು ವೈದಿಕ ಯುಗದಲ್ಲಿ ಕಾಣುತ್ತದೆ. ಇಂಥ ಸಂಹಿತೆಗಳನ್ನು ಮೀರುವವರು ನರಕದಲ್ಲಿ ಹುಟ್ಟುತ್ತಾರೆ. ಕುಟುಂಬ ಪೋಷಣೆಗಾಗಿ ಬರವಣಿಗೆಗೆ ಫಲಾಪೇಕ್ಷೆ ಬಯಸಿದರೆ ಅವರು ದುಷ್ಟಾತ್ಮರು ಎನ್ನುವ ಮನುಜ ವಿರೋಧಿ ನೆಲೆಗಳನ್ನು ಹುಟ್ಟುಹಾಕಿದ್ದು ಸ್ಪಷ್ಟವಾಗುತ್ತದೆ.[೨೦] ಹೀಗಾಗಿ ವೈದಿಕರು ಪ್ರತಿಯೊಂದನ್ನು ದೈವೀನೆಲೆಯಲ್ಲಿ ನೋಡುವುದರೊಂದಿಗೆ ಇತರ ಧರ್ಮಗಳನ್ನು ತನ್ನ ಆಧೀನಕ್ಕೊಳಪಡಿಸಿ ಶ್ರಮಪ್ರಧಾನವಾದ ಕೆಲಸವನ್ನು ಅವರಿಗೆ ವಹಿಸಲು ಧಾರ್ಮಿಕ ಚೌಕಟ್ಟನ್ನು ನಿರ್ಮಿಸಿದರು. ಇಂಥ ಸಂಹಿತೆಯನ್ನು ಮೀರಿದರೆ ನರಕದಲ್ಲಿ ಹುಟ್ಟುತ್ತಾರೆ ಎನ್ನುವ ಮೂಲಕ ಇತರೆ ಧರ್ಮೀಯರಿಗೆ ಭಯ ಹುಟ್ಟಿಸಿದರು.

### ೪.೪. ಲಿಪೀಕರಣ ಹಾಗೂ ಅನ್ಯಮತ ದ್ವೇಷ

ಪುಸ್ತಕ ಸಂಸ್ಕೃತಿ ಜ್ಞಾನದ ಭಾಗ. ಪ್ರಚಾರ, ದಾನ, ಉಪಜೀವನ, ಧರ್ಮ, ಸಾಮಾಜಿಕ, ಸಾಹಿತ್ಯಕ ತತ್ವಗಳ ಭೌತಿಕ ಸ್ವರೂಪ. ಪಠ್ಯ ಅಂತರಪಠ್ಯ, ಭಾಷೆ, ಧರ್ಮ, ಸಾಮಾಜಿಕ ಕಳಕಳಿಯ ಮೂಲಕ ಮೂರ್ತ ಸ್ವರೂಪದ ಗ್ರಂಥಗಳಲ್ಲದೇ ಅಮೂರ್ತರೂಪದ ಜ್ಞಾನವನ್ನು ಸಂರಕ್ಷಿಸುವದು ಕನ್ನಡ ಸಂಸ್ಕೃತಿಯಲ್ಲಿ ಬೆಳದು ಬಂದಿದೆ.

ಕರ್ನಾಟಕದಲ್ಲಿ ಗೊರವರು ರಾಷ್ಟ್ರಕೂಟರ ಕಾಲದಲ್ಲಿ ಬಹಳ ಪ್ರಸಿದ್ಧಿಗೆ ಬಂದುದಲ್ಲದೆ ರಾಜಗುರುಗಳಾಗಿಯೂ ಇದ್ದರು. ಇವರು ಬೌದ್ಧ, ಜೈನ, ವೈದಿಕ ಧರ್ಮಕ್ಕೆ ವಿರೋಧಿ ನಲೆಯಲ್ಲಿ ತಮ್ಮ ಬೆಳವಣಿಗೆಯನ್ನು ಕಂಡುಕೊಂಡರು. ವೈದಿಕ ಧರ್ಮದ ಶಾಸ್ತ್ರಾಗಮಗಳನ್ನು ಒಪ್ಪಿದ್ದರೂ ಕೂಡ ವೈದಿಕರ ಆಚರಣೆಯನ್ನು ಸಂಪೂರ್ಣ ವಿರೋಧಿಸಿ ನಿಂತವರು.

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರೂ
ವಿಮಳರಾಗಪರರಾಗಿಸುವೆಂದು ಸಮುಚ್ಚಯ
ಕ್ಕುಪಚಿತೋರುಗುಣಮಂ ಮಿಗೆ ಪೇಳ್ಗಿಕವಿಶ್ವರರ್[೨೧]

ಕವಿರಾಜಮಾರ್ಗದ ಈ ಪದ್ಯ ತಿಳಿಸುವುದೇನೆಂದರೆ ಗೊರವರೂ ದೊರೆಯನ್ನು ಕಾಪಾಡಲಿ ಎಂದು ಹೇಳುವುದು ಅವರಿಗಿದ್ದ ಮಾನ್ಯತೆಯನ್ನು ತಿಳಿಸುತ್ತದೆ. ಅಲ್ಲದೇ ಜನಸಮುದಾಯಗಳು ದೈವೀ ನಲೆಯಲ್ಲಿ ಲೌಕಿಕತೆಯ ಆಚೆ ಅಲೌಕಿಕತೆಯ ಸ್ವರ್ಗ–ನರಕ ಪರಿಕಲ್ಪನೆಯನ್ನು ಒಪ್ಪಿಕೊಂಡಿದ್ದು ರಾಜನನ್ನು ಪ್ರತ್ಯಕ್ಷ ದೈವೀಸಂಭೂತನಾದವನು, ದೈವೀಮೂಲದಿಂದ ಬಂದವನೆಂದು ಒಪ್ಪಿಕೊಂಡಿದ್ದವು.

ವಿಜಯನಗರದ ಪ್ರೌಢದೇವರಾಯನು ತನ್ನ ಆಸ್ಥಾನದಲ್ಲಿ ಕವಿತಾ ಪ್ರೌಢರಾದ ಕುಮಾರವ್ಯಾಸ, ಚಾಮರಸ ಇವರಿಬ್ಬರನ್ನು ಕರೆದು ಭಾರತವನ್ನು ಕನ್ನಡದಲ್ಲಿ ಬರೆಯಲು ಆಜ್ಞಾಪಿಸಲು, ಅವರಿಬ್ಬರು ಭಾರತವನ್ನು ಬರೆದರು. ಆದರೆ ವಿದ್ವಾಂಸರು ಚಾಮರಸನ ಕಾವ್ಯವನ್ನು ಕೊಂಡಾಡಲು ಕುಮಾರವ್ಯಾಸ ಚಿಂತಾಕ್ರಾಂತನಾಗಿ ತನ್ನ ಹೆಂಡತಿಗೆ ನಿಮ್ಮಣ್ಣನಾದ ಚಾಮರಸನ ಹೇಳಿದ ಕೃತಿಯನ್ನು ನೀನು ತಂದು ಸುಟ್ಟು ಬೊಟ್ಟಿಹೆ ನಾನು ಬಾಳುವೆನು, ಇಲ್ಲವೊಡೆ ಸಾವೆನು ಎನ್ನಲು ಅವಳು ಹಾಗೆಯೇ ಮಾಡಿ ಗಂಡನನ್ನು ಸಮಾಧಾನ ಪಡಿಸಿದಳು. ಚಾಮರಸನ ಕೃತಿ ನಾಶವಾಗಲು ಅವನು ಪ್ರಭುಲಿಂಗಲೀಲೆಯಂಥ ಬೇರೊಂದು ಗ್ರಂಥವನ್ನು ರಚಿಸಿ ದೊರೆಯ ಸಭೆಯಲ್ಲಿ ಓದಲು, ವಿದ್ವಾಂಸರೆಲ್ಲರೂ ಮೆಚ್ಚಿದರು. ದೊರೆ ಆನೆಯ ಮೇಲೆ ಮೆರವಣಿಗೆ ಮಾಡಿಸಿದನು. ಮೊದಲು ಕುಮಾರವ್ಯಾಸನಿಗೆ ಕನಾಕಾಭಿಷೇಕ ಮಾಡುವುದಾಗಿ ಹೇಳಿದ. ಕುಮಾರವ್ಯಾಸನ ಭಾರತವು ಸತ್ತವರ ಕಥೆ, ನನ್ನ ಗ್ರಂಥವು ಸಾಯದ ಪುಣ್ಯ ಪುರುಷರ ಚರಿತೆ ಎಂದು ಹೇಳಲು ದೊರೆ ನಿಜವೆಂದು ತಿಳಿದು ಭಾರತವನ್ನು ನಿಸ್ಸಾರಗೈದ ಕುಮಾರವ್ಯಾಸನಿಗೆ ಕನಕಸ್ನಾನವನ್ನು ಪರಿಹರಿಸಿ ಚಾಮರಸನಿಂದ ವೀರಶೈವ ದೀಕ್ಷೆಯನ್ನು ಪಡೆದುಕೊಂಡನು. ಅಲ್ಲದೇ "ಲೀಲಾವತಿ ಪ್ರಬಂಧವಂ ಸುಡಿಸಿ ಪ್ರಭುಲಿಂಗಲೀಲೆಗೆ ತಿಲಕವಿಟ್ಟರ್" ಎಂಬ ಮಾತು ಒಂದು ಧರ್ಮದ ಕೃತಿ ರಚನೆಯಾದರೆ ಇನ್ನೊಂದು ಧರ್ಮದ ಕೃತಿಯ ವಿನಾಶಗೊಳಗಾದ ಧಾರ್ಮಿಕ ಸಂಘರ್ಷವನ್ನು ಹೇಳುತ್ತದೆ. ಅಸ್ತಿತ್ವ ಉಳಿಸಿಕೊಳ್ಳಲು ಒಂದು ಧರ್ಮದ ಕೃತಿಗಳ ಇನ್ನೊಂದು ಧರ್ಮದ ಕೃತಿಗಳ ನಾಶಕ್ಕೂ ಕಾರಣವಾಯಿತು.

ನೇಮಿಚಂದ್ರ ತನ್ನ ಲೀಲಾವತಿ ಕೃತಿಯಲ್ಲಿ ಜೈನ ಧರ್ಮದ ತತ್ವ ಸಿದ್ಧಾಂತವನ್ನು ಹೇಳಿದ್ದು. ಲೀಲಾವತಿ ಪ್ರಬಂಧವನ್ನು ಕುರಿತು ಬಾಹುಬಲಿ (ಸು ೧೫೬೦) ತನ್ನ ನಾಗಕುಮಾರಚರಿತೆಯಲ್ಲಿ ಕಾದಂಬರಿಯನ್ನು ಸುಡಿಸಿ ಇವನ ಲೀಲಾವತಿಗೆ ಕಪ್ಪನಿಡಿಸಿದಂ ವಿಷಯವನ್ನು ಹೇಳುತ್ತಾನೆ.

ಸುಡಿಸಿ ಕಾದಂಬರಿಯನು ಲೀಲಾವತಿ
ಗಿಡಿಸಿ ಕಪ್ಪನು ಕೀರ್ತಿ ಜಗವ!

ಎಡೆಹೊಂಡ ನೇಮಿಚಂದ್ರನ ಚಮತಕೃತಿ ಬಂ।
ದೆಡೆಗೊಳ್ಳುದೆನ್ನ ಚಿತ್ತದೊಳು॥[೨೨]

ದೇವಚಂದ್ರನು (೧೮೩೮) ತನ್ನ ರಾಜಾವಳಿ ಕಥೆಯಲ್ಲಿ ಕಾದಂಬರಿಯೆಂಬ ಶೃಂಗಾರ ಕಾವ್ಯವಂ ಮಾಡಿ ದೊರೆಯಂ ಮೆಚ್ಚಿಸಿ ಆನೆಯ ಮೇಲೇಮಿಬರ್ಪರಲ್ಲಿ ನೇಮಿಚಂದ್ರಕವಿ ತಡೆದು ಶೃಂಗಾರಮಪ್ಪ ಲೀಲಾವತಿ ರಚಿಸಿ ಸಭೆಯೊಳೋದಿಸೆ ಮೆಚ್ಚಿ ಕಾದಂಬರೀ ಕಾವ್ಯ ಪುಸ್ತಕಮಂ ಸುಟ್ಟು ಲೀಲಾವತಿಗೆ ಕಪ್ಪನಿಡುವಲ್ಲಿ ಕೇಳಿಕೊಂಡು ಮೊದಲೊಂ ಓಲೆಯಂ ಸುಡಿಸಿ ಲೀಲಾವತಿಗೆ ಕಪ್ಪ ನಿಡಿಸಿದರ್ ಎಂದು ಹೇಳಲಾಗಿದೆ. ಇದು ಸ್ವಧರ್ಮದ ರಕ್ಷಣೆ ಪರಧರ್ಮದ ವಿನಾಶಕ್ಕೆ ಕಾರಣವಾದ ಧಾರ್ಮಿಕ ಅತೀಶಯಿಕರಣ ವೆಂದು ಹೇಳಬಹುದು.

ದೊಡ್ಡಯ್ಯನು (ಸು ೧೫೫೦) ತನ್ನ ಚಂದ್ರಪ್ರಭಚರಿತದಲ್ಲಿ
ಬಾಣ ಪೇಮಿದ ಕಾದಂಬರಿ ಕಾವ್ಯವ।
ಕ್ಷೋಣೆಯಮಿಕೆಯೊಳು ಸುಡಿಸಿ
ಮಾಣದ ಲೀಲಾವತಿಗೆ ಕಪ್ಪನಿಡಿಸಿದ
ಜಾಣ ನೇಮಿಯ ಬಲಗೊಂಬೆ[೨೩]

ನಯಸೇನನು (ಕ್ರಿ.ಶ. ೧೧೧೨) ಸಾಹಿತ್ಯಕ್ಕಿಂತ ಧರ್ಮ ಪ್ರಸಾರದ ಮನೋಧರ್ಮವುಳ್ಳವನಾಗಿದ್ದನು. ಈತನ ಬರವಣಿಗೆಯಲ್ಲಿ ಭಾಷೆ ಜನರಿಗೆ ಅರ್ಥವಾಗುವ ಜನವಾಣಿಯಾಯಿತು. ಈ ಬದಲಾವಣೆಯನ್ನು ಸಮರ್ಥಿಸಿಕೊಳ್ಳುವಂತೆ ಅವನು "ಪೊಸಗನ್ನಡದಿಂ ವ್ಯಾವರ್ಣಿಸುವೆಂ" ಎಂದು ಹೇಳುತ್ತಾ ಕನ್ನಡದಲ್ಲಿ ಚಿಂತಿಸಿ ಕನ್ನಡದಲ್ಲಿ ಬರೆಯಲಿ ಸಂಸ್ಕೃತದಲ್ಲಿ ಏಕೆ ಬರೆಯುವದು ಎಂದು ಪ್ರಶ್ನಿಸುತ್ತಾನೆ. ನಯಸೇನ ತನ್ನ ಧರ್ಮಾಮೃತ ಕೃತಿಯಲ್ಲಿ ೧೪ ಆಶ್ವಾಸಗಳಿದ್ದು ಜೈನಧರ್ಮ ಕುರಿತು ವಿವರಿಸುವ ೧೪ ಕಥೆಗಳನ್ನು ಹೇಳಿದ್ದಾನೆ.

ಧರ್ಮ ಎಂದರೆ ಹೆಂಡ ಮಾರುವ ಧರ್ಮ, ಕೊಲ್ಲುವ ಧರ್ಮ, ಲೂಟಿ ಮಾಡಿ ತಂದದ್ದನ್ನು ಹಂಚಿಕೊಳ್ಳುವ ಧರ್ಮ ಇಂಥವು ಧರ್ಮವಾಗಲಾರದು ಎಂದು ಹೇಳುತ್ತಾನೆ.

ಬ್ರಹ್ಮಶಿವ (ಕ್ರಿ.ಶ. ೧೧೦೦) ತನ್ನ ಕೃತಿಯಲ್ಲಿ "ಮತಿಗೆಟ್ಟು ಒರ್ವರನೊರ್ವರು ಎಚ್ಚರ್, ಇರಿದರ್, ಕೊಂದರ್ ಕೆಲರ್ ಬಂಧು ಸಂತತಿಯಂ" ಪಾತಕಕಥಾಳಾಪಗಳು ಎಂದು ಜರೆಯುತ್ತಾನೆ. 'ಇದುವೆ ಪರಸಮಯಿಗಳಂ ಮುದದಿಂ ಪಥಕ್ಕೆ ತರಲಾರ್ಪುದೆ ಎಂದಿದ್ದಾನೆ. ಬೇರೆ ಧರ್ಮದವರನ್ನು ಜೈನ ಧರ್ಮಕ್ಕೆ ತರುವುದು ತನ್ನ ಸುತ್ತಲಿದ್ದ ಅದರಲ್ಲೂ ಪ್ರಭಾವಶಾಲಿಗಳಾಗಿದ್ದ ಶೈವ ಮತ್ತು ವೈದಿಕ ಮತಗಳನ್ನು ಖಂಡಿಸುವುದು ಅವನ ಕೃತಿಯ ಮುಖ್ಯ ಉದ್ದೇಶವಾಗಿದೆ. ಆತ ಪ್ರಖರವಾಗಿ ವಿಷ್ಣುವಿನ ಅವತಾರಗಳನ್ನು ಟೀಕಿಸುತ್ತಾನೆ. ಮೀನಾಗಿ, ವಾನರನಾಗಿ, ಕೇಸರಿಯಾಗಿ, ಹಂದಿಯಾಗಿ, ಕೂರ್ಮ, ವಾಮನ ರಾಮನಾಗಿ ಎತ್ತಿದ ಅವತಾರಗಳೆಲ್ಲವೂ ಕೊಲ್ಲುವುದಕ್ಕಾಗಿ. ಹೊರತು ಮಾನವರ ರಕ್ಷಣೆಗಾಗಿ ಅಲ್ಲ. ತಾನು ಕೌರವರನ್ನು ಕೊಲ್ಲಲಾಗದೆ ಪಾಂಡವರಿಂದ ಕೊಲ್ಲಿಸಿದ್ದು ಯಾವ ಶೌರ್ಯ? ಪಶುಗಳನ್ನು ವಂದಿಸುವವರು ಪಶುವಲ್ಲಿ

ದೇವರ ರೂಪ ಹರಿಹರರು, ಸುರನರರು, ಮುನಿಗಳು ಇರುವುದಾದರೆ ಅವರು ದೇವರೇ ಎಂದು ವ್ಯಂಗ್ಯವಾಡುತ್ತಾನೆ. ಹರಿಹರರಲ್ಲಿ ಬೇಧವಿಲ್ಲ ಎನ್ನುವರು ಶೈವರು ವೈದಿಕರನ್ನು ವೈದಿಕರು ಶೈವರನ್ನು ದೂಷಿಸುವದು ಸರಿಯೆ ಎಂದೆಲ್ಲಾ ಪ್ರಶ್ನಿಸುತ್ತಾ ಹೋಗುತ್ತಾನೆ.

ಗುರುಗಳನ್ನು ಸೋದರರನ್ನು ಮಕ್ಕಳನ್ನು ಕೊಲ್ಲಲಾರೆ ಎಂದ ಅರ್ಜುನಿಗೆ ಕೃಷ್ಣ ತತ್ವ ಹೇಳಿ ಕೊಲ್ಲಲಾರೆ ಎಂದರು ಕೊಲ್ಲಿಸುವುದು ಮಹಾಪುರುಷರಾದ ಆಚಾರ್ಯರನ್ನು ರಾಜರನ್ನು ಕೊಂದರೆ ನಿನಗೆ ದೋಷವಿಲ್ಲ ಎಂದು ಸುಳ್ಳು ಹೇಳುವದು ತತ್ವವೆಂದು ಭಗವದ್ಗೀತೆಯ ಕೃಷ್ಣನ ಉಪದೇಶವೆಂದು ಓದುವವರು ವ್ಯಾಸ, ವಾಲ್ಮೀಕಿಗಳು ಹೇಳಿದ ಸುಳ್ಳು ಕಥೆಗಳು ಇತಿಹಾಸವೆಂದಾಗಲೀ ಶ್ರೇಷ್ಠ ಮಹಾಕಾವ್ಯಗಳೆಂದು ತಿಳಿಯುವ ಅಗತ್ಯವಿಲ್ಲ ಎನ್ನುವ ಅಂಶಗಳನ್ನು ವ್ಯಕ್ತಪಡಿಸುತ್ತಾನೆ. "ಇರಿದವನನ್ನು ಇರಿಯಬೇಕೆಂದು ಹೇಳುವ ವೇದವನ್ನು ಓದಿದವರ ಶಾಸ್ತ್ರ ಹೀಗಿದೆ. ಎಷ್ಟೇ ದೊಡ್ಡ ಪಾಪ ಕೃತವನ್ನು ಮಾಡಿದರೂ ಬಾಹ್ಮಣರಿಗೆ ದೀನರಿಗೆ ವಸ್ತ್ರ ಒಡವೆ ಆಹಾರಧಾನ್ಯಗಳನ್ನು ದಾನ ಮಾಡಿದರೆ ಪಾಪದ ದೋಷ ಪರಿಹಾರವೆಂದು ಹೇಳುವುದು ಪುರೋಹಿತಶಾಹಿಗಳು ಧರ್ಮದ ಹೆಸರಿನಲ್ಲಿ ಪ್ರಭುತ್ವವನ್ನು ತಮ್ಮ ಅಧೀನದಲ್ಲಿ ಇರಿಸಿಕೊಂಡು ಬಂದಿರುವುದು ಕಾಣಬಹುದು.

ವೈದಿಕ, ಶೈವ ಅದರಲ್ಲೂ ಲಕುಲೀಶ ಪಾಶುಪತರನ್ನು ಅವರ ಧಾರ್ಮಿಕ ಆಚರಣೆ, ದೈವಗಳನ್ನು ತನ್ನ ವಿಡಂಬನೆಗೆ ಒಳಪಡಿಸಿ ವ್ಯಂಗ್ಯೋಕ್ತಿಗಳಿಂದ ಅವರನ್ನು ಅಲ್ಲಗಳೆಯುವ ಕೆಲಸವನ್ನು ಮಾಡಿದ್ದಾನೆ. ಅವನು ಹೊರಟಿರುವುದೇ ಅನ್ಯ ಸಮಯಗಳನ್ನು ಹೀಗಳೆದು, ತನ್ನ ಧರ್ಮವನ್ನು ಸರ್ವಶ್ರೇಷ್ಠವಾದದ್ದೆಂದು ಹೇಳಿದ್ದಾನೆ.

ವೈದಿಕ ವಿರೋಧ ಎಂಬುದನ್ನು ಉಚ್ಚಜಾತಿಗಳ ವಿರುದ್ಧವಾದ ಚಿಂತನೆ ಎಂಬ ಸಿಮೀತ ಅರ್ಥದಲ್ಲಿ ಗ್ರಹಿಸುವುದಾದರೆ, ಇದಕ್ಕೆ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಸುದೀರ್ಘ ಚರಿತ್ರೆಯಿದೆ. ವೈಚಾರಿಕ ಪರಂಪರೆಯನ್ನು ತೆಗೆದುಕೊಂಡ, ವಚನಕಾರರಿಂದ ಹಿಡಿದು ಆಧುನಿಕ ಕಾಲ ಕುವೆಂಪು ಶ್ರೀರಂಗ, ಶಂಬಾ ಜೋಶಿ, ಪಂಡಿತ ತಾರಾನಾಥ, ತೇಜಸ್ವಿ ಲಂಕೇಶ ದೇವನೂರ ಅವರ ತನಕ ನಮ್ಮ ಬಹುತೇಕ ದೊಡ್ಡ ಚಿಂತಕರು ವೈದಿಕ ವಿರೋಧಿಗಳು.[೨೪]

ಅಲ್ಲಮಪ್ರಭು ತನ್ನ ಅನೇಕ ವಚನಗಳಲ್ಲಿ ನಾಥ ಸಂಪ್ರದಾಯದ ಹಠಯೋಗವನ್ನು, ಕಾಪಾಲಿಕರ ಆಚರಣೆಗಳನ್ನು ಖಂಡಿಸುತ್ತಾ ಶುದ್ಧ ಸಾತ್ವಿಕ ಶಿವಯೋಗವನ್ನು ಪ್ರತಿಪಾದಿಸುತ್ತಾನೆ. "ಹಠಯೋಗ ಲಂಬಿಕೆ ಎಂದು ಆಕುಂಚನವೆಂದು ವಜ್ರ ಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ ಇದು ಪೂರ್ವನವನಾಥಸಿದ್ಧರ ಮತ್ತೋಕ್ತವೆಂದು ಕಾಪಾಲಿಕಾರಚರಣೆಯನಾಚರಿಸುವರೆಲ್ಲ ಶರಣರು, ವೇಣು ತಲೆಯೊಗಳಗಣ ವಾತಪಿತ್ತ ಶ್ಲೇಷ್ಮವ ತೆಗೆದು ಅಮೃತವೆಂದು ಬಿನುಗು ದೃಷ್ಟವ ತೋರುವರಲ್ಲ ಶರಣರು. ೧೮ ವಚನ ಗ್ರಂಥ ರಕ್ಷಣೆ ಒಟ್ಟೊಟಿಗೆ ಸಂರಕ್ಷಣೆಗೊಳ್ಳುತ್ತಾ ಬಂದಿವೆ. ಧರ್ಮಕ್ಕೆ ಪೂರಕವಾಗಿ ಗ್ರಂಥಗಳು ರಚನೆಗೊಂಡವು. ಗ್ರಂಥಗಳ ನೆಲೆಯಲ್ಲಿ ಧರ್ಮದ ಆಚಾರ–ವಿಚಾರಗಳನ್ನು ತತ್ವ ಸಿದ್ಧಾಂತಗಳ ಮೇಲೆ ಬೆಳಕನ್ನು ಚೆಲ್ಲುತ್ತಾ ಬಂದಿವೆ. ಧರ್ಮದ ನೆಲೆಗಟ್ಟಿನಲ್ಲಿ ಗ್ರಂಥಗಳ ಸಂರಕ್ಷಣೆ, ಸಂವರ್ಧನೆ, ಸಂಗೋಪನೆ

ಕಾಲದಿಂದ ಕಾಲಕ್ಕೆ ನಡೆಯುತ್ತಾ ಬಂದಿದೆ. ಉದಾ: ೨೦ನೆಯ ಶತಮಾನದ ಆದಿಯಲ್ಲಿ ಲಿಂಗಾಯತ ಧರ್ಮದ ಧಾರ್ಮಿಕ ಸಾಂಸ್ಕೃತಿಕ ಅಸ್ಮಿತೆಯನ್ನು ಬಿಂಬಿಸುವ ಫ.ಗು. ಹಳಕಟ್ಟಿಯವರು ಶಿವಶರಣರ ವಚನಗಳನ್ನು ಸಂಪಾದಿಸಿ ಪ್ರಕಟಿಸಿದ 'ವಚನಶಾಸ್ತ್ರಸಾರ; ದಂತಹ ಕೃತಿಗಳು ಹುಟ್ಟಿಕೊಂಡವು.[೨೫]

ಶ್ರೀ ಗುರು ಬಸವಲಿಂಗಾಯನಮಃ ಶ್ರೀ ವೀತರಾಗಾಯ ನಮಃ। ಶ್ರೀ ಕಡಲೇಬ್ಬಾಗುದ್ದಿನ ಆಂಜನೇಯ ನಮಃ। ಒಬ್ಬಾಳು ಗುರುಬಾಳಿ ಗುರುವಿನ ಪಾದವೇಗತಿ। ಆದವಾನಿಯಲ್ಲಮ್ಮನ ಪಾದವೇ ಗತಿ। ಇತ್ಯಾದಿ ಉಲ್ಲೇಖಗಳು ಲಿಪಿಕಾರನ ಇಷ್ಟದೈವ ಮತ್ತು ಗುರು ಪರಂಪರೆಯನ್ನು ಹಾಗೂ ಧಾರ್ಮಿಕ ಮನೋಭಾವವನ್ನು ಹೇಳುತ್ತವೆ.[೨೬]

ಜೀವನದಲ್ಲಿ ಆತ್ಮಸ್ಥೈರ್ಯದಿಂದ ಬದುಕನ್ನು ಸಾಗಿಸುವ ನೆಲೆಯಲ್ಲಿ ಧಾರ್ಮಿಕ ಗ್ರಂಥಗಳ ರೂಪದಲ್ಲಿ ನೋಡುವ ಹಸ್ತಪ್ರತಿ ಗ್ರಂಥಗಳು ಸರ್ವಕಲ್ಯಾಣಕ್ಕಾಗಿ ರೂಪಗೊಂಡಂತೆ ಕಾಣುತ್ತವೆ. ಗ್ರಂಥಗಳ ಸಂಗ್ರಹ, ಸಂರಕ್ಷಣೆ, ಸಂವರ್ಧನೆ, ಪುನರುತ್ಪಾದನೆ ನೆಲೆಗಟ್ಟಿನಲ್ಲಿ ಧಾರ್ಮಿಕ ಮನೋಭಾವನೆ ಪ್ರಭಾವಬೀರಿವೆ. ಧಾರ್ಮಿಕತೆ ಮನೋಭಾವನೆಯನ್ನು ಮನೋವೈಜ್ಞಾನಿಕವಾಗಿ ನೋಡುವುದರಿಂದ ಧಾರ್ಮಿಕವಾಗಿ ಗ್ರಂಥ ಸಂರಕ್ಷಣೆಯ ಹಿಂದೆ ಇರುವ ಕರ್ಮಸಿದ್ಧಾಂತ, ನಂಬಿಕೆ, ಮನೋಸ್ಥೈರ್ಯ, ದೃಢತೆಯಂತಹ ವಿಚಾರಗಳು ಧಾರ್ಮಿಕತೆಯಂಥಹ ಸೃಜನಶೀಲ ವಿಚಾರಗಳು ಗಮನಾರ್ಹವಾದಂತವು.

ಶರಣರ ಆಂದೋಲನದ ಹಿನ್ನೆಲೆಯಲ್ಲಿ ನಾಡಿನ ಹಲವೆಡೆ ಹರಡಿಕೊಂಡಿರಬಹುದಾದ ವಚನ ಸಾಹಿತ್ಯದ ಹಸ್ತಪ್ರತಿಗಳು, ಅವುಗಳ ಆದರ್ಶದಲ್ಲಿ ರಚನೆಗೊಂಡ ಹರಿಹರ-ರಾಘವಾಂಕ ಮೊದಲಾದ ವೀರಶೈವ ಕವಿಗಳ ಕೃತಿಗಳು, ವಚನಸಾಹಿತ್ಯದ ಪುನರುಜ್ಜೀವನ ಕಾಲಾವಧಿಯಲ್ಲಿ ರಚನೆಗೊಂಡ ಸಂಪಾದನೆ-ಸಂಕಲನ ಹಾಗೂ ಸಮಯಿಕ ಗ್ರಂಥಗಳು ಅನೇಕ ಹಸ್ತಪ್ರತಿಗಳ ಜನನಕ್ಕೆ ಹಾಘೂ ಸಂರಕ್ಷಣೆಗೆ ಕಾರಣೀಭೂತವಾದವು. ಈ ಕಾಲ ಜನಸಮ್ಮುಖವಾದ ಕಾಲವಾಗಿರುವುದರಿಂದ ಹೆಚ್ಚು ಗ್ರಂಥಗಳು ಸಂಗ್ರಹ ಸಂರಕ್ಷಣೆ ಸಂವರ್ಧನೆಯನ್ನು ಹೊಂದುತ್ತಾ ಬಂದವು. ಸೂಕ್ತಿ ಸುಧಾರ್ಣವ, ಶಬ್ದಮಣಿದರ್ಪಣಗಳಂತಹ ಸಂಕಲನ ಗ್ರಂಥಗಳು ಶೂನ್ಯಸಂಪಾದನೆಗಳಂತಹ ಸಂಪಾದನೆ ಗ್ರಂಥಗಳು ಧಾರ್ಮಿಕ ನೆಲೆಯಲ್ಲಿ ಸಂರಕ್ಷಣೆಗೊಂಡವು.

ಅನಕ್ಷರಸ್ಥರಿದ್ದರೂ, ಬರವಣಿಗೆ ಬರದಿದ್ದರೂ ಚೀಟಿ ಬರೆದು, ತಾಯತ ಬರೆದು ಮುಂದಿರುವ ಹಸ್ತಪ್ರತಿಯನ್ನು ತೆಗೆದು ನೋಡಿದಂತೆ ಅಭಿನಯಿಸುವ ಸಂಗತಿಗಳು ಬರವಣಿಗೆಗೆ ಇದ್ದ ಪಾವಿತ್ರ್ಯತೆಯನ್ನು ಅದರ ದೈವೀ ನೆಲೆಗಳನ್ನು ಮನಸ್ಸಿಗೆ ತರುತ್ತದೆ. ಓರಿಸ್ಸಾದ ಕ್ರ್ಯಾಪ್ಟ್ ವಿಲೇಜಿನಲ್ಲಿ ಇಂದಿಗೂ ರೋಗರುಜಿನಗಳಿಗೆ ತಾಳೆಗರಿಯಲ್ಲಿ ಚೀಟಿ ಬರೆದು ಕಟ್ಟುವ, ಪೀಡೆ ಪರಿಹಾರಾರ್ಥವಾಗಿ ತಾಳೆಗರಿಯನ್ನು ಉಪಯೋಗಿಸುವ ನೆಲೆಗಳು ಅದರ ದೈವೀಸ್ವರೂಪವನ್ನೇ ಮನಗಾಣಿಸುತ್ತವೆ. ರೋಗಕ್ಕೆ ಮತ್ತು ಈ ಕ್ರಮಕ್ಕೆ ಸಂಬಂಧವಿರದಿದ್ದರೂ ಇದೊಂದು ಭಾವನಾ ಪ್ರಪಂಚವಾಗಿ ರೂಪಗೊಂಡಿದೆ.[೨೭] ಹಸ್ತಪ್ರತಿಗಳು ದೈವೀ ಸ್ವರೂಪದಡಿಯಲ್ಲಿ ಧಾರ್ಮಿಕ ಪಾವಿತ್ರ್ಯತೆಯನ್ನು ಹೊಂದಿವೆ. ಉದಾ: ಕೊಡೇಕಲ್ಲಿನಲ್ಲಿರುವ ಗ್ರಂಥವು

ದೇವರಸ್ವರೂಪವನ್ನು ಪಡೆದಿರುವುದು. ಹಾಗೆ ಬಿಜಾಪುರ ಜಿಲ್ಲೆಯ ತೊರವಿ ಗ್ರಾಮದಲ್ಲಿರುವ ಹಸ್ತಪ್ರತಿಗಳು ಅಮೀನಗಡದ ಪ್ರಭುಸ್ವಾಮಿ ಮಠದಲ್ಲಿರುವ ಹಸ್ತಪ್ರತಿ ಪೀಠಗಳು ಇಂಥ ಧಾರ್ಮಿಕ ಸಂಗ್ರಹ ಹಾಗೂ ಸಂರಕ್ಷಣೆಯ ಮಹತ್ವವನ್ನು ತಿಳಿಸುತ್ತವೆ. ಇವೆಲ್ಲಾ ಕನ್ನಡ ಹಸ್ತಪ್ರತಿಗಳು ಧಾರ್ಮಿಕ ನೆಲೆಯಲ್ಲಿ ಸಂರಕ್ಷಣೆಗೊಳ್ಳುತ್ತಾ ಬಂದಿವೆ ಎಂಬುದಕ್ಕೆ ಉತ್ತಮ ಉದಾಹರಣೆ.

**ಅಡಿಟಿಪ್ಪಣಿಗಳು**

೧. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪುಟ.೧೧೪; ೧೯೯೨

೨. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪುಟ.೩೦; ೨೦೦೬

೩. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪುಟ.೧೧೪: ೧೯೯೨

೪. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪುಟ.೩೦; ೨೦೦೬

೫. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪುಟ.೧೧೭; ೧೯೯೨

೬ ಅದೇ, ಪುಟ, ೧೧೭; ೧೯೯೨

೭ ಅದೇ, ಪುಟ, ೧೧೮; ೧೯೯೨

೮. ಅದೇ, ಪುಟ, ೧೧೮: ೧೯೯೨

೯. ಅದೇ, ಪುಟ, ೧೨೦; ೧೯೯೨

೧೦. ಅದೇ, ಪುಟ, ೧೨೧; ೧೯೯೨

೧೧. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು: ಪುಟ.೩೦; ೨೦೦೬

೧೨. ಕೃಷ್ಣರಾಯ ಅ.ನ, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ: ಪುಟ.೪; ೧೯೮೧

೧೩. ಅದೇ, ಪುಟ. ೪; ೧೯೮೧

೧೪. ಅದೇ, ಪುಟ.೧೦; ೧೯೮೧

೧೫. ಅದೇ, ಪುಟ.೧೧; ೧೯೮೧

೧೬. ಆರ್. ನರಸಿಂಹಚಾರ್ಯ, ಕರ್ಣಾಟಕ ಕವಿಚರಿತೆ ಸಂಪುಟ.೧, ಪುಟ.೨೯೮; ೧೯೬೧

೧೭. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ: ಪುಟ.೧೨೫; ೧೯೯೨

೧೮. ಅದೇ, ಪುಟ, ೧೨೫; ೧೯೯೨

೧೯. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು: ಪುಟ.೧೨೫; ೨೦೦೬

೨೦. ಎಂ.ವಿ. ಸೀತಾರಾಮಯ್ಯ (ಸಂ), ಶ್ರೀವಿಜಯ ಕೃತ ಕವಿರಾಜಮಾರ್ಗಂ: ಪುಟ.೯೫;೨೦೧೧.

೨೧. ಆರ್. ನರಸಿಂಹಚಾರ್ಯ, ಕರ್ಣಾಟಕ ಕವಿಚರಿತೆ ಸಂಪುಟ.೧: ಪುಟ.೨೯೨; ೧೯೬೧

೨೨. ಸಿ. ವೀರಣ್ಣ; ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ಮಧ್ಯಕಾಲೀನ ಸಾಹಿತ್ಯ: ಪುಟ.೩೬; ೨೦೧೧

೨೩. ಅದೇ, ಪುಟ.೩೬; ೨೦೧೧

೨೪. ರಹಮತ್ ತರೀಕೆರೆ, ಕನ್ನಡ ಸಂಶೋಧನೆ ತಾತ್ವಿಕ ವಿಚಾರ: ಪುಟ.೯೨; ೨೦೦೮

೨೫. ಷಣ್ಮುಖಯ್ಯ ಅಕ್ಕೂರ ಮಠ, ವಚನ ಸಾಹಿತ್ಯ ವಿವೇಚನೆ: ಪುಟ.೭೦; ೧೯೯೩

೨೬ ವೀರೇಶ ಬಡಿಗೇರ, ಹಲಗೆ ಬಳಪ: ಪುಟ.೩೭; ೨೦೦೫

೨೭ ಅದೇ, ಪುಟ.೩೫; ೨೦೦೫



## ಅಧ್ಯಾಯ ಐದು

# ಸಂರಕ್ಷಣೆಯ ಸಾಂಸ್ಕೃತಿಕ ನೆಲೆಗಳು

೫.೧. ಜ್ಞಾನಾರ್ಜನೆಗಾಗಿ
೫.೨. ದಾನಕ್ಕಾಗಿ
೫.೩. ಕರ್ಮೋಪಶಮನಕ್ಕಾಗಿ
೫.೪. ಆರೋಗ್ಯ ಭಾಗ್ಯಕ್ಕಾಗಿ
೫.೫. ಜ್ಞಾನ ರಕ್ಷಣೆಗಾಗಿ
೫.೬ ವಂಶಾಭಿವೃದ್ಧಿಗಾಗಿ
೫.೭. ಗಂಡು ಸಂತಾನಕ್ಕಾಗಿ
೫.೮. ಪಾಪ - ಪುಣ್ಯ
೫.೯. ಸಕಲೈಶ್ವರ್ಯ
೫.೧೦. ಸ್ವಪ್ರಯೋಜನ ಪರಪ್ರಯೋಜನಕ್ಕಾಗಿ
೫.೧೧. ಇನ್ನಿತರ ಉದ್ದೇಶಗಳಿಗಾಗಿ
೫.೧೨. ಸಂರಕ್ಷಣೆ ಮತ್ತು ಬಳಕೆ ಸಂಸ್ಕೃತಿ

ಕನ್ನಡ ಹಸ್ತಪ್ರತಿಗಳ ಸಂರಕ್ಷಣೆ, ಸಂವರ್ಧನೆ, ಸಂಗೋಪನೆ ಉತ್ಪಾದನೆಯಂತಹ ವಲಯದಲ್ಲಿ ವಿಸ್ತಾರಗೊಂಡು ಬಹುಮುಖಿ ಆಯಾಮದ ವಿಧಾನದಲ್ಲಿ ಸಂರಕ್ಷಣೆಗೊಳ್ಳುವುದು ಸಾಂಸ್ಕೃತಿಕ ಸಂರಕ್ಷಣೆಯಾಗಿದೆ. ಸಾಂಸ್ಕೃತಿಕ ಸಂರಕ್ಷಣೆ ಎಂಬುದು ಒಂದು ಕೃತಿಯನ್ನು ವಿವಿಧ ಮಗ್ಗುಲಲ್ಲಿ ನೋಡುವ ಹಾಗೂ ಪರಿಪೂರ್ಣವಾದ ವಿಷಯದ ಕಡೆ ತಲುಪಿಸುವ ಅಧ್ಯಯನ ಮಾದರಿಯಾಗಿದೆ. ಕನ್ನಡ ಹಸ್ತಪ್ರತಿಗಳು ಯಾವ ವಿಷಯವನ್ನು ಒಳಗೊಂಡಿವೆ ಎನ್ನುವುದಕ್ಕಿಂತ ಯಾವ ವಿಷಯವನ್ನು ಬಿಟ್ಟಿಲ್ಲ. ಉದಾ: ವಿವಿಧ ಜ್ಞಾನಶಾಸ್ತ್ರಗಳಾದ ವೈದ್ಯಶಾಸ್ತ್ರ, ಕಲೆಗಳು(ಸಾಹಿತ್ಯ ಸಂಸ್ಕೃತಿ), ಶಿಲ್ಪಶಾಸ್ತ್ರ, ಜೋತಿಷ್ಯಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ಮೋಡಿ ಮುಂತಾದ ಶಾಸ್ತ್ರವಿಚಾರಗಳು ಹಸ್ತಪ್ರತಿಗಳ ಒಡಲೊಳಗಿವೆ. ಹೀಗಾಗಿ ಇಂಥ ಸಾಂಸ್ಕೃತಿಕ ಮಹತ್ವದ ಕೃತಿಗಳ ಸಂರಕ್ಷಣೆಯೂ ಜ್ಞಾನ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತ ಬಂದಿದೆ.

ಕನ್ನಡ ಹಸ್ತಪ್ರತಿಗಳೆಂದರೆ ಮನುಷ್ಯನ ಮನಸ್ಸಿನಲ್ಲಿ ಆಲೋಚನೆಗಳನ್ನು ಹುಟ್ಟುಹಾಕಬಲ್ಲ ಅರ್ಥಪೂರ್ಣ ಪಠ್ಯಗಳಾಗಿವೆ. ಅವು ಸಾಹಿತ್ಯ, ಧರ್ಮ, ಕಲೆ, ಆಚರಣೆಗಳ ಒಟ್ಟು ಮೊತ್ತವೂ ಹೌದು. ಅವುಗಳಿಗೆ ಸಮುದಾಯ ಪರಿಸರ, ಆರ್ಥಿಕ, ಸಾಮಾಜಿಕ, ರಾಜಕೀಯ ಪ್ರಕ್ರಿಯೆಗಳ ನೆಲೆಯಿದೆ.[೧] ಹೀಗಾಗಿ ಇಂಥ ಬಹುಮುಖಿ ಆಯಾಮವು ಕನ್ನಡ ಹಸ್ತಪ್ರತಿಗಳ ಸಾಂಸ್ಕೃತಿಕ ಮಹತ್ವವನ್ನೂ ಆ ಕಾಲದ ಜನರ ಬದುಕನ್ನು ಬಿಂಬಿಸುತ್ತದೆ. "ಹಸ್ತಪ್ರತಿಗಳ ಬಹುಮುಖ್ಯ ಗುಣವೇ ಪ್ರಯೋಜನಮುಖಿಯಾದದ್ದು. ಕವಿಗಳು ಹೇಳುವಂತೆ 'ಸಮಸ್ತ ಜಗಜ್ಜನೋಪಕಾರಾರ್ಥ ಪೇಳ್ದನ್'(ದುರ್ಗಸಿಂಹ ೧೦೩೧) 'ಸಕಲ ಜಗಜ್ಜನಹಿತಾರ್ಥವಾಗಿ ಪೇಳಿದೆನು'(ವೇದಾಮೃತ ಬರೆದ ಶ್ರೀಧರನೆಂಬ ಕವಿ ಕ್ರಿ.ಶ.೧೫೦೦) ಎಂದು ಕವಿಗಳು ಹೇಳುತ್ತಾರೆ. ಹೀಗೆ ಜನೋಪಕಾರಿಯಾಗಬೇಕೆನ್ನುವ ಬರಹದ ಆಶಯವೇ ಸಂಸ್ಕೃತಿ ಮುಖಿ ಸಂಕಥನದ ದೃಷ್ಟಿಯಿಂದ ಮುಖ್ಯವಾದಂಥದ್ದು ಕನ್ನಡ ಸಾಹಿತ್ಯ, ಸಂಸ್ಕೃತಿ ಹಸ್ತಪ್ರತಿಯ ಸಾಂಸ್ಕೃತಿಕ ನೆಲೆಗಟ್ಟನ್ನು ಒಳಗೊಂಡಿವೆ."[೨]

"ಹಸ್ತಪ್ರತಿಗಳ ಸಾಂಸ್ಕೃತಿಕ ಆಯಾಮವು ಹಸ್ತಪ್ರತಿಗಳ ಬಹುಮುಖಿ ನೆಲೆಗಳನ್ನು ಒಳಗೊಂಡಿವೆ. ಹಸ್ತಪ್ರತಿಗಳಲ್ಲಿ ಬಹುಮುಖ್ಯವಾಗಿ ಕಾಣುವ ಕೃತಿ–ಪ್ರತಿ, ಇಹ–ಪರ, ಸ್ವರ್ಗ–ನರಕ, ಪಾಪ–ಪುಣ್ಯ, ಧರ್ಮ–ಕರ್ಮ, ಆಯುರಾರೋಗ್ಯ–ಅನಿಷ್ಟ ಪ್ರವೃತ್ತಿ–ನಿವೃತ್ತಿ, ದೇಹ–ಆತ್ಮ, ಲೌಕಿಕ–ಅಲೌಕಿಕ, ವ್ಯಕ್ತಿ–ಸಮಾಜ,

ಗಂಡು–ಹೆಣ್ಣು, ಹಿಂಸೆ–ಅಹಿಂಸೆ, ಇಂದ್ರಿಯಾನುಭವ–ಜಿತೇಂದ್ರಿಯತ್ವ, ಜ್ಞಾನ–ಅಜ್ಞಾನ, ಕ್ರಿಯೆ–ಜಡ, ಪ್ರಭು–ಪ್ರಜೆ, ದೇಶಿ–ಮಾರ್ಗ ಇತ್ಯಾದಿ ದ್ವಂದ್ವಗಳು ಹಸ್ತಪ್ರತಿಗಳ ಬಹುರೂಪಿ ಪರಿಚಲನೆ ಮಾದರಿಗಳನ್ನು ಕಟ್ಟಿಕೊಡುತ್ತವೆ. ಈ ರೀತಿಯ ಶ್ರೇಷ್ಠ ಕನಿಷ್ಠದ ಜೊತೆಗೆ ಒಂದು ಸಾಂಸ್ಕೃತಿಕ ಆಯಾಮವನ್ನು ಕಟ್ಟಿಕೊಡುತ್ತದೆ"[೩] ಸಮಾಜ, ಸಮೂಹ, ಸಮುದಾಯ ಪಂಡಿತ ಪಾಮರರನ್ನು, ಕುಟುಂಬ, ಪರಿಸರ ಇತ್ಯಾದಿ ವಿಷಯಗಳನ್ನು ತಿಳಿಸುವ ಸಾಂಸ್ಕೃತಿಕ ನೆಲೆಗಟ್ಟಿನ ಕೇಂದ್ರವಾಗಿವೆ.

ಸಮುದಾಯ ಪ್ರಧಾನವಾದ ಶ್ರಮಿಕ ನೆಲೆ ಹಸ್ತಪ್ರತಿ ಸಂಸ್ಕೃತಿಗಿದೆ. ಹಸ್ತಪ್ರತಿಗಳಂತಹ ಗ್ರಂಥಗಳಿಗೆ ಬೇಕಾಗುವ ಬರಹ ಸಾಮಗ್ರಿಗಳ ತಯಾರಿಕೆ, ಸಂಗ್ರಹ ಸಂರಕ್ಷಣೆ ಸಂವರ್ಧನೆಯಲ್ಲಿ ಬಹುಜನರು, ಪಾಲಗೊಂಡು ಸಂರಕ್ಷಿಸುತ್ತಾ ಬಂದಿದ್ದಾರೆ. ಉದಾ: ಹಸ್ತಪ್ರತಿಗಳ ಭೌತಿಕ ಸ್ವರೂಪವಾದ ಹೊದಿಕೆ, ರಂಧ್ರ, ಅಳತೆ, ದಾರ, ಅಕ್ಷರ, ಬಣ್ಣ, ಲಿಪಿಕರಣದಂತಹ ಕೆಲಸಗಳನ್ನು ನಿರ್ವಹಿಸುವವರು ಅಕ್ಷರಕೇಂದ್ರದಾಚೆಯಿರುವ ಬಹುಸಂಖ್ಯಾತ ಸಮುದಾಯಗಳು. ಇವರು ಗ್ರಂಥ ಸಂರಕ್ಷಣೆಯಲ್ಲಿ ಸಾಮುದಾಯಿಕವಾಗಿ ಪಾಲ್ಗೊಳ್ಳುತ್ತಿದ್ದರು. ಕೇಂದ್ರಿತದಾಚೆಯಿರುವ ಬಹುಸಂಖ್ಯಾತ ಪಾಮರಳೇ ಸಮುದಾಯಗಳ ಗ್ರಂಥ ಸಂರಕ್ಷಣೆಯನ್ನು ಸಮರ್ಥ ರೀತಿಯಲ್ಲಿ ಬದುಕಿನ ಜೊತೆ ಜೊತೆಗೆ ಮಾಡಿಕೊಳ್ಳುತ್ತಾ ಬಂದಿದ್ದಾರೆ.

ಸಾಂಪ್ರದಾಯಬದ್ಧವಾಗಿ ಕೆಲವು ಆಚರಣೆಗಳು ಹಸ್ತಪ್ರತಿಗಳ ಸಂರಕ್ಷಣೆ ಮಾಡುತ್ತಾ ಬಂದಿವೆ. ಬಾರ್ಬೋಸಾ ಬರೆಯುವ ಮೊದಲು ಗರಿಯ ಮೂಲೆಯನ್ನು ಕೊಯ್ದು ಆ ತುಂಡಿನ ಮೇಲೆ ದೇವರು ಹೆಸರು ಬರೆದು ಒಗೆಯುತ್ತಾರೆ ಎಂದು ತಿಳಿಸುತ್ತಾನೆ. ಮನೂಚಿಯು ಹೆಣ್ಣು ಋತುಮತಿಯಾದ ಸುದ್ದಿಯನ್ನು ಅರಿಸಿಣ ಹಚ್ಚಿದ ತಾಳೆಯ ಮೇಲೆ ಬರೆದು ತಿಳಿಸುತ್ತಾರೆ ಎನ್ನುತ್ತಾನೆ. ಈಗಲೂ ವೀರಶೈವ ವ್ಯಕ್ತಿಯ ಅಂತ್ಯಕ್ರಿಯಯ ಸಂದರ್ಭದಲ್ಲಿ ಮಂತ್ರಾಕ್ಷರಗಳನ್ನು ಗರಿಯ ಮೇಲೆಯೇ ಬರೆದು ಸಮಾಧಿಯಲ್ಲಿಡುವುದನ್ನು ಇಲ್ಲಿ ನೆನೆಯಬಹುದು.

"ಕೃತಿಯೊಂದರ ಪ್ರಸರಣಕ್ಕೆ ಲಿಪಿಕಾರರು, ಅಭ್ಯಾಸಿಗಳು ಮೋಕ್ಷಾಪೇಕ್ಷಿಗಳು, ಧರ್ಮಾಧಿಕಾರಿಗಳು, ಧರ್ಮಾಭಿಮಾನಿಗಳು ರಾಜಕೀಯ ವ್ಯಕ್ತಿಗಳು, ಗಮಕಿಗಳು, ಪುರಾಣಿಕರು, ಪ್ರವಚನಕಾರರು, ಉಪಾಧ್ಯಾಯರು, ಅಭ್ಯಾಸಿಗಳು, ಬಹುಮುಖ್ಯ ಪಾತ್ರವಹಿಸಿದ್ದಾರೆ. ಈ ಎಲ್ಲ ಚಟುವಟಿಕೆಯ ಕೇಂದ್ರಬಿಂದುವೆಂದರೆ ಮಠ, ಬಸದಿ, ಮಂದಿರ, ಭವನ, ಮಹಾಮನೆ, ಅರಮನೆ, ಛತ್ರಗಳು. ಗ್ರಂಥದಾನ ವೆಂದರೆ ಅಭಯದಾನ ಭೈಷಜ್ಯ ದಾನಗಳಂತೆ ಪುಣ್ಯಕಾರ್ಯವಾಗಿತ್ತು".[೪] ಲಕ್ಕಣದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ

ಹರುಷದಿಂ ಶಿವತತ್ವ ಚಿಂತಾಮಣಿಯೆನಿಪ್ಪ
ವರಕೃತಿಯ ನೊರೆದಂಗೆ ಬರೆದಂಗೆ ವಾಚಿಪಂ
ಗುರುತರಾನಂದದಿಂದ ತಾತ್ಪರ್ಯಮಂ ವಿಸ್ತರಿಸಿ ಪೇಳ್ದವಂಗೆ
ಎರಡಿಲ್ಲದಿದಜಿ ತಾತ್ಪರ್ಯಮಂ ತಿಳಿದಗಿಹ
ಪರಮಸುಖಂಗಳು ಸಿದ್ಧಿಸುವುದೆಂದು ದೇಶೀಕನ ಚರಣಾಂಬುಜುಕೆ ಶರಣು[೫]

ಈ ಕೃತಿಯ ಬರೆದವಗೆ, ವಾಚಿಸಿದವಗೆ, ಶ್ರದ್ಧೆಯಿಂದ ಭಕ್ತಿಯಿಂದ ಕೇಳಿದವಗೆ ಇದರ ತಾತ್ಪರ್ಯ ತಿಳಿದವರು ಪರಮ ಪಾವನರು ಸುಖಿಗಳು ಎಂದು ಹೇಳುವುದು ಒಂದು ಕೃತಿಯ ಸಾಂಸ್ಕೃತಿಕ ಮುಖಾಮುಖಿಯನ್ನು ಹೇಳುತ್ತದೆ. ಪಂಡಿತ-ಪಾಮರರು ಒಟ್ಟಾಗಿ ಜ್ಞಾನದ ರಕ್ಷಣೆಯನ್ನು ಸಾಂಸ್ಕೃತಿಕ ನೆಲೆಯಲ್ಲಿ ಮಾಡುತ್ತಿದ್ದರು. ಹೀಗೆ ಬಹುಮುಖಿ ಆಯಾಮದಲ್ಲಿ ಕೃತಿಗಳು ಲಿಖಿತ ಮೌಖಿಕವಾಗಿ ಓದುಗ, ಹೇಳುಗ, ಕೇಳುಗ, ವಾಚನಕಾರರ ನೆಲೆಯಲ್ಲಿ ಸಂರಕ್ಷಣೆ ಮತ್ತು ಸಂವರ್ಧನೆ ಪಡೆಯುವುದರ ಜೊತೆಗೆ ಸಮುದಾಯದ ಒಳಗಡೆ ಪುನರುತ್ಪಾದನೆ ಪಡೆಯುತ್ತ ಬರುತ್ತಿದ್ದವು.

"..... ಕಂಚಿ ವೀರರ ಕೃತಿ ಮೊದಲೋದಿದವರಿಗೆ ವಂಚನಿಲ್ಲ ಕೇಳ್ವಮನುಜರಿಗೆ ಪಂಚಮುಖನು ಪಾಲಿಸಲಿ ಅಧಿಭವನು ರಕ್ಷಿಸಲಿ"[೬]

'....ಯೀ ಪ್ರತಿಗಳ ಬರದವರು, ಪುರಾಣದ ವೋದಿಸುವ ಅಣ್ಣಗಳ ಭದ್ರಳ್ಳಯ್ಯನ ಕುಮಾರ ರಾಜಪ್ಪನ ಮಗ ಭದ್ರಯ್ಯ ದೇವರು ಬರದ ಪ್ರತಿ"[೭]

ಕನ್ನಡ ಹಸ್ತಪ್ರತಿಗಳು ಇಂಥ ಜನಮುಖಿ ಧೋರಣೆಗಳನ್ನು ಒಳಗೊಂಡಿವೆ. "ಜೈನರ ಶಾಸ್ತ್ರದಾನ, ವೀರಶೈವರ ವಿದ್ಯಾದಾನ, ಗ್ರಂಥದಾನಗಳು ಪ್ರಮುಖ ಕಾರಣವಾಗಿದ್ದು ಎರಡು ಧರ್ಮಗಳು ತನ್ನ ಆರಂಭದ ಹಂತದಲ್ಲಿ ವ್ಯವಸ್ಥೆಯ ಜಡನೆಲೆಯನ್ನು ಮೀರಲು ಪ್ರಯತ್ನಿಸಿದವು. ಉದಾ: ವೀರಶೈವ ಧರ್ಮ ವೈಷ್ಣವ ಧರ್ಮದ ಆಚಾರ ವಿಚಾರಗಳನ್ನು ಧಿಕ್ಕರಿಸಿ ಶೈವ ಧರ್ಮದಿಂದ ವೀರಶೈವ ಧರ್ಮ ಬೇರ್ಪಟ್ಟಿತೆಂದರೆ ತಪ್ಪಾಗಲಾರದು. ಮಾನವರೆಲ್ಲ ಸಮಾನರು ಮಾನವ ಕಲ್ಯಾಣದ ಧೋರಣೆಗಳನ್ನು ತಮ್ಮ ಧರ್ಮಸಿದ್ಧಾಂತದಲ್ಲಿ ಅಡಗಿಸಿ ಸಮುದಾಯಿಕವಾಗಿ ಪಾಲ್ಗೊಳ್ಳಲು ಒಂದು ಸಾಂಸ್ಕೃತಿಕ ವೇದಿಕೆಯಾಗಿ ಅನುಭವ ಮಂಟಪವನ್ನು ನಿರ್ಮಾಣ ಮಾಡಿದರು. ಈ ಸಾಂಸ್ಕೃತಿಕ ವೇದಿಕೆಯಲ್ಲಿ ಅನುಭಾವಿಗಳು ತಮ್ಮ ನೋವು ನಲಿವುಗಳಲ್ಲದೇ ಸಮುದಾಯದ ನೋವುಗಳಿಗೆ ಸ್ಪಂದಿಸುವ ಅಭಿವ್ಯಕ್ತಿಯ ನೆಲೆಗಳನ್ನು ರೂಪಿಸಿಕೊಂಡರು. "ದಕ್ಷಿಣ ಭಾರತದ ಮಟ್ಟದಲ್ಲಿ ನಡೆದ ಭಕ್ತಿ ಚಳುವಳಿಗಳು ಧಾರ್ಮಿಕ ಬೋಧನೆಯ ಜನಪ್ರಿಯ ವಿಧಾನಗಳು ಕೂಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗೆ ಕಾರಣವಾದವು'.[೮]

'ಹರಿಕತೆ, ಶಿವಕತೆ, ಭಜನೆ, ತತ್ವಪದಗಳು ದೇವಸ್ತುತಿಗಳು ಇಂಥ ಓದುವ ಸಂಸ್ಕೃತಿಯ ವಿಸ್ತರಣೆಯಲ್ಲಿ ಬಹುಮುಖ್ಯ ಕಾರಣಗಳಾದವು. ಪ್ರವಚನ ಪುರಾಣದ ಮೂಲಕ ಲಿಖಿತ ಮತ್ತು ಮೌಖಿಕವಾಗಿ ಜನಸಾಮಾನ್ಯರು ಜ್ಞಾನದ ಸಂರಕ್ಷಣೆ, ಸಂವರ್ಧನೆಯಲ್ಲಿ ಪಾಲುಗೊಂಡು ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಕಟ್ಟಿಕೊಂಡರು. ನಮ್ಮ ಗ್ರಾಮೀಣ ಜನ ಅನಕ್ಷರಸ್ಥರಾಗಿದ್ದರು. ಆದರೆ ಅಜ್ಞಾನಿಗಳಾಗಿರಲಿಲ್ಲ. ಅಸಂಸ್ಕೃತರಂತೂ ಆಗಿರಲೇ ಇಲ್ಲ. ಕನ್ನಡ ಹಸ್ತಪ್ರತಿಗಳಲ್ಲಿ ಸಿಗುವಂತೆ "ಯಿದ ಬರೆದುವೋದಿ ಹಾಡಿ ಗುರುಮುಖದಿ ಕೇಳಿದವರು ನಿಜಮೋಕ್ಷವ ನಿರತಿಶಯ ಜ್ಞಾನವನೆಯ್ದಿ ನಿತ್ಯರಾಗಿ ಬಾಳುವರೆಂಬುದೀ ಶಾಸ್ತ್ರದ ಫಲಕೃತಿ" ವೀರಶೈವ ವೇದಾಂತ ಹೇಳುವ ಕರಣಹಸಿಗೆ (ಸಟೀಕು) ಯಲ್ಲಿ ಉಲ್ಲೇಖವಾದ ಈ ಮಾತು ಕನ್ನಡ ಕಾವ್ಯಗಳ ಜೀವಂತಿಕೆಯಿರುವುದೇ ಇಂಥ ಸಂವಹನ ಗುಣದಲ್ಲಿ"[೯] ಎಂಬುದನ್ನು ಒತ್ತು ಹೇಳುತ್ತದೆ. ಈ

ಸಂವಹನಾ ಕ್ರಮ ಸಮುದಾಯದಲ್ಲಿ ಕೃತಿ ಸದಾ ಚಲನಶೀಲವಾಗಿ ಇರಲು ಕಾರಣವಾಯಿತು. ಹಸ್ತಪ್ರತಿಗಳನ್ನು ಬದುಕಿನ ಅಂಗವಾಗಿ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಒಟ್ಟಾರೆ ಜನ ಸಮುದಾಯದ ಸಂಸ್ಕೃತಿಯಾಗಿ ನೋಡುವುದು ಅವರ ಸಾಂಸ್ಕೃತಿಕ ಮನೋಭಾವನೆಯನ್ನು ಹೇಳುತ್ತದೆ. ಹೀಗೆ ಬಹುಮುಖಿ ಆಯಾಮದಿಂದ ನೋಡುವುದರಿಂದ ಗ್ರಂಥ ಸಂರಕ್ಷಣೆ ಸಂವರ್ಧನೆ ಸಂಗೋಪನೆಯಲ್ಲಿ ಸಾಂಸ್ಕೃತಿಕ ಸಂರಕ್ಷಣೆ ನೆಲೆಗಳು ಮಹತ್ವ ಪಡೆಯುತ್ತವೆ. ಅಕ್ಷರ ಕೇಂದ್ರದಾಚೆಯಿರುವ ಬಹು ಸಮುದಾಯಗಳು ಗ್ರಂಥ ಸಂರಕ್ಷಣೆ ಸಂವರ್ಧನೆಯಂತಹ ಕಾರ್ಯವನ್ನು ಬದುಕಿನ ಒಳಗಡೆಯೇ ರೂಪಿಸಿಕೊಂಡು ಬಂದವು.

ದೇಶಿ ಪರಂಪರೆಯಲ್ಲೇ ಕುಮಾರವ್ಯಾಸ, ಲಕ್ಷ್ಮೀಶರು ಕಾವ್ಯವನ್ನು ಜನ ಬದುಕಿನ ಸೆಲೆಯೊಗಿಸಿದರು. 'ಮಡಿಮೈಲಿಗೆ ಬಗ್ಗೆ ಮೃದು ಧೋರಣೆ ತಳೆದ ವೈದಿಕ ಸಾಂಸ್ಕೃತಿಕ ವಲಯದಲ್ಲಿ ಇದು ಪರಿವರ್ತನೆಯ ಕಾಲಘಟ್ಟವಾಗಿದೆ. ದಾಸ ಸಾಹಿತ್ಯ ಮತ್ತು 'ಗದುಗಿನ ಭಾರತ' ಜೈಮಿನಿ ಭಾರತ' ಈ ಕಾವ್ಯಗಳು ವೈದಿಕ ಮಠಮಾನ್ಯ ಪರಿಸರದಿಂದ ವೈದಿಕೇತರ ಪರಿಸರಗಳಿಗೆ ವಿಸ್ತಾರಗೊಂಡವು. ಕೃಷ್ಣ ಚರಿತೆಯನ್ನು ಆತನ ಭಕ್ತರ ಭಕ್ತಿಯ ಮಹಿಮೆಯನ್ನು ಸಾರಿ ಹೇಳುವ ಈ ಕಾವ್ಯಗಳು ಓದುವ ಪಂಡಿತ ವರ್ಗವನ್ನು ಮಾತ್ರ ಅವಲಂಬಿಸದೆ, ಕೇಳುವ ಸಮುದಾಯಗಳತ್ತ ಚಲಿಸಿದವು. 'ಗದುಗಿನ ಭಾರತ'ವನ್ನು ಕುಮಾರವ್ಯಾಸನು ಓದುಗ ಮತ್ತು ಕೇಳುಗ ವರ್ಗಗಳಿಗೆ ತಲುಪುವಂತೆ ಕಾವ್ಯವನ್ನು ರಚಿಸಿದನು. ಓದುವ ಮನಸ್ಸಿಗಿಂತ ಕೇಳುವ ಮನಸ್ಸಿಗೆ ಹೆಚ್ಚು ಪ್ರಿಯವಾಗುವಂತೆ, ಅರ್ಥವಾಗುವಂತೆ ಈ ಕಾವ್ಯವನ್ನು ರಚಿಸಿದ್ದಾನೆ. ಮಧ್ಯಕಾಲೀನ ಸಂದರ್ಭವೇ ಮೌಖಿಕ, ಸಾಹಿತ್ಯಕ್ಕೆ ಮಹತ್ವ ನೀಡಿತ್ತು. ಓದುವ ಅತ್ಯಲ್ಪ ಸಮುದಾಯಕ್ಕಿಂತ, ದೊಡ್ಡ ಪ್ರಮಾಣದ ಕೇಳುಗ ಸಮುದಾಯವಿತ್ತು. ಈ ಕೇಳುಗ ಸಮುದಾಯವನ್ನು ಪರಿಗಣಿಸಿದ ಕವಿ ಕುಮಾರವ್ಯಾಸ ಲಕ್ಷ್ಮೀಶರು ಕೃಷ್ಣಭಕ್ತಿಯನ್ನು ಕೇಳುವಂತೆ ಮಾಡಲು ಪ್ರಯತ್ನಿಸಿದ ಫಲವಾಗಿ 'ಗದುಗಿನ ಭಾರತ' 'ಜೈಮಿನಿ ಭಾರತ' ಕಾವ್ಯಗಳನ್ನು ದೇಶಿ ಛಂದಸ್ಸಿನಲ್ಲಿ ಮೌಖಿಕ ಶೈಲಿಯಲ್ಲಿ ರಚಿಸಿದರು. ಆದರೂ ಈ ಕಾವ್ಯಗಳು ಓದುವ ಪಂಡಿತ ವರ್ಗವನ್ನು, ಕೇಳುಗ ಸಮುದಾಯವನ್ನು ತಲುಪಿವೆ. ಕನ್ನಡ ಅನನ್ಯ ಕಾವ್ಯಗಳಾಗಿ ಸ್ಥಾನ ಪಡೆದು ನಿಂತಿವೆ'[೦೦] ಮೇಲುನೋಟಕ್ಕೆ ಧಾರ್ಮಿಕ ಕಾವ್ಯಗಳಾದರೂ ಎಲ್ಲಾ ಧರ್ಮಿಯರಿಗೆ ಪ್ರಿಯವಾದ ಪಂಡಿತ-ಪಾಮರ ಸಮುದಾಯಗಳಿಗೆ ಒಂದು ಸಾಂಸ್ಕೃತಿಕ ಅಸ್ಮಿತತೆಯನ್ನು ಕಟ್ಟಿಕೊಟ್ಟಿವೆ. ಕೃಷ್ಣಕಥೆ ಕೃಷ್ಣ ಭಕ್ತಿ ಬರೀ ವೈದಿಕರಿಗೆ ಮಾತ್ರ ಸೀಮಿತವಾಗದೆ ವೈದಿಕೇತರ ಸಮುದಾಯಕ್ಕೂ ಪ್ರಿಯವಾಗಿತ್ತು. ಹೀಗಾಗಿ ಕುಮಾರವ್ಯಾಸನ ಗದುಗಿನ ಭಾರತ, ಲಕ್ಷ್ಮೀಶನ ಜೈಮಿನಿ ಭಾರತದಂತಹ ಮಧ್ಯಕಾಲೀನ ಕೃತಿಗಳು ಕನ್ನಡದ ಸಾಂಸ್ಕೃತಿಕ ವಲಯದ ವಿಸ್ತರಣದ ಜೊತೆಗೆ ಜನರ ಸರ್ವಕಲ್ಯಾಣದ ಕೃತಿಗಳಾಗಿ ಸಂರಕ್ಷಣೆಗೊಳ್ಳುತ್ತಾ ಬಂದವು.

'ಜೈಮಿನಿ ಭಾರತದಲ್ಲಿ ಬರುವ ಉಪಕಥೆಗಳನ್ನು ಆಧರಿಸಿ ನಾಟಕಗಳು ಹುಟ್ಟಿಕೊಂಡಿವೆ. ಯಕ್ಷಗಾನ ನಾಟಕಗಳಲ್ಲಿ ಇದು ಹೆಚ್ಚು ಕಾಣುತ್ತದೆ. ಕರ್ನಾಟಕದ ಉತ್ತರ ಪ್ರಾಂತ್ಯಗಳಲ್ಲೂ ದೊಡ್ಡಾಟ-ಸಣ್ಣಾಟಗಳಲ್ಲಿ ಈ ಕಥಾ ವಸ್ತುವನ್ನು ಕಾಣಬಹುದು. ನಾಟಕಗಳು ಊರೊಟ್ಟಿಗಿನ ಕಲೆಯಾಗಿ ರೂಪುಗೊಳ್ಳುತ್ತ ಬಂದಿದೆ.

ಜಾತ್ಯಾತೀತವಾಗಿ ನಡೆಯುತ್ತವೆ. 'ಜೈಮಿನಿ ಭಾರತ' ವೈದಿಕ ಕಾವ್ಯವಾದರೂ ಆ ಕಾವ್ಯದ ಉಪಕಥೆಗಳನ್ನು ಆಧರಿಸಿ ರಚನೆಗೊಳ್ಳುವ ನಾಟಕಗಳಲ್ಲಿ ಸಮರವೀರರ ಕಥೆಗಳು ಇರುವುದರಿಂದ ಇಲ್ಲಿ ಭಕ್ತಿಗಿಂತ ವೀರತ್ವ ಪ್ರಧಾನವಾಗುತ್ತದೆ. ನಾಟಕಗಳಲ್ಲಿ ಅಭಿನಯಿಸುವವರು ಸಾಮಾನ್ಯವಾಗಿ ವೈದಿಕೇತರು ಹೆಚ್ಚಾಗಿರುತ್ತಾರೆ. 'ಜೈಮಿನಿ ಭಾರತ'ದಲ್ಲಿ ಬರುವ ಯೌವನಾಶ್ವ, ಸಾಲ್ವ, ಅನುಸಾಲ್ವ, ನೀಲಧ್ವಜ, ಹಂಸಧ್ವಜ, ಸುಧನ್ವ, ಸುರಥ, ಬಭ್ರುವಾಹನ, ಮಯೂರ ಧ್ವಜ, ತಾಮ್ರಧ್ವಜ, ವೀರವರ್ಮ ಹಾಗೂ ಚಂದ್ರಹಾಸ ಮುಂತಾದ ವೀರರು ಅರ್ಜುನ ಕೃಷ್ಣರ ಜತೆ ಹೋರಾಡಿ ಗೆಲ್ಲುವ ಕಥೆಗಳು ವೀರತ್ವವನ್ನು ಭಕ್ತಿಯನ್ನು ಪ್ರದರ್ಶಿಸಿದ್ದರೂ ನಾಟಕಗಳಲ್ಲಿ ವೀರತನ ಹೆಚ್ಚು ರಂಜನೆಗೆ ಒಳಗಾಗುತ್ತದೆ. ಈ ವೀರರ ಪಾತ್ರಗಳನ್ನು ವೈದಿಕೇತರು ಅದರರಲ್ಲೂ ಕೇಳುವ ವರ್ಗದವರು ಅಭಿನಯಿಸುತ್ತಾರೆ. ಇದರಿಂದ 'ಜೈಮಿನಿ ಭಾರತ' ಕಾವ್ಯ ವೈದಿಕ ಪರಿಸರದಿಂದ ವೈದಿಕೇತರು ಪರಿಸರದಲ್ಲಿ ವಿಸ್ತಾರಗೊಳ್ಳುತ್ತದೆ. ಕೇಳುಗ, ನೋಡುವ ಸಮುದಾಯ ಹೆಚ್ಚಾಗುತ್ತದೆ. 'ಜೈಮಿನಿ ಭಾರತ'ದ ಅನನ್ಯತೆ ಇರುವುದು ಇಲ್ಲಿ".[೧೧]

ಪ್ರಾಚೀನ ಮತ್ತು ಮಧ್ಯಕಾಲೀನ ಜ್ಞಾನ ಸಾಮಗ್ರಿಗಳೆಂದರೆ ಈ ಹಸ್ತಪ್ರತಿಗಳೇ ಆಗಿವೆ. ಗ್ರಂಥ, ಕವಳಿಗೆ, ಹೊತ್ತಿಗೆ, ಪುಸ್ತಕವೆಂದು ವಿವಿದಾರ್ಥಗಳಿಂದ ಕರೆಯಿಸಿಕೊಂಡ ಇವು ಸಾಹಿತ್ಯ ಸಂಸ್ಕೃತಿಯ ಪರಮೋಚ್ಛ ಪರಿಕರಗಳಾಗಿದ್ದವು. ಜ್ಞಾನ, ಪುಣ್ಯ, ಶ್ರೇಯಸ್ಸು, ಸುಕೃತದ ಮಾಧ್ಯಮಗಳಾದಂತೆ ಮೋಕ್ಷ, ಕರ್ಮಫಲದ ನಿವಾರಣೆ, ಸಂಪ್ರದಾಯ, ಸದ್ಗತಿಗಳಿಗೆ ಸಾಧನಗಳಾಗಿಯೂ ಇವು ಮಹತ್ವ ಪಡೆದಿದ್ದವು ಎಂಬುದು ತಿಳಿದುಬರುತ್ತದೆ.[೧೨] ಹೀಗಾಗಿ ಹಸ್ತಪ್ರತಿಯಂತಹ ಪ್ರಾಚೀನ ಜ್ಞಾನ ಸಾಮಗ್ರಿಯೂ ಸಾಂಸ್ಕೃತಿಕ ನೆಲೆಯಲ್ಲಿ ಸಂರಕ್ಷಣೆಯನ್ನು ಹೊಂದುತ್ತಾ ಬಂದಿತು.

ವಾಸ್ತವತೆಯನ್ನು ಎದುರಿಸಲು ವಿಫಲರಾದಂತೆಲ್ಲ ಸಾಮಾಜಿಕ ಬದುಕಿನ ಸನ್ಯಾಸತ್ವದ ದೀಕ್ಷೆ ಕೊಡಲಾಯಿತು.[೧೩] ವಾಸ್ತವವಾಗಿ ವಿಫಲರಾದ ಸನ್ಯಾಸಿಗಳು ಧಾರ್ಮಿಕವಾಗಿ ಸಾಮಾಜಿಕ ಕಳಕಳಿಯ ಗ್ರಂಥಗಳನ್ನು ಸಂರಕ್ಷಿಸುವ ಸಾಂಸ್ಕೃತಿಕ ಮನೋಭಾವನೆ ಹೊಂದಿದ್ದು ತಿಳಿಯುತ್ತದೆ.

"ಆರೋಗ್ಯವರ್ಧನೆಗೆ ಆಹಾರ ಅವಶ್ಯವಾದಂತೆ ಶೃಂಗಾರವೂ ಮನುಷ್ಯನಿಗೆ ಬಹುಮುಖ್ಯವಾದದ್ದು. ಒಂದು ದೈಹಿಕ ಸಂವರ್ಧನೆಗೆ ಅವಶ್ಯವಾದರೆ ಮತ್ತೊಂದು ಮಾನಸಿಕ ಸಂವರ್ಧನೆಗೆ ಪೋಷಕವಾಗುತ್ತದೆ. ಅಮರಕೋಶ, ಶಬ್ದಮಣಿದರ್ಪಣಗಳು ಮನುಷ್ಯನಿಗೆ ಭಾಷೆಯ ಶಾಸ್ತ್ರೀಯ ನೆಲೆಗಟ್ಟನ್ನು ವ್ಯವಹಾರ ಕುಶಲತೆಯನ್ನು ಕಲಿಸುವ ಸಾರ್ವತ್ರಿಕ ಅಥವಾ ಪಾಂಡಿತ್ಯಪೂರ್ಣ ಬದುಕಿಗೆ ಸಜ್ಜುಗೊಳಿಸುತ್ತವೆ"[೧೪] ಸಾಂಸ್ಕೃತಿಕ ವಿಚಾರಗಳು ಮನುಷ್ಯನ ಬದುಕಿಗೆ ಒಂದು ಸದೃಢವಾದ ಸಾಂಸ್ಕೃತಿಕ ಮನೋಭಾವವು ಜ್ಞಾನದ ಸಂರಕ್ಷಣೆ ಸಂವರ್ಧನೆ ಸಂಗೋಪನೆ ಕಾರ್ಯವನ್ನು ಕೈಗೊಂಡವು.

'ಮಳೆಗಾಗಿ, ಬೆಳೆಗಾಗಿ, ಆರೋಗ್ಯ, ಸಂವರ್ಧನೆಗಾಗಿ, ಔಷದೋಪಚಾರಕ್ಕಾಗಿ, ನೆಲ, ಜಲ, ಭವಿಷ್ಯಕ್ಕಾಗಿ, ಪ್ರಾಣಿ ಪಕ್ಷಿಗಳ ನೆಲೆ ಬೆಲೆಯ ತಿಳುವಳಿಕೆಗಾಗಿ, ರಸಜ್ಞಾನಕ್ಕಾಗಿ, ಹಾವು-ಚೇಳು ಕಡಿತದ ನಿವಾರಣೆಗಾಗಿ, ಅಡಿಗೆ ವಿಚಾರಕ್ಕಾಗಿ ಹೀಗೆ ಲೌಕಿಕ ಅಗತ್ಯಗಳ ಪೂರೈಕೆಗಾಗಿ ಹುಟ್ಟಿದ ಹಲವು ಕೃತಿಗಳು ಈ ದೈವೀ ಕೃತ ನೆಲೆಯಲ್ಲಿ ಸೇರಿ ಹೋದವು. ಮನುಷ್ಯನ ಪ್ರಾಮಾಣಿಕ ಶ್ರಮ ಮತ್ತು ಶ್ರದ್ಧೆಗಳು ನೀತಿ-

ನಿಯಮಗಳಾಗಿ ಸನಾತನ ಸಂಹಿತಗಳಾಗಿ ಪರಿವರ್ತನೆಗೊಂಡವು'[೧೫] ಧಾರ್ಮಿಕವಾಗಿ ಅಲ್ಲದೇ ನಂಬಿಕೆ ಪ್ರಧಾನವಾಗಿ ಸಾಂಸ್ಕೃತಿಕ ಆಶಯಗಳು ಗ್ರಂಥ ಸಂರಕ್ಷಣೆಯಲ್ಲಿ ಬಹುಮುಖ್ಯ ನೆಲೆಯನ್ನು ಪಡೆದಿವೆ. ಡಾ.ವೀರೇಶ ಬಡಿಗೇರ ಅವರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು ಮತ್ತು ಹಲಗೆ ಬಳಪ ಕೃತಿಗಳು ಸಾಂಸ್ಕೃತಿಕ ನೆಲೆಯಲ್ಲಿ ಹಸ್ತಪ್ರತಿಗಳಂತಹ ಪ್ರಾಚೀನ ಬರವಣಿಗೆ ಸಾಧನೆಗಳನ್ನು ಹೊಸರೀತಿಯಿಂದ ಬಹುಮುಖಿ ನೆಲೆಯಲ್ಲಿ ವಿಶ್ಲೇಷಿಸುವ ಗಂಭೀರ ಕೃತಿಗಳಾಗಿವೆ. ಗ್ರಂಥ ಸಂರಕ್ಷಣೆ ಸಂವರ್ಧನೆಯಲ್ಲಿ ಹೊಸ ರೀತಿಯ ಮಗ್ಗುಲವನ್ನು ಬಿಂಬಿಸುತ್ತವೆ. ಮನುಷ್ಯ ತನ್ನ ಸರ್ವ ರೀತಿಯ ಕಷ್ಟ-ಕಾರ್ಪಣ್ಯವನ್ನು ಕಳೆಯುವ ನಂಬಿಕೆ ಪ್ರಧಾನವಾದ ಭಾವನೆಯಿಂದ ಭಕ್ತಿ-ಭಾವದಿಂದ ಜೀವನದ ಅವಿನಾಭಾವ ಸಂಬಂಧವನ್ನು ಹೊಂದಿ ಪ್ರಾಚೀನ ಹಸ್ತಪ್ರತಿ ಗ್ರಂಥಗಳನ್ನು ಸಾಂಸ್ಕೃತಿಕ ನೆಲೆಯಲ್ಲಿ ಸಂಗ್ರಹ, ಸಂರಕ್ಷಣೆ, ಸಂವರ್ಧನೆ, ಸಂಗೋಪನೆ ಮಾಡುತ್ತಾ ಬಂದಿದ್ದಾನೆ. ಈ ನೆಲೆಯಲ್ಲಿ ಪ್ರಾಚೀನ ಸಂಸ್ಕೃತಿಯನ್ನು ಕಟ್ಟಿಕೊಡಲು ಗ್ರಂಥ ಸಂರಕ್ಷಣೆಯ ಪದ್ಧತಿಗಳು ಮಹತ್ವದ್ದಾಗಿವೆ. ಹಸ್ತಪ್ರತಿ ಮತ್ತು ಗ್ರಂಥಸಂಪಾದನೆಯನ್ನು ಬರೀ ಆಕರವನ್ನಾಗಿ ನೋಡುವ ಸ್ಥಗಿತ ಮಾದರಿಯನ್ನು ನಿರಾಕರಿಸಿ ಬಹುಮುಖಿ ಅಧ್ಯಯನ ಮಾದರಿಯಲ್ಲಿ ನೋಡುವ ಕ್ರಮ ಹೆಚ್ಚು ಪರಿಣಾಮಕಾರಿಯಾದುದು ಎಂದು ಹೇಳಬಹುದು. ಈ ರೀತಿಯ ಅಧ್ಯಯನ ಕ್ರಮವು ಕನ್ನಡ ಹಸ್ತಪ್ರತಿಗಳಲ್ಲಿ ಒಂದು ಹೊಸ ಸಾಂಸ್ಕೃತಿಕ ಸಂಚಲನೆಯನ್ನು ಹುಟ್ಟುಹಾಕಿದೆ.

ಕನ್ನಡ ಹಸ್ತಪ್ರತಿಗಳು ಸಾಂಸ್ಕೃತಿಕವಾಗಿ ಜನಮುಖಿ ಸಂವೇದನೆ ಹೊಂದಿದಂತವು. ಧರ್ಮ, ಮತ ಜಾತಿ ವಲಯವನ್ನು ಮೀರಿ ಬೆಳೆದಿರುವ ಅವುಗಳ ಜನಪ್ರಿಯತೆ ಮತ್ತು ಜನಾಧರಣೀಯ ಸತ್ವಗಳು ಈ ಕೃತಿಗಳು ಹುಟ್ಟಿದ ಮತ್ತು ವಿವಿಧ ಕಾಲಮಾನಗಳಲ್ಲಿ ಪಡೆದುಕೊಂಡ ಭಿನ್ನ ಸ್ವರೂಪಗಳನ್ನು ಗುರುತಿಸುವುದು ಕಷ್ಟ. ಈ ಕೃತಿಗಳು ರಚನೆಯಾದ ಕಾಲದಲ್ಲಿ ಅವುಗಳಿಗೆ ಪೂಜ್ಯತೆ, ಶ್ರೇಷ್ಠತೆ ಒದಗಿ ಬಂದಿರಲಾರದು. ನಂತರ ಇದು ಸಾಧ್ಯವಾಗಿರುವಂಥದ್ದು.[೧೬] ದಾನಕ್ಕಾಗಿ, ಓದಿಗಾಗಿ, ಕೇಳುವಿಕೆಗಾಗಿ, ಕೂಲಿಗಾಗಿ, ರೋಗ ನಿವಾರಣಾರ್ಥವಾಗಿ, ವಿದ್ಯಾರ್ಜನೆಗಾಗಿ, ಹವ್ಯಾಸಕ್ಕಾಗಿ, ಮೋಕ್ಷ ಸಂಪಾದನೆಗಾಗಿ, ಸಂಕಷ್ಟ ಪರಿಹಾರಾರ್ಥವಾಗಿ, ಕರ್ಮೋಪಶಮನಕ್ಕಾಗಿ ಸ್ವ-ಪರ ಬಳಕೆ ಮತ್ತು ಪ್ರಗತಿಗಾಗಿ, ಪುತ್ರ ಸಂತಾನಕ್ಕಾಗಿ ಹೀಗೆ ಹತ್ತು ಹಲವು ರೀತಿಯ ಫಲಾಪೇಕ್ಷೆಗಳು ಮತ್ತು ಜೀವನ ದೃಷ್ಟಿಗಳಿಗಾಗಿ ಹಸ್ತಪ್ರತಿಗಳು ಬರೆಸಿಕೊಂಡಂಥವು ಹಾಗೂ ಪ್ರತೀಕರಣಗೊಂಡಂಥವು. ಹೀಗೆ ಕೃತಿಯೊಂದು ಆಕೃತಿಗೊಳ್ಳುವ ಅಥವಾ ಪ್ರತೀಕರಣಗೊಳ್ಳುವುದರ ಹಿಂದೆ ಸಮುದಾಯಗಳ ನಿರ್ದಿಷ್ಟ ಉದ್ದೇಶಗಳಿರುವುದು ಸ್ಪಷ್ಟವಾಗುತ್ತದೆ. ಅಥವಾ ಅಂಥ ಸಮುದಾಯಗಳ ಅಸ್ತಿತ್ವಕ್ಕಾಗಿಯೇ ಉಪಯೋಗವಾಗುವಂಥದ್ದು ಇದೆ.[೧೭]

ಹಸ್ತಪ್ರತಿಗಳು ಕನ್ನಡಿಗರ ಆಲೋಚನಾ ಕ್ರಮದ ರೂಪಾತ್ಮಕ ಪ್ರತಿನಿಧಿಗಳಾಗಿವೆ ಎಂದೇ ಹೇಳಬಹುದು. ದಿನ ಬದುಕಿನ ತಾಕಲಾಟಗಳಲ್ಲೂ ಜನರನ್ನು ಓದಿಸುವ, ಕೇಳಿಸುವ ಸಂಗತಿಗಳತ್ತ ಹುರುದುಂಬಿಸುವ ಹುರಿಗೊಳಿಸಿದ ಇವು ಮಾನವಮುಖಿ ಸಂಕಥನಗಳಾಗಿವೆ. ಹೀಗಾಗಿ ಬರೀ ಅಲೌಕಿಕ ಅಪೌರುಷೆಯ ನೆಲೆಗಳ ಮೂಲಕ ಹಸ್ತಪ್ರತಿಗಳನ್ನು ನೋಡುವುದು ಸರಿಯಲ್ಲ.[೧೮] ಹಸ್ತಪ್ರತಿಗಳನ್ನು ಕನ್ನಡ ಜನ ಬದುಕಿನ ಅಂಗವಾಗಿ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ನೋಡುವುದು ಅವರ ಸಾಂಸ್ಕೃತಿಕ ಮನೋಭಾವನೆಯನ್ನು

ಹೇಳುತ್ತದೆ. ಅಕ್ಷರಕೇಂದ್ರದಾಚೆಯಿರುವ ಬಹುಸಮುದಾಯಗಳು ಗ್ರಂಥ ಸಂರಕ್ಷಣೆ ಸಂವರ್ಧನೆಯಂತಹ ಸಾಂಸ್ಕೃತಿಕ ಸಂರಕ್ಷಣೆಗೆ ಬಹುದೊಡ್ಡ ಕೊಡುಗೆಯನ್ನು ನೀಡುತ್ತಾ ಬಂದಿವೆ.

ಪಂಚತಂತ್ರ ಕಥೆಗಳನ್ನು ತೆಗೆದುಕೊಂಡರೆ ಅವು ಏಕಮುಖವಾದ ಸಂಸ್ಕೃತಿಯನ್ನು ಹೊಂದಿಲ್ಲ. ಬಹುಮುಖಿಯಾದ ಸಾಂಸ್ಕೃತಿಕ ಸ್ಮೃತಿಗಳನ್ನು ಹೊಂದಿವೆ. ಬದುಕಿನ ಸ್ಥಿತ್ಯಂತರವನ್ನು ಕಟ್ಟಿಕೊಡುತ್ತವೆ. ಜನ ಸಂಸ್ಕೃತಿಯ ಹಾಗೂ ಪ್ರಭುತ್ವದ ಏಳುಬೀಳುಗಳನ್ನು ಕಟ್ಟಿಕೊಡುವ ಸಾಂಸ್ಕೃತಿಕ ದಾಖಲೆಗಳಾಗಿ ಈ ಕಥೆಗಳು ಕಾಣುತ್ತವೆ. ದುರಾಸೆ, ದುರಂತ, ಢಂಬಾಚಾರ, ವಂಚನೆ, ಮೋಸ, ಕೃತಘ್ನತೆ, ಕಳ್ಳತನ, ಹಾದರ, ದಯಾಪರತೆ, ಪೂಜ್ಯತೆ, ನಿಷ್ಠೆ, ಪ್ರೀತಿ, ಪ್ರೇಮ, ಸ್ನೇಹ, ಜಾಣತನ ಹೀಗೆ ಬದುಕಿನ ಎರಡೂ ಸ್ವಭಾವಗಳನ್ನು ಹಾಸ್ಯ, ವ್ಯಂಗ್ಯ ವಿಡಂಬನೆಯ ಮೂಲಕ ಕಟ್ಟಿಕೊಡುತ್ತವೆ. ಹಾಗೆ ರಟ್ಟಕವಿಯ ರಟ್ಟಮತ ತೆಗೆದುಕೊಂಡರೆ ಕೃಷಿಗೆ ಸಂಬಂಧಿಸಿದ ವಿಷಯಗಳನ್ನು ಹೇಳುತ್ತದೆ. ಮಳೆ-ಬೆಳೆಯನ್ನು ಕುರಿತಾದ ಮಾಹಿತಿಯನ್ನು ನೀಡುತ್ತವೆ.[೧೯]

..ಇತಿ ಶ್ರೀಮತ್ಪರಮಹಂಸ ಪರಿವ್ರಜಕಾಚಾರ್ಯ ಶ್ರೀ ಚಿದಾನಂದಗುರುವಾರ್ಯ ಚರಣಪದ್ಮದ್ವಿರೇಭ। ಶ್ರೀ ಚಿದಾನಂದವಧೂತ ವಿರಚಿತ, ಪಾರ್ವತಿ ಮಹಾತ್ಮೆ ಅಷ್ಟಾದಶೋಧ್ಯಾಯ। ಜೀವನ್ಮುಕ್ತಿ ನಾಮಕಥಾ ಸಂಪೂರ್ಣಂ। ಶ್ರೀ ಗುರುನಾಥಾರ್ಪಣಮಸ್ತು। ಶ್ರೀ ಶ್ರೀ ಶ್ರೀ ಶ್ರೀಗುರು ಬಗಳಾಂಬಿಕಾ ಪ್ರಸನ್ನ। ದುಂದುಭಿನಾಮ ಸಂ.ವೈಶಾಖ ಭಾರ್ಗವಾರ ಶುಭನಕ್ಷತ್ರ ಶುಭತಿಥಿ ಶುವಾರ ಶುಭಯೋಗ ಶುಭಕರಣದಲ್ಲಿ ದೇವಿ ಮಹಾತ್ಮೆ ಸಮಾಪ್ತಿ ಸಂಪೂರ್ಣ ಮಂಗಳ ಮಹಾಶ್ರೀ ಶ್ರೀ ಶ್ರೀ। ಯಿತಿ ದೇವೀಮಹಾತ್ಮೆ ಸಂಧಿ ಅರಕ್ಕೆ ಪದನು ೭೯ಲಕ್ಕೆ... ಮಂಗಳ ಮಹಾ ಶ್ರೀಶ್ರೀಶ್ರೀಶ್ರೀ॥[೨೦]

ಹಸ್ತಪ್ರತಿಗಳ ಒಡಲಾಳ ಉದ್ದೇಶ "ಧರ್ಮ" ಪ್ರತಿಪಾದನೆಯಾಗಿದ್ದರೂ ಅದರಲ್ಲಿನ ಕಾವ್ಯಾನುಭವ ಜಡಧರ್ಮವನ್ನು ಧಿಕ್ಕರಿಸಿ ನಡೆಯುವುದಾಗಿದೆ. ಮತ್ತು ಸಂಸ್ಕೃತಿಯ ಒಳಸೂಕ್ಷ್ಮಗಳನ್ನು ವಿಸ್ತರಿಸುವುದಾಗಿದೆ. ಹಸ್ತಪ್ರತಿ ಬರವಣಿಗೆ ಕ್ರಿಯೆ ಎನ್ನುವುದು ಅದು ಒಳಗಿನಿಂದಲೇ ಹಲವು ಅಂತಃಸಂಬಂಧಗಳೊಂದಿಗೆ ಸಂಕೀರ್ಣತೆಗಳೊಂದಿಗೆ ಸಂರಚನೆಗೊಂಡಿರುವಂಥದ್ದು. ಬಹುಸಂಖ್ಯಾತ ಅನಕ್ಷರಸ್ಥ ಆದರೆ ಅರಿವಿನ ಆಸಕ್ತಿಹೊಂದಿದ ಜನಮಾನವನ್ನು ತಲುಪಲು ಹಾತೊರೆದ ಸಂವಹನಶೀಲಗುಣವುಳ್ಳಂಥವು. ಇವುಗಳ ಇಷ್ಟೊಂದು ಪ್ರಸರಣಕ್ಕೆ ಬಹುಮುಖ್ಯ ಕಾರಣರಾದವರು ಲಿಪಿಕಾರರು ಎಂಬುದು ತಿಳಿದ ವಿಚಾರ[೨೧] ಕವಿಪ್ರಧಾನ ನೆಲೆಯಲ್ಲಿ ಮುಖ್ಯವೆಂದು ನೋಡುವ ಕ್ರಮ ಸಂರಕ್ಷಣೆಯ ಸೀಮಿತತೆಯನ್ನು ತೋರಿಸಿದರೆ ಲಿಪಿಕಾರರ ನೆಲೆಯಲ್ಲಿ ಜ್ಞಾನ ಸಂರಕ್ಷಣೆ ಸಂವರ್ಧನೆ ಸಂಗೋಪನೆಯು ವಿಶಾಲವಾದ ಸಾಂಸ್ಕೃತಿಕತೆಯನ್ನು ಕಟ್ಟಿಕೊಳ್ಳಲು ನೆರವಾಗುತ್ತದೆ. ಅಲ್ಲದೇ ಹೊಸ ರೀತಿಯ ಬಹುಮುಖಿ ಆಯಾಮದ ಸಾಂಸ್ಕೃತಿಕತೆಯನ್ನು ಕಟ್ಟಿಕೊಡುತ್ತದೆ.

ಪ್ರಾಚೀನ ಕಾಲದಲ್ಲಿ ರಾಜರು, ಸಾರ್ವಜನಿಕರು ಆಶ್ರಯ ನೀಡುವ ಮೂಲಕ ಅನೇಕ ಉಪಯುಕ್ತ ಕೃತಿಗಳ ಸೃಷ್ಟಿಗೆ ಕಾರಣರಾದ ಉದಾಹರಣೆಗಳು ನಮ್ಮಲ್ಲಿ ಸಿಗುತ್ತವೆ. ಜೈನಕವಿಗಳಂತೂ ರಾಜಾಶ್ರಯದಲ್ಲಿಯೇ

ಕೃತಿನಿರ್ಮಾಣ ಕಾರ್ಯವನ್ನು ಪೂರೈಸಿದರು. ರಾಜನು ನಿರ್ವಹಿಸಬೇಕಾದ ಕರ್ತವ್ಯಗಳನ್ನು 'ಸಪ್ತಸಂತಾನ'ವೆಂದು ಕರೆಯುತ್ತಿದ್ದರು. ಇವುಗಳಲ್ಲಿ 'ಗ್ರಂಥೋತ್ಪಾದನೆ'ಯೂ ಸೇರಿದ್ದರಿಂದ ರಾಜ ಕರ್ತವ್ಯದ ಭಾಗವೆಂಬಂತೆ ಕೆಲವು ಜನ ಮಂತ್ರಿಗಳೂ, ಸಾಮಂತರೂ ಈ ಕರ್ತವ್ಯವನ್ನು ನಿರ್ವಹಿಸಿದರು. ಸಾರ್ವಜನಿಕರಿಗೆ ಸಂಬಂಧಿಸಿದಂತೆ ರನ್ನನಿಂದ ಅಜಿತಪುರಾಣ ಬರೆಸಿದ ಅತ್ತಿಮಬ್ಬೆ, ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ ತನ್ನ ಮನೆಯಲ್ಲಿ ರೂಪಗೊಳ್ಳಲು ಕಾರಣಳಾದ ಜ್ಯೋತಿಯಮ್ಮ ಮೊದಲಾದ ಮಹಿಳೆಯರನ್ನು ಇಲ್ಲಿ ಸ್ಮರಿಸಬಹುದು. ಇದಲ್ಲದೆ, ಲಕ್ಷ್ಮಣದಣ್ಣಾಯಕ, ಭಂಡಾರಿ ಜಕ್ಕಪ್ಪ, ಕಲ್ಲೇಹದ ಕೇತಿಶೆಟ್ಟಿಗಳು ಲಕ್ಷಸಂಖ್ಯೆಯ ವಿತ್ತವನ್ನು ಸಾಹಿತ್ಯೋದ್ಧಾರಕ್ಕಾಗಿ ವೆಚ್ಚಿಸಿದ ವಿಷಯ ಗಮನಾರ್ಹವೆನಿಸಿದೆ[೨೨] ರಾಜಾಶ್ರಯ ರಾಜಕೀಯ ಪ್ರೇರಣೆಯೂ ಜ್ಞಾನ ಸಂರಕ್ಷಣೆಯ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಸಾರ್ವಜನಿಕ ಕಳಕಳಿ ಸಮುದಾಯಗಳ ಹಿತಕಾಪಾಡಲು ಗ್ರಂಥಗಳ ರಚನೆ, ಸಂಗ್ರಹ, ಪ್ರತಿಕರಣ, ಸಂರಕ್ಷಣೆ, ಸಂವರ್ಧನೆಯ ಕಾರ್ಯ ನಡೆಯುತ್ತ ಬಂದಿದ್ದು ತಿಳಿದುಬರುತ್ತದೆ.

### ೫.೧. ಜ್ಞಾನಾರ್ಜನೆಗಾಗಿ

..... ಬಾಗಣವಾಡಿಯ ರಾಮಣ್ಣಗಳ ಮಗನು ಬೊಮ್ಮರಸನು ಶ್ರೀ ಮಲ್ಲಷೇಣಾಚಾರ್ಯರಿಗೆ ಮನ(ನೋ) ವಚನ ಕಾಯ ಶುದ್ಧಿಯಿಂ ನಮೋಸ್ತು ಮಾಡಿ ತಾನು ಓದುವುದಕ್ಕೆ ಈ ಸಜ್ಜನ ಚಿತ್ತವಲ್ಲಭ ಗ್ರಂಥಾರ್ಥವನ್ನು ಪ್ರತಿಸಮಾನವಾಗಿ ಬರೆದನು.[೨೩]

...... ರತ್ನಗಿರಿ ಮಠದ ಶ್ರೀ ಶಾರದಾಂಬೆ ಸಂನ್ನಿಧಿಯಲ್ಲಿ ಧರಣೇಂದ್ರ ಸತಿಸಹ ಸ್ವಪಠನಾರ್ತ್ಥವಾಗಿಯುಂ ಜ್ಞಾನೋದಯ ನಿಮಿತ್ತವಾಗಿಯುಂ ಬರದ ಪುಣ್ಯಸ್ರವಕ್ಕೆ ಮಂಗಳ ಮಸ್ತು ಸಕಲ ಜ್ಞಾನ ಸಾಮ್ರಾಜ್ಯಮಸ್ತು..[೨೪] ಜ್ಞಾನಪೂರ್ವಕ ಜ್ಞಾನದ ವಿಸ್ತರಣೆಗಾಗಿ ಕನ್ನಡ ಸಂಸ್ಕೃತಿ ಪ್ರತೀಕರಣ ಕಾಯಕದಲ್ಲಿ ತೊಡಗಿಸಿಕೊಂಡಿದ್ದು ಇಲ್ಲಿ ಗಮನಾರ್ಹ.

### ೫.೨. ದಾನಕ್ಕಾಗಿ

..... ಚಿಕ್ಕೋಡಿ ಬಸಪ್ಪ ಚಮಕಲೆ ಪಂಚಕಲ್ಯಾಣ ಕೇವಲಜ್ಞಾನ ನಿಮಿತ್ತವಾಗಿ ಶಾಸ್ತ್ರದಾನ ಧರ್ಮ್ಮಾಡಿ ಸಾಗರವರ್ಣಿಗಳಿಗೆ ಮಾಘಣಂದಿ ಶ್ರಾವಕಾಚಾರ ಗ್ರಂಥ ಆಗಮ ಸ್ವರುವನು ಸುವಿಚಾರ ಚಾರಿತ್ರ ಅಮ್ಮನ ಚರಿತ್ರ ಸಹ ಶಾಸ್ತ್ರದಾನವನು ಮಾಡಿದನು.[೨೫]

...... ಬಕ್ಕುಸೆಟ್ಟಿ ಅಕ್ಕವ್ವನವರಿಗೆ ಸಮ್ಯಕ್ತ್ವ ಪ್ರಾಪ್ತಿ ನಿಮಿತ್ತವಾಗಿ ಪಂಚಪರಮೋಷ್ಠಿಗಳ ಬೊಲ್ಲಿ ಕರ್ಮಪ್ರಕೃತಿ, ಷಟ್‌ಪ್ರಾಭೃತ, ಆತ್ಮಧ್ಯಾನ ಲಕ್ಷಣ, ಈರ್ಯ್ಯಾಪದಿ ಸಮಾಯಿಕ ಈ ಜಿನ ಸಿದ್ಧಾಂತದ ಶಾಸ್ತ್ರದಾನಾರ್ಥವಾಗಿ ದ್ರಾವಡ ದೇಶ ಅಪ್ಪಣ್ಣ ವಿದ್ಯಾರ್ಥಿ....[೨೬]

..... ಕಲ್ಯಾಣ ಪಟ್ಟಣದ ಹಾಳಿನ ಹರೆಯ ಹಂಪಯ್ಯನವರು ಚಿಕ್ಕಹಂಪಯ್ಯ ಅಯ್ಯನವರು ಗುಮ್ಮಳಾಪುರದ ಚೆನ್ನಮಲ್ಲಿಕಾರ್ಜುನ ದೇವರ ಶಿಷ್ಯರು ವಿರಕ್ತ ಜಿಡೆಸಿದ್ಧಲಿಂಗದೇವರು ಅಯ್ಯನವರಿಗೆ ಬರೆಯಿಸಿ ಭಕ್ತಿಮಾಡಿದ ಲಿಂಗಲೀಲಾ ವಿಲಾಸ ಚಾರಿತ್ರ[೨೭]

ಪರಮಾಗಮದಿಂದಲ್ಲದೆ।
ಪರತ್ರೆಯಂ ಪಡೆವುಪಾಯಮಿಲ್ಲದವರಿಂದಂ।
ವರಶಾಸ್ತ್ರಂ ಮಿಗಿಲೆಂದಾ।
ದರದಿಂ ಮಾಡುವುದು ಶಾಸ್ತ್ರದಾನಮನಳಿಪಿಂ।[೨೮]
ಶ್ರುತವನಿತೆಯ ಮುಕ್ತಿ ಶ್ರೀ।
ಸತಿಯಲ್ಲಿಗೆ ವೇಗಮುಯ್ವ ದೂದವಿಯೆಂಬೀ
ಮತಮನರಿದೋತು ಮಾಡುವು
ದತಿಶಯದಿಂ ಶಾಸ್ತ್ರದಾನಮಂ ಪದಪಿಂದಂ॥[೨೯]
ಶ್ರುತಭಾವನೆಯೊಳತಿಮನ
ಶ್ರುತಿ ನಿರ್ಮಲಮನದಿನಘಹಂ ತದ್ದುರಿತ।
ಕ್ಷತ್ರಿಯಿಂ ಕೈವಲ್ಯ ಶ್ರೀ।
ಸತಿ ಸಾರ್ಗುಂ ಶಾಸ್ತ್ರದಾನದುನ್ನತಿ ಕಿರಿದೇ॥[೩೦]

ಧಾರ್ಮಿಕ ಗ್ರಂಥಗಳನ್ನು ದಾನ ಮಾಡುವುದರಿಂದ ಮೋಕ್ಷ ಹೊಂದಬಹುದೆಂಬ ಭಾವನೆಯೂ ಪ್ರಾಚೀನ ಕರ್ನಾಟಕದಲ್ಲಿ ಗಾಢವಾಗಿತ್ತು. ಶಾಸ್ತ್ರದಾನವನಿತೆಯೇ ನಮ್ಮನ್ನು ಮುಕ್ತಿ ಸ್ತ್ರೀ ಹತ್ತಿರ ಒಯ್ಯುತ್ತಾಳೆ. ಏಕಂಭಾವದಿಂದ ಮನಶುದ್ಧಿಯಿಂದ ಪಾಪನಿವಾರಣೆ ಹೊಂದಿ ಕೈವಲ್ಯಸಿದ್ಧಿ, ಆದುದರಿಂದ ಶಾಸ್ತ್ರದಾನದ ಸಾಂಸ್ಕೃತಿಕತೆ ಹುಟ್ಟಿಕೊಂಡಿರುವ ಸಾಧ್ಯತೆಯಿದೆ.

**೫.೩. ಕರ್ಮೋಪಶಯನಕ್ಕಾಗಿ**

"ಶ್ರೀಮದಲಂಕದೇವರ ಶಿಷ್ಯರಾದ ಜಯಕೀರ್ತಿ ದೇವರು ಹನ್ನಾವರದ ಚಂದ್ರ ಕೀರ್ತಿದೇವರಿಗೆ ಜ್ಞಾನಾವರಣೀಯ ಕರ್ಮದುಪಶಮನ ನಿಮಿತ್ತವಾಗಿ.... ಬರೆದು ಕೊಟ್ಟರು"[೩೧]

"ಶ್ರೀ ಜ್ಞಾನಸಾಗರವರ್ಣಿಯವರು ತಮ್ಮ ಜ್ಞಾನವರಣೀ ಕರ್ಮೋಪಶಮನ ನಿಮಿತ್ತವಾಗಿ... ಸಂಪೂರ್ಣವಾಗಿ ಬರೆದ ಶ್ರೀ ಪದ್ಮಾವತಿ ಅಮ್ಮನವರ ಚರಿತೆ.[೩೨]

ಕರ್ಮೋಪಶಮನ, ಜ್ಞಾನವನ್ನು ಮುಚ್ಚಿ ಹಾಕುವ ಜ್ಞಾನವರಣೀಯ ಕರ್ಮವನ್ನು ನಾಶ ಮಾಡುವುದಕ್ಕಾಗಿ ಧಾರ್ಮಿಕ ಗ್ರಂಥಗಳನ್ನು ಪ್ರತಿಮಾಡಿಕೊಳ್ಳುವ, ಪ್ರತಿ ಮಾಡಿಸಿಕೊಳ್ಳುವ ಪ್ರತಿಮಾಡುವ ಸಾಂಸ್ಕೃತಿಕ ವಲಯ ಜೈನ ಕವಿಗಳಲ್ಲಿ ಜೈನ ಸಮುದಾಯದಲ್ಲಿ ಬೆಳೆದು ಬಂದಿರುವುದನ್ನು ಇಲ್ಲಿ ಕಾಣಬಹುದು.

**೫.೪. ಆಯುರಾರೋಗ್ಯ ಭಾಗ್ಯಕ್ಕಾಗಿ**

"..... ಮಹಾರಾಜ ಶ್ರೀ ಬಷಿರು ಬಸವರಾಜೇ ಅರಶಿನವರಿಗೆ ಮಹಿಶೂರ ಯಾದವ ಕುಲದ ವೈದ್ಯ ವೆಂಕಟದಾಸೈಯ್ಯನವರ ಮಗ ವೆಂಕಟರಮಣನು ಬರೆದ ರಾಜಶೇಖರ ವಿಳಾಸಕೆ ಶುಭಮಸ್ತು ಶೋಭನಮಸ್ತು ಆಯುರಾರೋಗ್ಯ ಆಯಿಶ್ಚರ್ಯಮಸ್ತು॥"[೩೩]

..... ಕರೆಯೂರಪುರದ ವೀರಣ್ಣವೊಡೆಯ ದೇವರ ಮಕ್ಕಳು ಸಾವಂದಿ ಶೆಟ್ಟರಿಗೆ ಆಯುರಾರೋಗ್ಯ ಪರಮೈಶ್ಚರ್ಯಾಭಿವೃದ್ಧಿಯಾಗಿ ಪುತ್ರ ಪೌತ್ರಾದಿಗಳಾಗಿ ಸುಖದಲ್ಲಿ ಬದುಕಲಿಯೆಂದು ಹರಸಿ ಬರೆದ ಗುರುಬೋಧಾಮೃತಕ್ಕೆ ಶುಭಮಸ್ತು॥[೩೪]

ಶ್ರೀ ಗುರುಬಸವಲಿಂಗಾಯ ನಮಃ। ಶ್ರೀ ಸಿದ್ಧೇಶ್ವರಾಯ ನಮಃ। ಶ್ರೀ ಗುರು ವಿರುಪಾಕ್ಷಾಯ ನಮಃ। ಷಣ್ಮುಖಸ್ವಾಮಿಗಳು ನಿರೂಪಿಸಿದ ತೂರ್ಯ ನಿರಾಲಂಬನ ಶರಣನ ಅರುಹಿನ ಷಡುಸ್ಥಲದ ಅಖಂಡೇಶ್ವರನ ವಚನ ಬರುವುದಕ್ಕೆ ಶುಭಮಸ್ತು। ನಿರ್ವಿಘ್ನಮಸ್ತು। ಆಯುರಾರೋಗ್ಯ ಐಶ್ಚರ್ಯ ಮಸ್ತು।[೩೫]

ಶ್ರೀ ಗುರುಬಸವಲಿಂಗಾಯ ನಮಃ। ಶ್ರೀ ಗುರುಬೋದ ನಮಃ। ಗುರುಪ್ರಮಥನಾಥ ನಮಃ। ಷಣ್ಮುಖಸ್ವಾಮಿಗಳು ನಿರೂಪಿಸಿದ ತೂರ್ಯ ನಿರಾಲಂಬ ಶರಣನ ಅರುಹಿನ ಷಟ್ಸಸ್ಥಲದ ಅಖಂಡೇಶ್ವರನ ವಚನ ಬರಿಯುವುದಕ್ಕೆ ಶುಭಮಸ್ತು ಆಯುರಾರೋಗ್ಯ ಐಶ್ಚರ್ಯಮಸ್ತು। ನಿರ್ವಿಘ್ನಮಸ್ತು। ಸಿದ್ಧಿರಸ್ತು। ಶ್ರೀರಸ್ತು। ಶ್ರೀಗಣಾಧಿಪತಯೆ ನಮಃ॥[೩೬]

...... ಶ್ರೀ ಮದ್ರಾಜಾಧಿರಾಜರಾದ ಬೆಟ್ಟದ ಚಾಮರಸವೊಡೆಯರವರ ಕುಮಾರಕರಾದ ಕಂಠೀರವ ನರಸರಾಜೇಂದ್ರ ಆಯುರಾರೋಗ್ಯ ಆಯಿಶ್ಚರ್ಯಾಭಿವೃದ್ಧಿಯಾಗಲಿಯೆಂದು ಪುತ್ರ ಪೌತ್ರ ಪರಂಪರೆ ಆಗಲಿಯೆಂದು ಪೊಲುಕಂದಿ ಬೆಟ್ಟಿಯನ ಕುಮಾರನು ಭಾರತಿ ಅಯಣ್ಣನು ಬರೆದು ಕೊಟ್ಟಂಥಾ ಲೀಲಾವತಿಯ ಪುಸ್ತಕ॥[೩೭] ಸಂತಾನ ಆಯುರಾರೋಗ್ಯ, ಐಶ್ವರ್ಯ ಅಭಿವೃದ್ಧಿಗೆ ಪುಸ್ತಕಗಳನ್ನು ಬರೆಯುವ, ಬರೆಸುವ, ಕ್ರಿಯೆ ಅಭ್ಯಾಸಾರ್ಹವಾದುದು.

### ೫.೫. ಜ್ಞಾನರಕ್ಷಣೆಗಾಗಿ

...... ಗಂಡಸೆ ಸ್ಥಳದ ಶ್ಯಾನುಭೋಗ ಮಟ್ಟಿಯನವರ ದ್ವಿತೀಯಕುಮಾರ ಬಾನಯ್ಯನು ತನ್ನ ಸಂಗ್ರಹ ನಿಮಿತ್ತಕ್ಕೋಸ್ಕರ ಸದಾ ದೇವಪುರು ಲಕ್ಷ್ಮಿಕಾಂತ ಸ್ವಾಮಿಯವರ ದಿವ್ಯ ಶ್ರೀಪಾದ ಪದ್ಮಂಗಳನ್ನು ಜಾಗ್ರತ್ಸ್ವಪ್ನ ಸಸುಪ್ತಿಯಲ್ಲಿಯೂ ಸ್ಮರಣೆ ಮಾಡಬೇಕು ಎಂದು ಜೈಮಿನಿ ಭಾರತದ ಪುಸ್ತಕ ಬರೆವುದಕ್ಕೆ ನಿರ್ವಿಘ್ನಮಸ್ತು।[೩೮]

...... ಹದಿನಾಡ ಸೀಮೆಯ ಯಳವಂದೂರ ಸ್ಥಳಕ್ಕೆ ಪೂರ್ವಿಕರಾದ ಕಾಸ್ಯಪಗೋತ್ರದ..... ತಣ ಪಂಡಿತರ ಕುಮಾರರಾದ ಸೂರಿ ಪಂಡಿತರ ಹಿರಿಯಮಗ ಬೊಂರಸ ಪಂಡಿತನು ನಮ್ಮ ಭಂಡಾರಕ್ಕೆ ಪೊಸ್ತುಕವಾಗಬೇಕು ಯೆಂದು ಬರೆದೆರಡು ಸನತ್ಕುಮಾರನ ಕೃತಿಯ ಪೊಸ್ತಕಕ್ಕೆ....[೩೯]

### ೫.೬. ವಂಶಾಭಿವೃದ್ಧಿಗಾಗಿ

...... ಮಾವಹಳ್ಳಿಯಲ್ಲಿಯಿರುವ ಹನುಮಂತಪ್ಪನ ಮಗ ಹನುಮಂತಪ್ಪಗೆ ಆಶೀರ್ವಾದ ಮಾಡಿ ಧನಕನಕ ವಸ್ತುವಾಹನ ಆಯುರಾರೋಗ್ಯ ಐಶ್ಚರ್ಯಾಭಿವೃದ್ಧಿ ವಂಶಾಭಿವೃದ್ಧಿ ಆಗುವ ಹಾಗೆ ಆಶೀರ್ವಾದವಂನ್ನು ಮಾಡಿ ಬರೆದುಕೊಟ್ಟ ಐರಾವತ ಸಂಪೂರ್ನ್ನ[೪೦]

...... ಕೆಱೆಯೂರಮುರದ ವೀರಣ್ಣೋಡೆಯರು ದೇವರ ಮಕ್ಕಳು ಗುರುದೇವರು ಹನಸೋಗೆಯ ಗಂಗಯ್ಯನವರ ಮಕ್ಕಳು ಕೆಂಪಗಂಗೋಡೆಯರಿಗೆ ಆಯುರಾರೋಗ್ಯ ಪರಮೈಶ್ಚರ್ಯ ವೃದ್ಧಿಯಾಗಿ ಪುತ್ರ ಪೌತ್ರಾದಿಗಳಾಗಿ ಬದುಕಲೆಂದು ಹರಿಸಿ ಬರೆದ ಚೋಳ ಸಾಂಗತ್ಯ ಸಮಾಪ್ತ....[೪೧]

........ ಈ ಪುಸ್ತಕವ ಬರದಾತನು ಯೆಂಮಿಗನೂರ ವೋದಿಸುವ ಅಯ್ಯಪನ ಸುಹಸ್ತ ಬರಹವು "ಈ ಪುಸ್ತಕದ ದೇವರ ದಾಸ್ಯೈಯನ ಸಾಂಪ್ರದಾಯಿಕ ಚಿತ್ತಾಪುರದ ಅಮಾತಪ್ಪನವರಿಗೆ ಧನಕನಕ ವಸ್ತುವಾಹನ ಪುತ್ರ ಪೌತ್ರಾದಿಗಳು ಸಂಮ್ಮೃದ್ಧಿಯಾಗಲೆಂದು ಹರಸಿ ಬರೆದುಕೊಟ್ಟ ಪಂಚತಂತ್ರದ ಕಥೆ..."[೪೨]

**೫.೭. ಗಂಡು ಸಂತಾನಕ್ಕಾಗಿ**

...... ಶ್ರೀ ಗುರು ಸಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಜ್ಞಾನಾನಂದಮಯಾ ಸುಧಾರ್ನವ ಪೇನವ್ರಭಾರತ್ನ ಪ್ರಕೀರ್ಣ ಮಂಜರಿತ ಮಹಂತ ಚಕ್ರೇಶ್ವರರಾದ ವಿರಕ್ತದೇವ ದೇಶಿಬ ಶಿಖಾಮಣಿಗಳವರ ಪಾದಕಮಲ ಪರಾಗದ್ವಿರೇಭನಾದ ಬಸವ ಪೌರಾಣಿಕ ಬರೆದು ವಪ್ಪಿಸಿದ ಶಿಂಗಿರಾಜ ಪೌರಾಣಿ ಬಸವಲೀಲೆ ಬಸವ ಲಿಂಗಾಯ ನಮಃ (ಕೊನೆಯಲ್ಲಿ)..... ಶಾಲಿವಾಹ ಶಖಾಬ್ದ ವರುಷಗಳು ಶುಕ್ಲ ಸಂವತ್ಸರದ ಮಾರ್ಗಶಿರ ಕೃಷ್ಣ ಪಕ್ಷ॥ ಸೌಮ್ಯವಾರಕ್ಕೆ ಸಂಪೂರ್ಣ ಜಯ ಮಂಗಳಾಗಿ ಭವಂತು ಪುತ್ರಾಭಿವೃದ್ಧಿರಸ್ತು....[೪೩]

...... ಭಕ್ತಗಣಂಗಳಿಗೆ ಕೃಪೆಯಾಗಿ ಲೀಲಾ ವಿನೋದದಿಂದ ಬಂದಂತಾ ದೇವಾಪ್ರೃತ್ವಿ ಮಹಾ ಮಹತ್ತಿನೊಳಗಾದ ಷಟ್ಸ್ಥಲ ಲಿಂಗಾಂಗಭರಿತರಾದ ಮಳೆಯ ಸ್ವಾಮಿಯ ಕರ ಸರೋಜದಲ್ಲಿ ಜನಿಸಿದಂತಾ ಸುತ್ತೂರ ಕೊಟ್ಟಪ್ಪದೇವರು ಅವರ ಸುಗರ್ಭದುದ್ಭವರಾದ ಗುರುದೇವರು ನಂಮ್ಮ ಕಾರುಣ್ಯದ ಭಕ್ತರಾದ ಅಟ್ಟೆಹಳ್ಳಿಯ ಆನೆಯ ಬಸಟ್ಟಿಯರಿಗೆ ಆಯುರಾರೋಗ್ಯ ಆಯಿಶ್ವರ್ಯ್ಯಾಭಿವೃದ್ಧಿ ಪುತ್ರೋತ್ಸಾಹವಾಗಬೇಕೆಂದು ತ್ರಿಸಂಧ್ಯ ಕಾಲದಲ್ಲು ಪುಸ್ತಕವ ಬರೆದು ಕೊಟ್ಟಂತಾ ಪ್ರತಿಗೆ ಶುಭಮಸ್ತು ಶೋಭನಮಸ್ತು.....[೪೪]

**೫.೮. ಪಾಪ–ಪುಣ್ಯ**

'ಈ ಕಥೆಯನೊಲವಿಂದ ಕೇಳ್ದರ್ಗೆ ಪೇಳ್ದರ್ಗೆ ಶೋಕಭಯ, ದುಃಖ ಸಂಪಾಪಮಂ ಪಾಪಮಂ। ನೂರೆ ನಿರ್ಮಲತರ ಸುಬುದ್ಧಿಯಂ ಸಿದ್ಧಿಯಂ ಹರಿಕೊಡುತಿಹಂ ಕೃಪೆಯೊಳ್.[೪೫]

'ಭಂಡಾರಿದೇವರು ಸೆಟ್ಟಿ ತನಗೆ ಕೇವಲಜ್ಞಾನ ಪರಿಪ್ರಾಪ್ತಿ ನಿಮಿತ್ತವಾಗಿ ಕಾರ್ಕಳದ ಶಾಂತಿನಾಥ ಸ್ವಾಮಿಗಳ ಬಸ್ತಿಗೆ ಬರೆಸಿಕೊಟ್ಟ[೪೬]

"..... ಪಾಯಂಗಳು ತಮಗೆ ಪುಣ್ಯ ನಿಮಿತ್ತವಾಗಿ ಮಹಾ ಶ್ರೀಪಾಲ ಬರೆಸಿದರು ಭದ್ರಭೂಯಾತ್.[೪೭]

"ಹದುಳದಿಂದೊಮ್ಮೆ ಬರೆದೋದಿ ಕೇಳಿದವರ್ಗೆ ಕ್ಷಣದಲ್ಲಿಯೇ ಸರ್ವಪಾಪಕ್ಷಯ ಸಮಸ್ತ ದುಃಖ ನಿವೃತ್ತಿ ಸಧರ್ಮಭಿವೃದ್ಧಿ ಸಂಶಯ. ನಿರಾಹರಣ ಬುದ್ಧಿ ಶುದ್ಧಿ ವಿರಕ್ತಿ, ವಿವೇಕ ಶಿವಯೋಗ ಸಂಪತ್ತಿಸಂ ಉನ್ನತ ಸಿದ್ಧಿಮುಕ್ತಿಗಳಂ ಮಾಳ್ವದು, ಸತ್ಯವಹ ದಾಗೆ, ಸಾದಕಜನಂಗಳನ್ಯ ಶಾಸ್ತ್ರ ಸಂಭ್ರಮಗಳಲ್ಲಿ ಯಶಗೊಳದಿದನೇ ಶ್ರದ್ಧಾಭಕ್ತಿ ಪೂರ್ವಕವಾಗಿ ಶ್ರೀ ಗುರು ಮುಖದಿಂ ತಿಳಿದು ಕೃತಾರ್ಥರಾಗಲೆಂದು ಶ್ರೀರ್ಷದ ಲಕ್ಷಣ ಮಂಗಳಾಚರಣದಿಂ ಪರಿಸಮಾಪ್ತ....[೪೮]

"ಅಸಮ ಬಸವಪುರಾಣಂಮಂ ಪಸರಿಸುವವಂ ಪಾಪಂಗಳಂ ಪರಿಸುವನ ತುಳಿತ ಪುಣ್ಯವೆ ಸಂಪಂದು ಭೃತದ ಬೇರಾಂ ಸನ್ನವ ತಾಪತ್ತುಗಳರಂತಾ।ಡಿಸುವ ನಾಶಾವಾಶವಂದೇ। ರಿಸುವನೂಣರ್ಜಿತ ಭಕ್ತಿಯಂ ರಂಜಿಸುವನನವರತಾ.[೪೯]

ಪಾಪವು ಕೃತ್ಯವೆನಿಸಿದರೆ ಪುಣ್ಯವು ಅದರ ಪರಿಹಾರ ಸಾಧಕವಾಗಿ ಬಳಕೆಯಾಗಿದೆ. "ಪುನರಪಿ ಜನನಂ ಪುನರಪಿ ಮರಣಂ" ಮನುಷ್ಯ ಜನನ ಮರಣದ ನಡುವೆ ಪಾಪ-ಪುಣ್ಯಗಳು ಬರುವುದು ಸಹಜ. ಪಾಪದಿಂದ ಮುಕ್ತರಾಗಲು ಪುಣ್ಯವನ್ನು ಪಡೆಯಲು ಹಸ್ತಪ್ರತಿಗಳ ಸಂರಕ್ಷಣೆ ಸಂವರ್ಧನೆ ಉತ್ಪಾದನೆಯಂತಹ ಸಂಗೋಪನಕಾರ್ಯಗಳಲ್ಲಿ ಜ್ಞಾನ ಸಂರಕ್ಷಣೆಯೂ ಪಾಪದಿಂದ ಮುಕ್ತಿ ಹೊಂದಲು ಹಸ್ತಪ್ರತಿಗಳಂತಹ ಕೃತಿಗಳು ಪ್ರತೀಕರಣ ಹೊಂದುತ್ತಾ ಪಾಪನಿವಾರಣೆಗಾಗಿ ಪುಣ್ಯಸಂಪಾದನೆಗಾಗಿ ಹಸ್ತಪ್ರತಿಗಳ ಸಂರಕ್ಷಣೆಯ ಸಾಂಸ್ಕೃತಿಕ ವಲಯ ರೂಪಗೊಂಡಿತು. ಭಯ-ಭಕ್ತಿಯಿಂದ ಪಾಪ ನಿವಾರಣೆಗಾಗಿ ಆಹಾರ ಧಾನ್ಯಗಳ ದಾನದ ಜೊತೆಗೆ ಹಸ್ತಪ್ರತಿಗಳಂತ ಜ್ಞಾನ ಗ್ರಂಥಗಳನ್ನು ಪ್ರತೀಕರಣ ಮಾಡಿಸುವ ಕಾರ್ಯವನ್ನು ಕರ್ನಾಟಕದ ಜನ ಕೈಗೊಂಡಿದ್ದನ್ನು ಇಲ್ಲಿ ಗಮನಿಸಬಹುದು.

### ೫.೯. ಸಕಲೈಶ್ವರ್ಯ

ಯಿದ ಬರದವರು ಯಾರುಯೆಂದರೆ ಸುಲ್ತನಪುರ ಮಟದ ಪಟ್ಟದ ಚಿಕ್ಕವೀರಸ್ವಾಮಿಯವರ ಶಿಷ್ಯರಾದ ಹಂಜಿಗೆ ಬೊರಿನಲಿಂಗ ದೇವರು ಪಾತ್ರಾರಾನಾದ ಕಂಬೂಸೆ ಪ್ಲಾಟೆಯೆಲ್ಲು ಯಿಹಾ ಹಂಜಿಗೆ ರುದ್ರಮುನಿ ದೇವರೂ ಚೆಂನರಾಯ ಪಟ್ಟಣದ ಹೊಂನಬಂಡಿ ಜಕ್ಕಪ್ಪನವರ ಪುತ್ರನಾದ ತಿಪ್ಪಂಣಗೆ ಧನಕನಕ ವಸ್ತು ವಾಹನ ಪುತ್ರರು ಸಮ್ರುದಿಯಾಗಿ ಸುಖದಲ್ಲಿ ವಾಳಲೊಂದು ಹರಸಿ ಬರಕೊಟ್ಟ ರಾಘವಾಂಕಯ್ಯಗಳ ಕಾವ್ಯಕ್ಕೆ ಮಂಗಳ ಮಹಾಶ್ರೀ[೫೦]

...... ಬರೆದು ಹೆಚ್ಚಿತು ಬರದಾತನು ಶಿಲಾಪುರಿಯಲ್ಲಿಯಿರುವಂತಾ ವುಪಾದ್ಯ ನಂದ್ಯಪೈಯ್ಯನವರ ಮಗ ಸುಖರಾಯನು ಶ್ರೀಮಾದೇಶ್ವರಸ್ವಾಮಿ ಸಂಗೀತವನ್ನು ಬರೆದು ಹಚ್ಚಿದಂತಾ ಪುಸ್ತಕವನ್ನು ಮಾದೇಶ್ವರ ಬೆಟ್ಟದಲ್ಲಿಯಿರುವ ಪುಟ್ಟ ಮಾದಮ್ಮಡಿ ಮಕ್ಕಳು ಹಲಗೆ ವೀರತಮ್ಮಡಿ ಸಹಾ ಪುತ್ರ ಮಿತ್ರ ಕಳತ್ರ ಭೋಗ ಭಾಗ್ಯ ಧನಕನಕ ವಸ್ತು ವಾಹನವಾಗಿ ವಾಳಲಿಯೆಂದು ಆ ಚಂದ್ರ ತಾರಾರ್ಕ ಅಭಿವೃದ್ಧಿಯಾಗಿ ಶ್ರೀ ಮಾದೇಶ್ವರ ಸ್ವಾಮಿಯವರ ಕರುಣಾ ಕಟಾಕ್ಷವಾಗಿ ಬಾಳಲಿಯೆಂದು ಹರಶಿಕೊಟ್ಟಂತಾ ಮಾದೇಶ್ವರ ಸ್ವಾಮಿಯವರ ಸಂಗೀತದ ಪುಸ್ತಕಕ್ಕೆ ಜಯಮಂಗಳ ಮಹಾಶ್ರೀ[೫೧]

### ೫.೧೦. ಸ್ವಪ್ರಯೋಜನ, ಪರಪ್ರಯೋಜನಕ್ಕಾಗಿ

"ಬರದಾತ ಮಹಿಶೂರನಗರದ ಲಕ್ಷ್ಮೀರಮಣಸ್ವಾಮಿಯವರ ದೇವಸ್ಥಾನದ ಸ್ಥಾನಿಕ ಲಕ್ಷ್ಮೀರಮಣಪ್ಪನವರ ಮಗ ಕೃಷ್ಣಯ್ಯನು ತಾನು ತನಗೆ ಬರೆದ ಭಾರತ ಪುಸ್ತಕ" ಇಲ್ಲಿ ಗ್ರಂಥಪ್ರೇಮಿ ಲಿಪಿಕಾರ ಸ್ವಪ್ರಯೋಜನಾರ್ಥ ಲೇಖನಕಾರ್ಯ ಮಾಡಿದ್ದಾನೆ.[೫೨]

"ಅನುಭವಾಮೃತವಂನ್ನು ಜವಳಿ ಅಂಗಡಿ ಕಾಳಿದಾಸ್ಯೆಯ್ಯನಿಗೆ ವುಪಾದ್ಯ ವೆಂಕಟ್ಟೆಯ್ಯನು ಬರೆದುಕೊಟ್ಟಂತಾ ಪುಸ್ತಕಾ" ಇಲ್ಲಿ ಪರಪ್ರಯೋಜನಾರ್ಥ ಹಸ್ತಪ್ರತಿಯನ್ನು ನಕಲು ಮಾಡಲಾಗಿದೆ. ಅನೇಕ ಸಲ ಈ ಪರಪ್ರಯೋಜನಾರ್ಥವೆಂಬುದು ತಂದೆ-ಮಕ್ಕಳ ಸಂಬಂಧ ಗುರು-ಶಿಷ್ಯ ಸಂಬಂಧ, ಸ್ನೇಹ ಸಂಬಂಧವನ್ನು ವ್ಯಾಪಿಸಿದೆ.[೫೩] "ಚೆನ್ನಪಟ್ಟಕೆ ವಳಿತವಾದ ಹೊಂಗನೂರು ನಾರಾಣೈಯ್ಯನು ತನ್ನ ಮಗನಿಗೆ ಬರೆದುಕೊಟ್ಟ ಮೂಲಪ್ರತಿಯನ್ನು ನೋಡಿ ಬರೆದದ್ದು"[೫೪]

"...... ಪುರಾಣದ ಕಲ್ಲಯ್ಯ ದೇವರ ಕುಮಾರನಾದ ಗುರುವರ್ಯದೇವರು ತಮ್ಮ ಸ್ವಹಸ್ತದಿಂದ ತಮ್ಮ ತಂದೆಗೆ ಈ ಶಾಸ್ತ್ರ ಬರೆದುಕೊಟ್ಟ"[೫೫]

ಪುರಾಣದ ವಿರುಪಾಕ್ಷದೇವರ ಮಗ ವೀರಣ್ಣೊಡೆಯದೇವರು ತಮಗೆ ಬರೆದ ಸೋನೆಯ ಪುಸ್ತಕ"[೫೬]

"ಶ್ರೀ ಶಾಂತಿಮತಿ ಅವ್ವಗಳ ಜೀಯನವರು ತಮಗೆ ಕೇವಲ ಜ್ಞಾನಪ್ರಾಪ್ತಿ ನಿಮಿತ್ತವಾಗಿ ಬರೆದಂಥಾ ಹಿರೇಪಂಚಪರಮೇಷ್ಠಿಗಳ ವ್ಯಾಖ್ಯಾನ"[೫೭]

".... ಸಿದ್ಧಲಿಂಗದೇವರಿಗೆ .....ಪರ್ವತದೇವರು ಕೃಪೆಯಿಂದ ಬರೆದ ಬಸವೇಶ್ವರ ದೇವರ ವಚನ"[೫೮]

"ವಿಕಾಂ ಸಂವತ್ಸರದ ಜೇಷ್ಠ ಬ೭ಿಯಲ್ಲು ಹಂಪಯ್ಯನ ಮಟದ ಕಾಶಿದೇವರು ಭೋಗದೇವರು ಮಟದ ಕಂಥೆ ಸಂಗೈಯ್ಯನವರಿಗೆ ಅಂಬಿಗರ ಹಳ್ಳಿಯ ಸಂಗನಬಸವನ ಕೈಯ್ಯ ಬರೆಯಿಸಿಕೊಟ್ಟ ಲೀಲೆ ಪುಸ್ತಕ"[೫೯]

ವ್ಯಕ್ತಿಗಳ ಅಧ್ಯಯನಕ್ಕಾಗಿ, ಸಮುದಾಯದ ಪ್ರಯೋಜನಕ್ಕಾಗಿ ಲಿಪಿಕಾರರು ಬರೆದುಕೊಟ್ಟಿರುತ್ತಾರೆ. ಕೈವಲ್ಯ ಜ್ಞಾನಕ್ಕಾಗಿ ಲಿಪಿಕಾರರ ಇತಿ ವೃತ್ತವನ್ನು ತಿಳಿಸುವ ಸಂಸ್ಕೃತಿಯನ್ನು ಕಟ್ಟಿಕೊಡುತ್ತವೆ. ಸ್ವ ಮತ್ತು ಪರ ಫಲದ ನೆನವಿಗಾಗಿ ಜೀವನದ ಸರ್ವಕಲ್ಯಾಣಕ್ಕಾಗಿ ಜ್ಞಾನವನ್ನು ಸಂರಕ್ಷಿಸುತ್ತಾ ಬಂದಿದ್ದಾರೆ. ಬರಹ ಸಾಧನವಾದ ಗ್ರಂಥಗಳನ್ನು ಸಾಂಸ್ಕೃತಿಕ ಸಂರಕ್ಷಣಾ ಮಾದರಿಯಲ್ಲಿ ಕಾಪಾಡಿಕೊಂಡು ಬಂದರು.

"ಕಷ್ಟೇನ ಲಿಖಿತಂ ಮಯ, ಯತ್ನೇನ ಪರಿಪಾಲಯೇತ್"[೬೦] ಎಂದು ನಮ್ಮ ಹಸ್ತಪ್ರತಿ ಲಿಪಿಕಾರರು ಆಗಾಗ ಹೇಳಿದುದುಂಟು. ಕಷ್ಟಪಟ್ಟು ಬರೆದಿದ್ದೇನೆ, ಪ್ರಯತ್ನ ಪೂರ್ವಕ ರಕ್ಷಿಸಿರಿ ಎಂದು ಸಮಸ್ತ ಲಿಪಿಕಾರರ ಪ್ರತಿನಿಧಿಯಾಗಿ ಇಲ್ಲಿ ಹೇಳಲಾಗಿದೆ. ಇವರಂತೆ ಕೃತಿಕಾರರು

> ".... ಬರೆದಂಗೆ ಬರೆದಂಗೆ ವಾಚಿಪಂ।
> ಗುರುತರಾನಂದದಿಂದದರ ತಾತ್ಪರ್ಯಮಂ ವಿಸ್ತರಿಸಿ ಪೇಳ್ದವಂಗೆ।
> ಪರಮಸದ್ಭಕ್ತಿಯಿಂದಾದರಿಸಿ ಕೇಳ್ದಂಗೆ...
> ಸಕಲಸೌಭಾಗ್ಯಗಳು ಒದಗಿಬರಲಿ ಎಂದು ಹಾರೈಸಿದ್ದಾರೆ.[೬೧]

ಶಾಸ್ತ್ರದಾನ, ಕರ್ಮನಿವಾರಣೆ ಸಕಲಸೌಭಾಗ್ಯಗಳು ಮೊದಲಾದ ಉದ್ದೇಶಗಳಿಂದ ಲಿಪಿಕಾರರ ಕಳಕಳಿಯ ಮನೋಭಾವನೆಯನ್ನು ಒಳಗೊಂಡ ಸಾಂಸ್ಕೃತಿಕ ವಲಯ ರೂಪುಗೊಂಡಿದೆ.

ಮಠಗಳು ಗ್ರಂಥೋತ್ಪಾದನೆ, ಗ್ರಂಥ ಸಂರಕ್ಷಣೆ, ಗ್ರಂಥ ಸಂವರ್ಧನೆಯ ಕೇಂದ್ರಗಳಾಗಿ ಧಾರ್ಮಿಕ ಉದ್ದೇಶ ಒಂದೇ ಅಲ್ಲದೇ ಸಾಮಾಜಿಕ, ಸಾಮುದಾಯಿಕ ಸಾಂಸ್ಕೃತಿಕ ವಲಯವನ್ನು ಸಮೃದ್ಧಿಗೊಳಿಸುವ ಮೂಲಕ ಜ್ಞಾನ ಸಂರಕ್ಷಣೆಯನ್ನು ಸಮಾಜಮುಖಿಯಾಗಿ ಮಾಡಿದರು. ಈ ಕೆಳಗಿನ ಉಲ್ಲೇಖವು ತಿಳಿಸುವಂತೆ

"ಓದಿಸುವ ಬಿದರಹಳ್ಳಿ ಮಠದಲ್ಲಿ ಕುಳಿತು ಮುಗಿಯ ಬರಹ ಮಲ್ಲಪ್ಪದೇವರ ಹಸ್ತಾಂತರ...."[೬೨]

"ಜಂಬುಕಂಡಿಯ ಬದಿಯ ತೇರದಳವೆಂಬ ಗಾಳಿಪೆಟ್ಟೆಯಲ್ಲಿ ವಿರಕ್ತಮಠದಲ್ಲಿ.... ಬರದ ಪುಸ್ತಕವು"[೬೩]

"....ಮಂಗಳ ದೇಶದ ಲಕ್ಷ್ಮಣೇಶ್ವರ ತೋಟಸ್ವಾಮಿಗಳ ಮಟದಲ್ಲಿ ಬರೆದ ಬಸವೇಶ್ವರನ ಪುರಾಣ...."[೬೪]

### ೫.೧೧. ಇನ್ನಿತರ ಉದ್ದೇಶಗಳಿಗಾಗಿ

"ಯಿ ಪುರಾಣದ ಕೇಳ್ದು ವಂದಿಸಿ ಪೂಜಿಸಿ ಅರ್ಜಿಸಿದವರಿಗೆ ಅನೇಕ ಜಲ್ಮಗಳಲ್ಲಿ ಉತ್ತಮ ಪುರುಷತ್ವಹುದು.... ಶ್ರೀ ಈರಪಯನ ಮಗ ಶಿವನ್ಯೆಯನ ಮಗ ನಾಗೈಯ ಬರದ ವಿಶ್ವಕರ್ಮ ಪುರಾಣ"[೬೫]

"..... ಕುಮಾರ ಬಸಪ್ಪನು ಕಟ್ಟೆಹಳ್ಳಿ ಕಲ್ಯಾಣಪ್ಪನ ಕುಮಾರ ರುದ್ರಪ್ಪನಿಗೆ ಪುತ್ರ ಮಿತ್ರ ಕಳತ್ರ ಧನ ಧಾಂನ್ಯ ಅಕ್ಷರಭ್ಯಾಸ ಐಶ್ವರ್ಯ ವೃದ್ಧಿಯಾಗಲೆಂದು ಹರಸಿ ಬರಕೊಟ್ಟ ಶರಣಲೀಲಾಮೃತ ಪುಸ್ತಕ...."[೬೬]

ಬರಹವನ್ನು ಆರಂಭಿಸುವ ಮತ್ತು ಮುಗಿಸುವ ಕ್ರಿಯೆಗಳು ಒಂದು ಸಾಂಸ್ಕೃತಿಕ ಚರಿತ್ರೆಯನ್ನೇ ಸಂಕಥನಿಸುತ್ತವೆ. ".... ಶ್ರೀ ಗಣಾಧಿಪತಯೇನಮಃ ಶ್ರೀಗುರುವೇಗತಿ॥ ನಂಜನಗೂಡು ನಂಜುಂಡೇಶ್ವರ ಸ್ವಾಮಿಯವರ ಪಾದವೇಗತಿ। ರವ್ರುದ್ಧಿ ಸಂವತ್ಸರದ। ವೈಶಾಖ೧೧೫/೨ ಉಲ್ಲು। ಪಾರ್ವತಿ ಕೊರವಂಜಿ ಯಕ್ಷಗಾನ ಪುಸ್ತಕ ಬರೆಯುವುದಕ್ಕೆ ಶುಭಮಸ್ತು॥ ಪರಮ ಪಾವನ ಕಾಯ ಸಂಪಗತ ನಿರ್ಮಾಯಾ ಶರಣ ಜನ ಮಂದಾರಸಾರ ಕರುಣಾಕರ ವರಮಂತ್ರದಾಗರ ವರವಿಲಾಕಾರ ನಂದಿಸಂವದ್ಧರ್ಕ! ಪೂರಯವುತಿಹ ನಮ್ಮ ಗುರು ಚನ್ನವೀರೇಶನ। ಚರಣ ಸರಸಿಜನರ ಹೃತ್ಕಮಲದೊಳಗಿಟ್ಟು ವರದೆ ನಾ ನೀ ಕದಂಬ ನೀತಿ ಮಾಲಿಕೆಯ ಬರೆದೋದಿ ಲಾಲಿಸುವುದು॥೧॥ "ಶ್ರೀ ಗುರುಲಿಂಗಾಯ ನಮಃ ಖರ್ಚು ವೆಚ್ಚದ ವಿವರವು"॥ – ಕೃತಿಗಳ ಆರಂಭಿಕ ಪದ್ಯಗಳು ಕೃತಿಯ ಆರಂಭವೇ ದೈವೀನೆಲೆಯಲ್ಲಿ (ನಿರ್ದಿಷ್ಟ) ನಿರ್ವಿಘ್ನ ಮತ್ತು ಆಯುರಾರೋಗ್ಯ ಭಾಗ್ಯಗಳನ್ನು ಅಪೇಕ್ಷಿಸುತ್ತದೆ. ನಿರ್ದಿಷ್ಟ ತೇದಿಗಳೊಂದಿಗೆ ಆರಂಭ ಪಡೆಯುವುದರ ಹಿಂದೆ ಶುಭ ಮತ್ತು ಅಶುಭಗಳ ಕಲ್ಪನೆ ಅಡಗಿದ್ದು ಸ್ಪಷ್ಟವಾಗುತ್ತದೆ.[೬೭]

ಧಾರ್ಮಿಕವಾದ ಪುರಾಣ, ಚರಿತ್ರೆ, ಮಹಿಮೆ, ಲೀಲೆ, ಸ್ತೋತ್ರ ಇತ್ಯಾದಿ ಹಸ್ತಪ್ರತಿಗಳೇ ಲೌಕಿಕ ಜೀವನದ ಸಮೃದ್ಧಿಗೆ ಕಾರಣವಾಗುತ್ತವೆ ಎಂಬ ನಂಬಿಕೆಯು ಕಾಲಾಂತರದಲ್ಲಿ ಯಾವುದಾದರೂ ಒಂದು ಹಸ್ತಪ್ರತಿಯನ್ನು ರಚಿಸಿ ಪೋಷಿಸಿದರೆ ಸಾಕು ಲೌಕಿಕ ಸಂಪದ ಪ್ರಾಪ್ತವಾಗುತ್ತದೆಂಬ ವಿಶ್ವಾಸಕ್ಕೆ ದಾರಿ ಮಾಡಿಕೊಟ್ಟಿರಬೇಕೆನಿಸುತ್ತದೆ. ಇಲ್ಲವೆ ಧಾರ್ಮಿಕ ದೃಷ್ಟಿಯೇ ಪ್ರಧಾನವಾಗಿ ಧಾರ್ಮಿಕ ಕಥಾವಸ್ತುಗಳನ್ನೊಳಗೊಳ್ಳದ ಶಾಸ್ತ್ರಾದಿ ಗ್ರಂಥಗಳು ಕಾಲಾಂತರದಲ್ಲಿ ಪೋಷಕರಿಲ್ಲದೆ ಅಳಿದು ಹೋಗಬಾರದೆಂಬ ಉದ್ದೇಶವು ಕೂಡ ಇಂಥ ಕಲ್ಪನೆಯ ಹುಟ್ಟಿಗೆ ಕಾರಣವಾಗಿರಬಹುದು.[೬೮] ಜ್ಞಾನ ಸಂರಕ್ಷಣೆಯು ಧಾರ್ಮಿಕವಾಗಿ ಸಂರಕ್ಷಣೆಯ ಒಂದು ಭಾಗವಾಗಿ ಮಾತ್ರ ಕಾಣಿಸಿಕೊಳ್ಳದೇ ನಂಬಿಕೆ ಪ್ರಧಾನವಾದ ಧಾರ್ಮಿಕೇತರ ಸಂರಕ್ಷಣೆ ರೂಪದಲ್ಲಿಯೂ ನಡೆಯುತ್ತ ಬಂದಿದೆ. ಸಾಂಸ್ಕೃತಿಕ ಸಮುದಾಯ ಪ್ರಧಾನವಾದ ನೆಲೆಯಲ್ಲಿ ಗ್ರಂಥಗಳನ್ನು ಸಂರಕ್ಷಣೆ, ಸಂವರ್ಧನೆ ಸಂಗೋಪನೆ ಮಾಡುತ್ತಾ ಬರಲಾಯಿತು. ಹೀಗಾಗಿ ಕನ್ನಡ ಸಂಸ್ಕೃತಿಯನ್ನು ಗ್ರಂಥ ಸಂರಕ್ಷಣೆಗೆ ಅತಿದೊಡ್ಡ ಇತಿಹಾಸವಿರುವುದು ಗಮನಾರ್ಹ.

"..... ಇಂತೆಂಬುದಾಗಿ ಈ ಪುಸ್ತಕಂ ಬರವರ್ಗಂ ಓದುವರ್ಗಂ ಶಿವಾನುಭಾವವಂ ನಿರೂಪಿಸುವರ್ಗಂ ಸಹಸ್ರಕೋಟಿ ನಮಸ್ಕಾರಮಂ ಮಾಡುತ್ತೇನೆ। ಯನ್ನ ಭಿನ್ನಪವನವಧರಿಸಿ ಲಾಲಿಸುವರ್ಗಂ ಸಹಸ್ರಕೋಟಿ

ನಮಸ್ಕಾರವಂ ಮಾಡುತ್ತಿದ್ದೇನೆ. ಯಿದಂ ಬರದ ನಿಮ್ಮ ಕರುಣದ ಕಂದನಿಗೆ ನಿಮ್ಮ ಕೃಪಾಮೃತ ರಸವನೆಱೆದು ನೋಡಿ ಸಲಹಿ ನಿಮ್ಮ ಶ್ರೀಪಾದ ಪದ್ಮಾರಧನೆಯಯೆಂದೆಂದು ಪಿಂಗದಂತೆ ಮಾಡಯ್ಯ ಲಿಂಗ ತಂದೆ ಶರಣು ಶರಣಾರ್ಥಿ"[೬೯]

"..... ಕಾವ್ಯವಿದು ಭುವನದೊಳ್ ಸಕಲಜನರಿಂದ ಸುಶ್ರಾವ್ಯಮಪ್ಪಂತೆ"[೭೦] ".... ಈ ಕಥೆಯನೊಲವಿಂದ ಕೇಳ್ದರ್ಗೆ ಪೇಳ್ದರ್ಗೆ ಶೋಕಭಯ ದುಃಖಭಯ ಸಂಪಾಪಮಂ ಪಾಪಮಂ ನೂಕಿ ನಿರ್ಮಲತರ ಸುಬುದ್ಧಿಯಂ ಸಿದ್ಧಿಯಂ ಹರಿಕೊಡುತಿಹಂ ಕೃಪೆಯೊಳು"[೭೧] ಲಕ್ಷ್ಮೀಶ ಕವಿಯ ಈ ಎರಡು ಉಲ್ಲೇಖಗಳು ಕಾವ್ಯದ ಬಹುವಿಧ ನೆಲೆಗಳನ್ನು ಬಹುವಿಧ ಫಲಗಳನ್ನು ಹೇಳುತ್ತವೆ. ಒಂದು ಹಸ್ತಪ್ರತಿ(ಲಿಖಿತ ಕೃತಿ) ಬರೀ ಅಕ್ಷರ ಸಮೂಹದ ಒಂದು ರಚನೆಯಾಗದೆ ತನ್ನ ಕಾಲದ ಹಲವು ವೈರುಧ್ಯ ಹಾಗೂ ವೈವಿಧ್ಯತೆಗಳನ್ನು ಗರ್ಭೀಕರಿಸಿಕೊಂಡಿರುತ್ತದೆ. ಹೀಗಾಗಿ ಅದರ ಆಂತರಿಕ ಸ್ವರೂಪದ ಅಧ್ಯಯನ ಧರ್ಮ ನಿರಪೇಕ್ಷಿತವಾದ ಒಂದು ಬಹುಮುಖಿ ಸಾಂಸ್ಕೃತಿಕ ರಚನೆಯ ವಿನ್ಯಾಸ ಎನ್ನುವುದು ಮುಖ್ಯವಾಗಿದೆ. ವಚನಗಳನ್ನು ಹರಿಹರ ತನ್ನ ರಗಳೆಗಳಲ್ಲಿ ಚಾಮರಸ ಪ್ರಭುಲಿಂಗಲೀಲೆಯಲ್ಲಿ ಶೂನ್ಯ ಸಂಪಾದನಕಾರರು ಶೂನ್ಯ ಸಂಪಾದನೆಗಳಲ್ಲಿ ಬಳಸಿಕೊಂಡ ರೀತಿ ಅರ್ಥೈಹಿಸಿಕೊಂಡ ಬಗೆಗಳು ಬಹುಮುಖಿ ಸಂವೇದನೆಗಳ ದೃಷ್ಟಿಯಿಂದ ಅಭ್ಯಾಸಾರ್ಹವಾದಂಥವು.

ಮಾನವ ಜನಾಂಗದ ಸಾಂಸ್ಕೃತಿಕ ಪರಂಪರೆಯ ಮಹತ್ವವನ್ನು ಹಸ್ತಪ್ರತಿಗಳು, ಚಿತ್ರಗಳು, ಪುಸ್ತಕಗಳು, ಕಡತಗಳು, ದಾಖಲೆಗಳು ಪ್ರತಿಬಿಂಬಿಸುತ್ತವೆ. ಇವುಗಳು ಜನರ ಜೀವನಶೈಲಿ, ಜೀವನ ಪದ್ಧತಿ, ಧರ್ಮ, ಸಂಸ್ಕೃತಿ, ಪರಂಪರೆ ಸಂಪ್ರದಾಯ ಹಾಗೂ ನಾಗರಿಕತೆ ಇವುಗಳೆಲ್ಲವನ್ನು ಒಳಗೊಂಡಂತೆ ದೇಶದ ಐತಿಹಾಸಿಕ ಮಹತ್ವವನ್ನು ಗುರುತಿಸುತ್ತಿದ್ದು, ಇವೆಲ್ಲವೂ ನಮ್ಮ ಪೂರ್ವಜರು ನಮಗಿತ್ತ ಸಂಸ್ಕೃತಿ-ಪರಂಪರೆಯ ಆಧಾರ ಸ್ಥಂಭಗಳಾಗಿವೆ. ಮಾನವ ಚರಿತ್ರೆ ಈ ಎಲ್ಲಾ ದಾಖಲಾತಿಗಳಲ್ಲಿಯೂ ಅತಿ ಪ್ರಮುಖವಾಗಿರುವುದು ಈ ಪತ್ರ ದಾಖಲೆಗಳು ವಿವಿಧ ಭಾಷೆಗಳಲ್ಲಿ ವಿವಿಧ ಮಾದರಿಗಳಲ್ಲಿ ಮತ್ತು ವಿವಿಧ ರೂಪ-ಆಕಾರಗಳಲ್ಲಿ ಇರುತ್ತದೆ.

### ೫.೧೨. ಸಂರಕ್ಷಣೆ ಮತ್ತು ಬಳಕೆ ಸಂಸ್ಕೃತಿ

ಮನಗೆ ಮರ ಕಡಿಯಬೇಕಾದರೆ ಮೊದಲು ಮರದ ಹತ್ತಿರ ಹೋಗಿ ಹಾಲುಜೇನು ತುಪ್ಪದ ಎರೆದು ಆಹ್ವಾನ ನೀಡಿ ಸಕಲ ದೇವತೆಗಳನ್ನು ನೆನೆದು ಮರದ ಕ್ಷಮೆ ಕೋರಿ ಬರಬೇಕು. ಹಾಗೆ ಕಡಿಯುವ, ಕೊಡಲಿ ಮತ್ತು ಬಾಚಿಗೆ ಉದಕ ಮತ್ತು ಜೇನುತುಪ್ಪ ತೊಡೆದು ಕಡಿದರೆ ಮರ ಹದವಾಗಿ ಹರಿಯುವುದಲ್ಲದೆ ಹುಳಿಯದು ಮತ್ತು ಹುಳು ಹತ್ತದು. ಈ ವಿವರ ನಿಸರ್ಗಕ್ಕೂ ಜೀವವಿದೆ. ಅದರ ಬಳಕೆ ಮಾನವೀಯತೆಯಿಂದ ನಡೆಬೇಕೆನ್ನುವ ಜೀವಪರ ನಿಲುವನ್ನು ತೋರುತ್ತದೆ. ಇನ್ನು ಕುತೂಹಲದ ಸಂಗತಿಗಳೆಂದರೆ ಹಕ್ಕಿ ಗೂಡು ಕಟ್ಟಿದ ಮರವು, ಬಳ್ಳಿಸುತ್ತಿದ ಮರವ ತಪಸ್ವಿಗಳಾಶ್ರಯದ ಮರವ ಕಡಿಯಬಾರದು ಎನ್ನುವಲ್ಲಿ ವಾಸ್ತುವಿನ ಮಹೋನ್ನತ ಜೀವಪರ ಕಾಳಜಿ ಎದ್ದು ಕಾಣುತ್ತದೆ. ಹಾಗೆ ಫಲ

ಬಿಡುವ ಹೂ ಬಿಡುವ ಮರಗಳನ್ನು ಕಡಿಯಬಾರದು ಎಂದು ಹೇಳುವ ಮೂಲಕ ಜೀವ ವೈವಿಧ್ಯತೆಯನ್ನು ಗೌರವಿಸುವ ವಿವೇಕಯುತ ನಡುವಳಿಕೆಯನ್ನು ಕಾಣುತ್ತೇವೆ.

ಹಸ್ತಪ್ರತಿಗಳಲ್ಲಿ ಖಗೋಳಶಾಸ್ತ್ರ, ಗಣಿತ, ವೈದ್ಯಕೀಯ, ಸಂಗೀತ, ಸಾಹಿತ್ಯ, ವ್ಯಾಕರಣ, ಇತಿಹಾಸ, ಜ್ಯೋತಿಷ್ಯಶಾಸ್ತ್ರ, ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ, ಚಿತ್ರಕಲೆಗಳು, ಧರ್ಮಶಾಸ್ತ್ರ ಮುಂತಾದ ಅತ್ಯಮೂಲ್ಯವಾದ ವೈವಿಧ್ಯಮಯ ವಿಷಯಗಳನ್ನು ಒಳಗೊಂಡಿವೆ. ಜನಮುಖಿ ಮತ್ತು ಸಮುದಾಯಮುಖಿ ಪರವಾದ ಪಠ್ಯಗಳು ಸಾಂಸ್ಕೃತಿಕ ಮಹತ್ವವನ್ನು ಕಟ್ಟಿಕೊಡುತ್ತವೆ. ಉದಾಃ ರಟ್ಟಮತ ಗ್ರಂಥ ಮಳೆ, ಬೆಳೆ, ಭೂಮಿ, ರಾಶಿ, ನಕ್ಷತ್ರ ಜ್ಯೋತಿಷ್ಯ ವಿವರಗಳನ್ನು ಕುಮಾರವ್ಯಾಸನ ಗದುಗಿನ ವಿರಾಟ ಪರ್ವ ಮಳೆಗಾಗಿ ಮಾಡುವ ಸಾಮುದಾಯಿಕ ಪ್ರಾರ್ಥನೆಯ ಭಾಗವಾಗಿ ಬಿಂಬಿತವಾಗಿವೆ.

ನಮ್ಮಲ್ಲಿ ಬಹುಮುಖಿ ಶಿಸ್ತುಗಳು ಹಸ್ತಪ್ರತಿಗಳಲ್ಲಿವೆ. ಅದರಲ್ಲಿ ಇತಿಹಾಸವಿದೆ, ಸಮಾಜವಿಜ್ಞಾನವಿದೆ ಭಾರತೀಯ ವಿದ್ಯೆಗಳಾದ ವೈದ್ಯ, ಜ್ಯೋತಿಷ್ಯ, ಭವಿಷ್ಯ, ವಾಸ್ತುತಂತ್ರ ಸಾಹಿತ್ಯವಿದೆ ಮತ್ತು ಧರ್ಮಶಾಸ್ತ್ರಗಳಿವೆ. ವಿಶೇಷವಾಗಿ ಮಠಮಾನ್ಯಗಳು ಕೈ ಹಾಕಿರುವಂತಹದ್ದು ತಮ್ಮಲ್ಲಿ ಕತ್ತಲೆ ಕೋಣೆಯಲ್ಲಿ ಇದ್ದಂತಹ ಹಸ್ತಪ್ರತಿಗಳನ್ನೆಲ್ಲ ಹೊರಕ್ಕೆ ತೆಗೆದು ಅವುಗಳನ್ನು ಒಂದು ವ್ಯವಸ್ಥಿತವಾಗಿ ಜೋಡಿಸಿ, ಸಾರ್ವಜನಿಕರಿಗೆ ತಿಳಿಯುವ ಹಾಗೆ ಅವುಗಳ ಸೂಚಿ ತಯಾರಿಕೆಯ ಕಡೆಗೆ ಗಮನವನ್ನು ಹರಿಸಿದ್ದು, ಸಂರಕ್ಷಣೆಯ ಬಗ್ಗೆ ವಿಶೇಷವಾದ ಗಮನಹರಿಸಿದ್ದು. ಧಾರ್ಮಿಕವಲ್ಲದೆ ಸಾಮಾಜಿಕ ಸಾಂಸ್ಕೃತಿಕ ನೆಲೆಗಟ್ಟನ್ನು ಕಟ್ಟಿಕೊಡುತ್ತವೆ. ಅಷ್ಟೇ ಅಲ್ಲದೆ ಹಸ್ತಪ್ರತಿಗಳಂತ ಪ್ರಾಚೀನ ಸಾಹಿತ್ಯ ಗ್ರಂಥಗಳನ್ನು ಸಾಂಸ್ಕೃತಿಕ ಅಧ್ಯಯನದಲ್ಲಿ ಅಭ್ಯಸಿಸುವುದು ಅತ್ಯಂತ ಮಹತ್ವದಾಗಿದ್ದು ಬಹುಮುಖಿಯಿಂದ ಕೂಡಿರುವಂಥದ್ದು.

ಕನ್ನಡ ಹಸ್ತಪ್ರತಿಗಳ ಸಾಂಸ್ಕೃತಿಕ ಸಂರಕ್ಷಣೆಯಲ್ಲಿ ಕುಶಲಕರ್ಮಿಗಳಾದ ಬಡಿಗ, ಕಮ್ಮಾರ, ಲೋಹಾರ, ವಸ್ತ್ರದ, ಓಲೆಯು, ಚಿತ್ರಕ, ಲಿಪಿಕಾರ ಬರೆಪಕಾರರಂತ ಹಲವು ರೀತಿಯ ಸಮುದಾಯಗಳು ಸಾಲಿಮಠ, ಓಲೆಮಠ, ಟೀಕಿನಮಠಗಳಂತಹ ಸಂಘ ಸಂಸ್ಥೆಗಳು ಗೃಹ ಉದ್ಯಮಗಳು ಇಂಥ ಕುಶಲಗಾರರ ಕಲಿಕೆಯ ಮತ್ತು ಉಪಜೀವನ ತಾನಗಳಾಗಿದ್ದವು. ನಮ್ಮಲ್ಲಿ ಸಿಗುವ ಹಲವು ಪಠ್ಯಗಳು ಆಯಾಕಾಲದ ವೈವಿಧ್ಯಮಯ ಅಥವಾ ವೈರುಧ್ಯ ತುಂಬಿದ ಸಾಮಾಜಿಕ ರಚನೆಯ ಪ್ರತೀಕಗಳು ಇವು ಎಲ್ಲವೂ ಬದುಕಿನ ಭಿನ್ನ ದೃಷ್ಟಿಕೋನಗಳಲ್ಲಿ ಅರಳಿದಂಥವು. ಪಾಂಡಿತ್ಯಕ್ಕಾಗಿ, ಆಶ್ರಯದಾತನ ಋಣ ತೀರಿಸಲಿಕ್ಕಾಗಿ, ಪ್ರಯೋಗಕ್ಕಾಗಿ, ಜ್ಞಾನಕ್ಕಾಗಿ, ದಾನಕ್ಕಾಗಿ, ಓದಿಗಾಗಿ, ಕೂಲಿಗಾಗಿ ರೋಗ ಪರಿಹಾರಾರ್ಥವಾಗಿ, ಹವ್ಯಾಸವಾಗಿ, ಮತೀಯ ಅಸ್ತಿತ್ವಕ್ಕಾಗಿ ರೂಪಗೊಂಡ ಹಲವು ಕೃತಿ ಪ್ರತಿಗಳು ನಮಗೆ ದೊರೆಯುತ್ತವೆ., ಜ್ಞಾನ ಸಂರಕ್ಷಣೆ, ಸಂವರ್ಧನೆ, ಸಂಗೋಪನೆಯಲ್ಲಿ ಸಾಂಸ್ಕೃತಿಕ ಸಂರಕ್ಷಣೆಯೂ ಬಹುಮುಖಿ ನೆಲೆಯಲ್ಲಿ ನೋಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ತತ್ವಪದಕಾರರು, ಅವಧೂತರು, ಸೂಫಿಗಳು ತಮ್ಮ ಅನುಭಾವದ ಹಾಡುಗಳಿಂದ ಸಾಂಸ್ಕೃತಿಕವಾಗಿ ಜ್ಞಾನದ ಸಂರಕ್ಷಣೆ ಹಾಗೂ ವಿಕಾಸ ಮಾಡುತ್ತಿದ್ದರು.

ಮುಖ್ಯವಾಗಿ ಓಲೆಗರಿ, ತಾಮ್ರಪತ್ರ ಕಾಗದ ಒಳಗೊಂಡ ಗ್ರಂಥಗಳಿಂದ ಸಾಹಿತ್ಯ ರಕ್ಷಣೆ ಮಾಡಲಾಗಿದೆ. ಬಾಯಿಂದ ಬಾಯಿಗೆ ವ್ಯಕ್ತಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ ಹೇಳುವ ಮತ್ತು ಕೇಳುಗ ನಡುವೆ ನಡೆಯುವ ಜ್ಞಾನದ ವಿತರಣೆಯೂ ಸಂರಕ್ಷಣೆಯಾಗಿದ್ದು, ಸಂವಹನ, ಸಾಮುದಾಯಿಕ ಜನಸಾಮಾನ್ಯರ ಪರವಾದ ಸಾಂಸ್ಕೃತಿಕ ವಲಯದ ಮೂಲಕ ಸಂರಕ್ಷಣೆ ನಿರಂತರವಾಗಿ ನಡೆಯುತ್ತಾ ಬಂದಿದೆ.

.....ಯಿದರ ವಿಚಾರ ಮಾಡಿದವರಿಗೆ ಜನ್ಮಭಯ। ಮೃತ್ಯುಭಯ। ಜ್ವರಭಯ। ರಾಜಭಯ। ಚೋರಭಯ। ಶತ್ರುಭಯ। ಮೃಗಭಯ। ಸರ್ವಭಯ। ದರಿದ್ರಭಯ। ಕರ್ಮಭಯ। ಪೀಡೆಗಳು ಇಲ್ಲದ ಹಾಗೆ ವರವ ದಯ ಮಾಡಬೇಕು ಎಂದು ಕೇಳಿದ್ದಳು। ಆ ಮೇಲೆ ಶಿವನು ಅಮ್ಮನವರ ಪರೋಪಕಾರಕ್ಕಾಗಿ ಮೆಚ್ಚಿ। ಹೇ ಪಾರ್ವತಿ ಯಿದನು ಕೇಳಿದವರ್ಗೆ ಸಾಧಿಸಿದ ಕ್ರಮವು ದೊರಕುವುದು.[೨]

"..... ಯೀ ಶಿವಕಥನವನು ಯಾವ ಪುರುಷರು ಕೇಳುತಿಹರೋ ಓದುತಿಹರೋ ಲೇಖನ ಮಾಡುತ್ತಿಹರೋ ಅವರಿಗೆ ಚತುರ್ವಿದ ಮುಕ್ತಿ ದೊರಕುತ್ತಿಹುದು.[೩]

"..... ಹರುದದಿ ಲಾಲಿಸಿದವರ್ಗೆ ದುರಿತವಿನಾಶದ ನೆರೆಕರ್ಮ ಹರಿವುದು".[೪]

"..... ಲಿಂಗಲೀಲಾ ವಿಲಾಸ ಚಾರಿತ್ರ್ಯವನು ಬರದು ವೋದಿ ಕೇಳಿದವರ್ಗೆ ಯಿಹಪರ ಸುಖಕೊಡುವ...[೫]

ಹಸ್ತಪ್ರತಿಗಳ ಬಹುಮುಖ್ಯ ಗುಣ ಮನುಷ್ಯನನ್ನು ವೈಯಕ್ತಿಕ ಹಾಗೂ ಸಾಮುದಾಯಿಕ ಬದುಕಿನ ಸಂದರ್ಭದಲ್ಲಿ ವಿಶ್ಲೇಷಿಕೊಳ್ಳುವುದು. ಯಾವ ಕನ್ನಡ ಹಸ್ತಪ್ರತಿಯೂ ಕೇವಲ ಪೂಜನೀಯ ಮಟ್ಟದಲ್ಲಿ ಸ್ವೀಕೃತವಾಗಿಲ್ಲ. ಪಂಪಭಾರತ, ಆದಿಪುರಾಣ, ವಡ್ಡಾರಾಧನೆ, ಹರಿಶ್ಚಂದ್ರಕಾವ್ಯ, ಗದುಗಿನಭಾರತ, ಜೈಮಿನಿ ಭಾರತ, ಸರ್ವಜ್ಞನ ವಚನಗಳು, ಪಾರಮಾರ್ಥ ಪ್ರಕಾಶಿಕೆ, ದೇವೀ ಮಹಾತ್ಮೆ, ದಾಸರ ಕೀರ್ತನೆಗಳು ಇತ್ಯಾದಿ ಹಸ್ತಪ್ರತಿಗಳು ಪ್ರತೀಕರಣ, ಓದು ಮತ್ತು ಅಧ್ಯಯನಗಳ ವ್ಯಾಪ್ತಿಯನ್ನು ಅಂದಿನಿಂದ ಇಂದಿನವರೆಗೂ ಗಮನಿಸಿದರೆ ಅವುಗಳ ಸಾರ್ವತ್ರಿಕತೆಯನ್ನು ಅರಿಯಲು ಸಾಧ್ಯವಾಗುತ್ತದೆ. ಓದುಗಾರಿಕೆ ಹೇಳುವ ಮತ್ತು ಕೇಳುವ ಮೂಲಕ ಜ್ಞಾನ ಸಂರಕ್ಷಣೆಯ ಬಹುದೊಡ್ಡ ಸಾಂಸ್ಕೃತಿಕ ಸಂರಕ್ಷಣಾ ವಲಯ ನಿರ್ಮಾಣವಾಗಿದೆ.

ಅರಸ ಕೇಳಾಪತ್ತಡಸಿದ ವೇಳೆಗೆ
ಹರಿಕಥೆಗಳನೆ ಕೇಳುವುದು
ಹರಿನಾಮಂಗಳನೊಲಿದೋದುವುದು ಶ್ರೀ
ಹರಿಪದಂಗಳನೆ ನೆನೆವುದು[೬]

ಇಂಥಲ್ಲಿ ಸಂವಹನ ಪ್ರಧಾನವಾದ ಸಾಂಸ್ಕೃತಿಕ ವಲಯವನ್ನು ಕಾಣಬಹುದು. "ಅರಸ ಕೇಳು, ಆಪತ್ತು ಒದಗಿದಾಗ ಹರಿಕಥೆಗಳನ್ನು ಕೇಳಬೇಕು. ಹರಿನಾಮವನ್ನು ಶ್ರದ್ಧೆಯಿಂದ ಓದಬೇಕು. ಶ್ರೀ ಹರಿಯ ಪಾದಗಳನ್ನು ನೆನಯಬೇಕು.

ಒಂದು ಸರ್ಗಮನೊಂದು ಪದ್ಯಮನಲ್ಲದೊ
ಡೊಂದು ಪಾದವನೋದಿದೊಡೆ
ಅಂದಂದಿನೊಳೆಸಗಿದ ಪಾಪಂಗಳಂ
ದಂದಿಗೆ ಪರಿಹರಿಸುವುವು

ಶ್ರೀ ಮಹಾಭಾರತೇ ಸ್ವರ್ಗಾರೋಹಣ ಪರ್ವಣಿ ಚರಮೋ ಅಧ್ಯಾಯೇ ಶ್ಲೋಕ॥ ಕಾರ್ಷ್ಣಂ ವೇದಮಿಮಂ ಸರ್ವಂ

ಶೃಣುಯಾದ್ಯಸ್ಸಮಾಹಿತಃ।
ಬ್ರಹ್ಮಹತ್ಯಾ ಕೃತಂ ಪಾಪಂ
ತತ್‌ಕ್ಷಣಾದೇವ ನಶ್ಯತಿ॥
ಅಹ್ನಾ ಯದೇನಃ ಕುರುತೇ
ಇಂದ್ರಿಯೈರ್ಮನಸಾ ಗಿರಾ।
ಮಹಾಭಾರತ ಮಾಖ್ಯಾಯ
ಸರ್ವಪಾಪೈಃ ಪ್ರಮುಚ್ಯತೇ॥[೭೬]

ಒಂದು ಸರ್ಗವನ್ನು, ಇಲ್ಲವೆ ಒಂದು ಪದ್ಯವನ್ನು ಅಥವಾ ಶ್ಲೋಕದ ಒಂದು ಪಾದವನ್ನು ಓದಿದರೆ ಅಂದಂದು ಮಾಡಿದ ಪಾಪಗಳು ಅಂದಂದೇ ಪರಿಹಾರವಾಗುತ್ತವೆ. ಜೀವನ ಪಾಪಗಳ ಪರಿಹಾರಕ್ಕೆ ಈ ರೀತಿಯ ನಂಬಿಕೆಗಳು ವ್ಯಕ್ತವಾಗಿವೆ. ಶ್ರೀ ಮಹಾಭಾರತದ ಸ್ವರ್ಗಾರೋಹಣ ಪರ್ವದಲ್ಲಿ ಕೊನೆಯ ಅಧ್ಯಾಯ ಕೃಷ್ಣದ್ವೈಪಾಯನರು ರಚಿಸಿದ ಈ ವೇದವೆಲ್ಲವನ್ನು ಯಾವನು ಸಮಾಹಿತನಾಗಿ ಕೇಳುವನೋ ಆತನ ಬ್ರಹ್ಮಹತ್ಯಾದೋಷವು ಆ ಕ್ಷಣದಲ್ಲಿಯೇ ನಾಶಹೊಂದುತ್ತದೆ. ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಯಾವ ಪಾಪವನ್ನು ಆಚರಿಸಿದ್ದರೂ ಮಹಾಭಾರತವನ್ನು ಪ್ರವಚನ ಮಾಡಿದರೆ ಸಕಲ ಪಾಪಗಳಿಂದ ಮುಕ್ತನಾಗುತ್ತಾನೆ.

ಗದುಗಿನ ಭಾರತ ರಚನಕಾರನಾದ ಕುಮಾರವ್ಯಾಸ ಕವಿ ಕುರಿತು “ಕಲಿಯುದವರಿಗೂ ಕಾಮಧೇನುವಾಗಿ ಕನ್ನಡನಾಡಿನ ಜನಜೀವನದ ಹೃದಯವೇದಿಕೆಯಲ್ಲಿ ಅಗ್ರಸ್ಥಾನಸ್ಥ ಮಹಾ ಅಧ್ಯಕ್ಷನಾಗಿದ್ದಾನೆ”[೭೭] ಎಂದು ದೇ. ಜವರೇಗೌಡರವರು ತಮ್ಮ ಗದುಗಿನ ಭಾರತ ಒಂದು ಸಾಂಸ್ಕೃತಿಕ ಅಧ್ಯಯನದಲ್ಲಿ ಹೇಳುತ್ತಾರೆ. ಮಧ್ಯಕಾಲೀನ ಸಂದರ್ಭದಲ್ಲಿ ಧಾರ್ಮಿಕ ಮತ್ತು ಭಕ್ತಪ್ರಧಾನವಾದ ಸಾಂಸ್ಕೃತಿಕ ವಲಯ ನಿರ್ಮಾಣ ಮಾಡಿಕೊಂಡು ಕೃತಿರಚನೆ ಮಾಡಿದರು. ವಚನಕಾರರು, ಹರಿಹರನಂತಹ ಕವಿಗಳು ಭಕ್ತಿಪ್ರಧಾನವಾದ ಸಾಂಸ್ಕೃತಿಕ ವಲಯ ನಿರ್ಮಾಣ ಮಾಡಿಕೊಂಡರು. ಇಡೀ ಕರ್ನಾಟಕ ಭಕ್ತಿಪ್ರವಾಹದಲ್ಲಿ ಮಿಂದು ತಣಿಯುತ್ತಿದ್ದ ಕಾಲದಲ್ಲಿ ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ ಬದುಕಿದರು. ಆ ಪ್ರವಾಹದಲ್ಲಿ ತಾನೂ ಮಿಂದು ಸಿದ್ಧಿಯ ಪರಾಕಾಷ್ಠೆಯನ್ನು ಪಡೆದವರು. ಉಳಿದ ಮುಕ್ತಿ ಮಾರ್ಗಗಳನ್ನು ಕಡೆಗಣಿಸಲಿಲ್ಲವಾದರೂ, ಭಕ್ತಮಾರ್ಗವನ್ನಪ್ಪಿಕೊಂಡ ಸಾಧಕವರೇಣ್ಯರು.

ಅಜ್ಞಾನ ಅಂಧಶ್ರದ್ಧೆಯ ಕಾರಣದಿಂದಾಗಿ ಅನೇಕ ಅತ್ಯುತ್ತಮ ಕನ್ನಡ ಹಸ್ತಪ್ರತಿ ಮತ್ತು ಕಾಗದ ಗ್ರಂಥಗಳು ಮಣ್ಣುಪಾಲಾಗಿವೆ. ಹರಿವಂಶ, ಶೂದ್ರಕ ರಘುವಂಶ ಮಹಾಪುರಾಣ ಭುವನೈಕ ರಾಮಾಭ್ಯುದಯ, ಮೊದಲಾದ ಕೆಲವು ಮಹಕೃತಿಗಳೂ, ಹೆಸರೇ ಇಲ್ಲದಂತೆ ನಶಿಸಿಹೋಗಿವೆ. ಅತ್ಯಂತ ಉಪಯುಕ್ತವಾದ ಅನೇಕ ಹಳೆಯ ಗ್ರಂಥಗಳು ಇಂದು ಕೂಡ ಹುಳುಗಳಪಾಲೋ ಕೆರೆ ನದಿಗಳ ಪಾಲೋ ಆಗುತ್ತಿವೆ. ಹಲವು ಓಲೆ ಪ್ರತಿಗಳನ್ನು ಉರುವಲಾಗಿ ಉಪಯೋಗಿಸುರವುದುಂಟು. ಹಲವು ಮನೆಗಳಲ್ಲಿ ಪೂಜಾಗೃಹವನ್ನು ಸೇರಿ ಹುಳುಗಳ ಆಹಾರವಾಗಿವೆ. ನೀರು ಎಣ್ಣೆಯಿಂದ ಹಸ್ತಪ್ರತಿಗಳು ತೀರಾ ಶೋಚನೀಯ ಸ್ಥಿತಿಗೆ ತಲುಪಿರಬಹುದು. ಅತಿಯಾದ ಅಂದಃಶ್ರದ್ಧೆ, ಹಸ್ತಪ್ರತಿಗಳನ್ನು ಕೊಟ್ಟರೆ ಕಷ್ಟಕ್ಕೆ ಒಳಗಾಗಬಹುದೆಂಬ ಹೆದರಿಕೆ ಅಪಾರ ಜ್ಞಾನರಾಶಿಯನ್ನೇ ಕ್ರಿಮಿಕೀಟಗಳ ಪಾಲಾಗಿಸಿದೆ.

ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ ಅಥವಾ ಗದುಗಿನ ನಾರಾಣಪ್ಪ ಹೇಳುವಂತೆ ಸ್ವತಃ ಕವಿಗಳೇ ಲಿಪಿಕಾರರಾಗಿರುವುದುಂಟು. ಲಿಪಿಕಾರ ಪ್ರತಿಕಾರರ ಪರವಾದ ಸಂಸ್ಕೃತಿಯನ್ನು ತಿಳಿಸುವ ಮಾತಾಗಿದೆ. ಕವಿಯೆಂದರೆ ರಚನೆಗೊಂಡ ಮೂಲ ಕೃತಿಗಳು ಸಿಗುವುದು ಅಪರೂಪ. ಆದರೆ ಬೇರೆ ಲಿಪಿಕಾರರಿಂದ ಆದ ಪ್ರತಿಗಳು ಮಾತ್ರ ಲಭ್ಯವಾಗಿವೆ. ರಚನೆಯಾದ ಗ್ರಂಥಗಳನ್ನು ಆಸಕ್ತರು ಪ್ರತಿಮಾಡಿಕೊಳ್ಳುತ್ತಿದ್ದುದಲ್ಲದೆ ಶಾಸ್ತ್ರದಾನದಿಂದಲೂ ಪ್ರತಿಗಳು ಹುಟ್ಟಿಕೊಂಡವು. ೧೦ನೆಯ ಶತಮಾನದಲ್ಲಿದ್ದ ಪೊನ್ನನ 'ಶಾಂತಿಪುರಾಣ'ದ ಸಾವಿರ ಹಸ್ತಪ್ರತಿಗಳನ್ನು ಪ್ರತಿಮಾಡಿಸಿದ ಅತ್ತಿಮಬ್ಬೆಯ ಆಶ್ರಯದಲ್ಲಿ ಅದೆಷ್ಟು ಜನ ಲಿಪಿಕಾರರು ಕೆಲಸ ಮಾಡಿರಬಹುದು. ಹೀಗಾಗಿ ಹವ್ಯಾಸಿ ನಿಯುಕ್ತ ಲಿಪಿಕಾರರಲ್ಲದೆ ವೃತ್ತಿ ಲಿಪಿಕಾರರೂ ಇದ್ದರು. ಲಿಪಿಕಾರ ವೃತ್ತಿಯನ್ನೇ ಅವಲಂಬಿಸಿ ಕೆಲವರು ಅದರಿಂದಲೇ ತಮ್ಮ ಜೀವನವನ್ನು ನಡೆಸುತ್ತಿದ್ದರು.

ವೀರನಾರಾಯಣನೆ ಕವಿ ಲಿಪಿ
ಕಾರ ಕುಮಾರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮ ಜನಾರ್ದನರು
ಚಾರುಕವಿತೆಯ ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಭಿನ್ನಪವ೭೮
ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ೭೯

ಎನ್ನುವ ಮಾತುಗಳು ಬಹುಮುಖಿ ಸಾಂಸ್ಕೃತಿಕ ಆಯಾಮವನ್ನು ಮತ್ತು ಸಂವಹನ ಪ್ರಧಾನತೆಯನ್ನು ಎತ್ತಿ ತೋರಿಸುತ್ತದೆ. ಇದಕ್ಕೆ ಉತ್ತಮ ಉದಾಹರಣೆಯಾಗಿ ವಚನಕಾರರು ತಮ್ಮ ವಿಚಾರಧಾರೆಗಳನ್ನು ವಚನಗಳ ಮೂಲಕ ಅನುಭವ ಮಂಟಪದಲ್ಲಿ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುವ ಮೂಲಕ ಸಾಂಸ್ಕೃತಿಕ ಸಂರಕ್ಷಣೆಯ ವಲಯವನ್ನು ಕಟ್ಟಿಕೊಂಡರು. ಇದನ್ನು ಮುಂದೆ ಬಂದ ದಾಸರು

ಜನಸಾಮಾನ್ಯರ ಬಳಿಗೆ ಹೋಗಿ ತಮ್ಮ ತತ್ವ ಸಿದ್ಧಾಂತಗಳನ್ನು ಹೇಳಿದರು. ಈ ಕೆಲಸವನ್ನು ಕೊಡೆಗಲ್ಲು ಬಸವಣ್ಣನ ಪರಂಪರೆಯ ತತ್ವಪದಕಾರರು ತತ್ವ ವಿಚಾರಗಳನ್ನು ಜನಸಾಮಾನ್ಯರಿಗೆ ಸಾರುವ ಕೆಲಸವನ್ನು ಮಾಡಿದರು. ಹೀಗಾಗಿ ಸಂವಹನ ಪ್ರಧಾನವಾದ ಹಾಗೂ ಸಾಂಸ್ಕೃತಿಕ ಸಂರಕ್ಷಣೆ ಕಾರ್ಯ ಕೈಗೊಂಡರು. ನಯವಿನಯ ಪೂರಿತ ಸಾಂಸ್ಕೃತಿಕ ವಲಯವು ಜನಸಾಮಾನ್ಯರನ್ನು ಒಳಗೊಂಡಂತೆ ಜ್ಞಾನವನ್ನು ಸಂಸ್ಕೃತಿಯ ನೆಲೆಯಲ್ಲಿ ಸಂರಕ್ಷಣೆಗೊಳಿಸಿತು. ಈ ಕೆಲಸವನ್ನು ಜನಪದರ ನಂತರ ಇವರೆಲ್ಲರೂ ಮುಂದುವರಿಸಿಕೊಂಡು ಬಂದರು.

**ಅಡಿಟಿಪ್ಪಣಿಗಳು**

೧. ಡಾ.ವೀರೇಶ ಬಡಿಗೇರ, 'ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು', ಪು.xvi ೨೦೦೬
೨. ಅದೇ, ಪು.xv, xvi ೨೦೦೬
೩. ಅದೇ, ಪು.೩೬, ೨೦೦೬
೪. ಅದೇ, ಪು.೧೫೭, ೨೦೦೬
೫. ಅದೇ, ಪು.೧೫೭, ೨೦೦೬
೬. ಅದೇ, ಪು.೧೫೭, ೨೦೦೬
೭. ಅದೇ, ಪು.೧೫೮, ೨೦೦೬
೮. ಅದೇ, ಪು.೧೬೦, ೨೦೦೬
೯. ಅದೇ, ಪು.೧೬೦, ೨೦೦೬
೧೦. ಡಾ. ಅಮರೇಶ ನುಗಡೋಣಿ, 'ಜೈಮಿನಿ ಭಾರತ ಸಾಂಸ್ಕೃತಿಕ ಮುಖಾಮುಖಿ', ಪು.೦೨, ೨೦೦೯
೧೧. ಅದೇ, ಪು.೦೪, ೨೦೦೯
೧೨. ಡಾ.ವೀರೇಶ ಬಡಿಗೇರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೯೪ ೨೦೦೬
೧೩. ಅದೇ, ಪು.೯೯, ೨೦೦೬
೧೪. ಅದೇ, ಪು.೧೦೩, ೨೦೦೬
೧೫. ಅದೇ, ಪು.೧೨೩, ೨೦೦೬
೧೬. ಅದೇ, ಪು.೧೫೬, ೨೦೦೬
೧೭. ಅದೇ, ಪು.೧೫೭, ೨೦೦೬
೧೮. ವೀರೇಶ ಬಡಿಗೇರ ಹಲಗೆ ಬಳಪ, ಪು.೧; ೨೦೦೫

೧೯. ಅದೇ; ೨೦೦೫

೨೦. ಡಾ.ವೀರೇಶ ಬಡಿಗೇರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೩೧, ೩೨ ೨೦೦೬

೨೧. ಅದೇ, ಪು.೩೬, ೩೭, ೨೦೦೬

೨೨. ಎಂ.ಎಂ. ಕಲಬುರ್ಗಿ ಕನ್ನಡ ಹಸ್ತಪ್ರತಿಶಾಸ್ತ್ರ, ಪು.೭, ೧೯೯೩

೨೩. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೪೧, ೧೯೯೨

೨೪. ಅದೇ, ಪು.೧೪೧, ೧೯೯೨

೨೫. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೪೧, ೧೯೯೨

೨೬. ಅದೇ, ಪು.೧೫೦, ೧೯೯೨

೨೭. ಅದೇ, ಪು.೧೫೦, ೧೯೯೨

೨೮. ಅದೇ, ಪು.೧೫೦, ೧೯೯೨

೨೯. ಎಂ.ಎಂ. ಕಲಬುರ್ಗಿ ಕನ್ನಡ ಹಸ್ತಪ್ರತಿಶಾಸ್ತ್ರ, ಪು.೪೫, ೧೯೯೩

೩೦. ಅದೇ, ಪು.೪೫, ೧೯೯೩

೩೧. ಅದೇ, ಪು.೪೬, ೧೯೯೩

೩೨. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.–, ೧೯೯೨

೩೩. ಅದೇ, ಪು.–, ೧೯೯೨

೩೪. ಅದೇ, ಪು.೧೪೫, ೧೯೯೨

೩೫. ಅದೇ, ಪು.೧೪೫, ೧೯೯೨

೩೬. ಎಫ್.ಟಿ.ಹಳ್ಳಿಕೇರಿ, ಕೆ. ರವೀಂದ್ರನಾಥ(ಸಂ) ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಮೂರನೆಯ ಸಂಪುಟದಲ್ಲಿ ಈ ವಿವರಣೆ ಇದೆ

೩೭. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೪೫, ೧೯೯೨

೩೮. ಅದೇ, ಪು.೧೪೫, ೧೯೯೨

೩೯. ಅದೇ, ಪು.೧೪೨, ೧೯೯೨

೪೦. ಅದೇ, ಪು.೧೪೨, ೧೯೯೨

೪೧. ಅದೇ, ಪು.೧೪೭, ೧೯೯೨

೪೨. ಅದೇ, ಪು.೧೪೭, ೧೯೯೨

೪೩. ಅದೇ, ಪು.೧೪೭, ೧೯೯೨

೪೪. ಅದೇ, ಪು.೧೪೬, ೧೯೯೨

೪೫. ಅದೇ, ಪು.೧೪೬, ೧೯೯೨

೪೬. ಡಾ.ವೀರೇಶ ಬಡಿಗೇರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೧೦೩, ೨೦೦೬

೪೭. ಅದೇ, ಪು.೧೦೩, ೨೦೦೬

೪೮. ಅದೇ, ಪು.೧೦೪, ೨೦೦೬

೪೯. ಅದೇ, ಪು.೧೦೪, ೨೦೦೬

೫೦. ಅದೇ, ಪು.೧೦೪, ೨೦೦೬

೫೧. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೪೮, ೧೯೯೨

೫೨. ಅದೇ, ಪು.೧೪೮, ೧೯೯೨

೫೩. ಎಂ.ಎಂ. ಕಲಬುರ್ಗಿ ಕನ್ನಡ ಹಸ್ತಪ್ರತಿಶಾಸ್ತ್ರ, ಪು.೪೧, ೧೯೯೩

೫೪. ಅದೇ, ಪು.೪೧, ೧೯೯೩

೫೫. ಎಫ್.ಟಿ. ಹಳ್ಳಿಕೇರಿ, ಕೆ. ರವೀಂದ್ರನಾಥ ಸಂಪಾದಿಸಿರುವ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿಯ ಮೂರನೆಯ ಸಂಪುಟದಲ್ಲಿನ ಉಲ್ಲೇಖ

೫೬. ಅದೇ

೫೭. ಎಂ.ಎಂ. ಕಲಬುರ್ಗಿ ಕನ್ನಡ ಹಸ್ತಪ್ರತಿಶಾಸ್ತ್ರ, ಪು.೪೧, ೧೯೯೩

೫೮. ಅದೇ, ಪು.೪೧, ೧೯೯೩

೫೯. ಅದೇ, ಪು.೪೧, ೧೯೯೩

೬೦. ಅದೇ, ಪು.೪೧, ೧೯೯೩

೬೧. ಅದೇ, ಪು.೯೯, ೧೯೯೩

೬೨. ಅದೇ, ಪು.೯೯, ೧೯೯೩

೬೩. ಅದೇ, ಪು.೫೨, ೧೯೯೩

೬೪. ಅದೇ, ಪು.೫೨, ೧೯೯೩

೬೫. ಅದೇ, ಪು.೫೨, ೧೯೯೩

೬೬. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೪೯, ೧೯೯೨

೬೭. ಅದೇ, ಪು.೧೪೯, ೧೯೯೨

೬೮. ಡಾ. ವೀರೇಶ ಬಡಿಗೇರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೩೧, ೨೦೦೬

೬೯. ಬಿ.ಕೆ. ಹಿರೇಮಠ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೧೫೧, ೧೫೨, ೧೯೯೨

೭೦. ಡಾ. ವೀರೇಶ ಬಡಿಗೇರ ಹಲಗೆ ಬಳಪ, ಪು.೭೪; ೨೦೦೫

೭೧. ಅದೇ, ಪು.೭೪; ೨೦೦೫

೭೨. ಡಾ. ವೀರೇಶ ಬಡಿಗೇರ ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪು.೧೦೯, ೨೦೦೬

೭೩. ಅದೇ, ಪು.೧೧೨, ೨೦೦೬

೭೪. ಅದೇ, ಪು.೧೧೨, ೨೦೦೬

೭೫. ವಿದ್ವಾನ್ ಎನ್. ರಂಗನಾಥಶರ್ಮ(ಅನು) ಸಂಚಿಹೊನ್ನಮ್ಮ ವಿರಚಿತ ಹದಿಬದಿಯ ಧರ್ಮ, ಪು.೧೧೩, ೨೦೦೮

೭೬. ಅದೇ, ಪು.೧೧೭, ೧೧೮, ೨೦೦೮

೭೭. ದೇ. ಜವರೇಗೌಡ ಗದುಗಿನ ಭಾರತ: ಒಂದು ಸಾಂಸ್ಕೃತಿಕ ಅಧ್ಯಯನ, ಪು.೦೬, ೧೯೭೮

೭೮. ಕುವೆಂಪು ಮತ್ತು ಮಾಸ್ತಿ(ಸಂ) ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ ಅಧ್ಯಾಯ-೧ ಪೀಠಿಕಾ ಸಂಧಿ, ೧೯೫೮

೭೯. ಅದೇ, ಪೀಠಿಕಾ ಸಂಧಿ, ೧೯೫೮



## ಅಧ್ಯಾಯ ಆರು

# ಸಂರಕ್ಷಣೆಯ ಸಾಂಪ್ರದಾಯಕ ನೆಲೆಗಳು

ಪ್ರಾಚೀನ ಕಾಲದಿಂದಲೂ ಭಾಷೆಯ ನುಡಿರೂಪವನ್ನು ಹಾಗೂ ಲಿಪಿರೂಪವನ್ನು ಭಾರತೀಯ ಜ್ಞಾನ ಪರಂಪರೆಯ ಭಾಗವಾಗಿ ಸಂರಕ್ಷಿಸಿ ಸಂವರ್ಧನೆಗೊಳಿಸುತ್ತಾ ಬರಲಾಗುತ್ತಿದೆ. ಸಂರಕ್ಷಣೆಗೆ ಹಲವು ರೀತಿಯ ದೇಸಿಯ ಮಾದರಿಗಳನ್ನು ಕಂಡುಕೊಳ್ಳಲಾಗಿದೆ. ಇದು ಹೆಚ್ಚು ರಾಸಾಯನಿಕೇತರವಾಗಿರುವುದು ವಿಶೇಷ. ಜ್ಞಾನದ ಸಂರಕ್ಷಣೆ ಸಂವರ್ಧನೆಯಲ್ಲಿ ನಮ್ಮ ಪ್ರಾಚೀನರು ಅವರದೇ ಆದ ವೈಜ್ಞಾನಿಕ ಮನೋಭಾವನೆಯನ್ನು ಹೊಂದಿದ್ದರು. ಪ್ರಾದೇಶಿಕವಾಗಿ ಸಿಗುವ ಸಸ್ಯ ಹಾಗೂ ಗಿಡಮೂಲಿಕೆಗಳಿಂದ ಜ್ಞಾನ ಹಾಗೂ ಅದರ ಸಲಕರಣೆಗಳನ್ನು ಜೋಪಾನ ಮಾಡುತ್ತಿದ್ದರು. ನೈಸರ್ಗಿಕ ಆಪತ್ತುಗಳಾದ ೧) ಧೂಳು ಸೇರುವುದು ೨) ಸೂರ್ಯನ ಅತಿಯಾದ ಶಾಖ ೩) ವಾತಾವರಣದಲ್ಲಿನ ಉಷ್ಣತೆ ೪) ತೇವಾಂಶಗಳಿಂದ ರಕ್ಷಿಸಲು ಹಸ್ತಪ್ರತಿಗಳನ್ನು ಸಾಮಾನ್ಯವಾಗಿ ಕೆಂಪು/ಹಳದಿ/ಹಸಿರು ಬಣ್ಣದ ಹತ್ತಿ ಬಟ್ಟೆಗಳಲ್ಲಿ ಸುತ್ತಿಡುತ್ತಿದ್ದರು. ಅವು ಅತಿಯಾದ ಧೂಳು, ಬೆಳಕು, ಉಷ್ಣತೆ ಮತ್ತು ತೇವವನ್ನು ತಡೆಗಟ್ಟುತ್ತಿದ್ದವು. ಕೆಂಪು/ಹಳದಿ/ಹಸಿರು ಬಟ್ಟೆಯ ಬಣ್ಣವೇ ಕ್ರಿಮಿಕೀಟಗಳನ್ನು ವಿಕರ್ಷಿಸುವಷ್ಟು ಸಾಮರ್ಥ್ಯ ಹೊಂದಿದ್ದರಿಂದಾಗಿ ಅವರು ಅದನ್ನೇ ಉಪಯೋಗಿಸುತ್ತಿದ್ದರು. ಭಾರತದ ಸಾಂಪ್ರದಾಯಿಕ ಗ್ರಂಥಾಲಯಗಳಾದ ಮಠ, ಮಂದಿರ, ಮಸೀದಿ, ಚೈತ್ಯಾಲಯಗಳಲ್ಲಿ ಹಳೆಯ ಗ್ರಂಥಗಳನ್ನು ಬಣ್ಣದ ಬಟ್ಟೆಯಿಂದ ಸುತ್ತಿಡುತ್ತಿದ್ದುದನ್ನೆ ಇಂದು ನೋಡಬಹುದಾಗಿದೆ.

ಡಿಸೆಂಬರ್ ಮತ್ತು ಜನವರಿ ತಿಂಗಳುಗಳಲ್ಲಿ ಮನೆಗಳ ಎದುರು ಕೆಂಪು ಗೆರೆಗಳನ್ನು ಯಾಕಾಗಿ ಎಳೆಯುತ್ತಾರೆ ಎನ್ನುವ ವಿಚಾರ ಈ ದೃಷ್ಟಿಯಿಂದ ಕುತೂಹಲವಾದುದು. ಮಳೆಗಾಲ ಮುಗಿದ ಬಳಿಕ ಕ್ರಿಮಿಗಳು ಮನೆಗೆ ಪ್ರವೇಶಿಸದಂತೆ ತಡೆಗಟ್ಟುವುದೇ ಇದರ ಉದ್ದೇಶ. ಗ್ರಾಮೀಣ ಪ್ರದೇಶದ ಮನೆಗಳ ಮುಖ್ಯದ್ವಾರದ ಹೊಸ್ತಿಲಿಗೆ ವಿಭೂತಿ ಕುಂಕುಮ ಹಚ್ಚುವುದು, ಹಬ್ಬ – ಹರಿದಿನ ವಾರದ ಒಂದು ದಿನ ಎತ್ತಿನ ಗೋವಿನ ಸೆಗಣಿಯಿಂದ ಮನೆಯ ಒಳಭಾಗ/ ಅಂಗಳವನ್ನು ಸಾರಿಸುವ ಪದ್ಧತಿಗಳು ಇಂಥ ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳ ಭಾಗವೇ ಆಗಿದೆ. ಆಧುನಿಕತೆಯ ಪ್ರಭಾವದಿಂದ ನಗರಗಳು ಸಂಪ್ರದಾಯವನ್ನು ಮರೆಯುತ್ತಾ ಬೇಗ ಪರಿವರ್ತನೆ ಹಾದಿ ಹಿಡಿದಿದ್ದರು. ಗ್ರಾಮೀಣರು ಮಾತ್ರ ತಮ್ಮ ಸಂಪ್ರದಾಯ ಪರಂಪರೆಯನ್ನು ಮರೆಯದೇ ಸಾಂಪ್ರದಾಯಿಕ ಸಂರಕ್ಷಣೆಯನ್ನು ಮುಂದುವರಿಸಿಕೊಂಡು

ಬರುತ್ತಿದ್ದಾರೆ. ನಗರಗಳಲ್ಲಿ ಇಂದು ಬೇರೆ ಬೇರೆ ಬಣ್ಣಗಳ ರೂಪದಲ್ಲಿ ಈ ಪರಂಪರೆ ಮುಂದುವರಿದಿರುವುದು ಗಮನಾರ್ಹ.

### ೬.೧. ಸಂರಕ್ಷಣಾ ವಿಧಾನಗಳು

ಹಸ್ತಪ್ರತಿಗಳ ಸಂರಕ್ಷಣಾ ವಿಧಾನದಲ್ಲಿ ಪ್ರಧಾನವಾಗಿ ಇನ್ನೂ ಅನೇಕ ವಿಧಾನಗಳು ಕಂಡುಬರುತ್ತವೆ. ಸಾಂಬಾರ ಪದಾರ್ಥಗಳ ಬಳಕೆ, ಬಣ್ಣದ ಬಟ್ಟೆಗಳ ಬಳಕೆ, ತೈಲ ಲೇಪನ, ಧೂಮ್ರ ಚಿಕಿತ್ಸೆ, ಸೂರ್ಯನ ಶಾಖದ ಚಿಕಿತ್ಸೆ, ಸಸ್ಯಜನ್ಯ ಔಷಧಗಳ ಬಳಕೆ, ಕ್ರಿಮಿಕೀಟಗಳ ಪ್ರವೇಶವನ್ನು ತಡೆಗಟ್ಟಲು ಅರಿಷಿಣದ ಪುಡಿಯನ್ನು ಅಥವಾ ಅದರ ನೀರನ್ನು ಗರಿಗಳಿಗೆ ಲೇಪಿಸಲಾಗುತ್ತಿತ್ತು. ಸ್ಥಳೀಯವಾಗಿ ದೊರೆಯುತ್ತಿದ್ದ, ತಂಬಾಕು, ಕರ್ಪೂರ, ಕರೇಜೀರಿಗೆ, ಸಿಹಿಜಂಬು, ಹಾವಿನಪೊರೆ ಮತ್ತು ನವಿಲು ಗರಿಗಳನ್ನು ಅದಕ್ಕಾಗಿ ಉಪಯೋಗಿಸಲಾಗುತ್ತಿತ್ತು. ಇವತ್ತಿಗೂ ಈ ಸ್ಥಳೀಯ ಸಾಮಗ್ರಿಗಳನ್ನು ಭಾರತದ ಕೆಲವು ಗ್ರಂಥಾಲಯ ಮತ್ತು ವಸ್ತುಸಂಗ್ರಹಾಲಯಗಳಲ್ಲಿ ಉಪಯೋಗಿಸಲಾಗುತ್ತಿದೆ. ಉದಾ: ತಂಜಾವೂರಿನಲ್ಲಿರುವ ತಂಜಾವೂರು ಮಹಾರಾಜ ಸರ್ಫೋಜಿಯ ಸರಸ್ವತಿ ಮಹಲ್ ಗ್ರಂಥಾಲಯದ ಗ್ರಂಥ ಸಂರಕ್ಷಣೆಯ ಸಾಂಪ್ರದಾಯಿಕ ವಿಧಾನದಲ್ಲಿ ನವಿಲುಗರಿಗಳನ್ನು ಬಳಸಲಾಗುತ್ತಿತ್ತು. ನವಿಲುಗರಿ ಸೂಕ್ಷ್ಮವಾದ ವಾಸನೆ ಬೀರುವುದರಿಂದ ಹೆಚ್ಚಿನ ಪ್ರಮಾಣದ ಕ್ರಿಮಿಕೀಟಗಳು ಆ ವಾಸನೆಗೆ ಗ್ರಂಥಗಳ ಹತ್ತಿರಕ್ಕೆ ಬರುತ್ತಿರಲಿಲ್ಲ. ಮಕ್ಕಳಿಗೆ ಇಷ್ಟವಾಗುವ ನವಿಲುಗರಿ ಪುಸ್ತಕದಲ್ಲಿಟ್ಟರೆ ಮರಿಹಾಕುತ್ತವೆಂದು ನಂಬಿಕೆಯಿದೆ. ಇದು ಮೌಢ್ಯವೆಂದು ಕಂಡರು ಆ ನಂಬಿಕೆ ಹಿಂದೆ ಇರುವ ನಮ್ಮ ಪ್ರಾಚೀನರ ಮನೋವೈಜ್ಞಾನಿಕ ವಿಚಾರವು ಸಾಂಪ್ರದಾಯಿಕ ಗ್ರಂಥ ಸಂರಕ್ಷಣೆಯ ದೃಷ್ಟಿಯಿಂದ ಮಹತ್ವದ್ದು.

#### ೬.೧.೧. ಸಾಂಬಾರ ಪದಾರ್ಥಗಳ ಬಳಕೆ

ತಂಜಾವೂರಿನಲ್ಲಿರುವ ತಂಜಾವೂರು ಮಹಾರಾಜ ಸರ್ಫೋಜಿಯ ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ ಕೆಳಕಂಡ ಸಾಂಬಾರ ಪದಾರ್ಥಗಳ ಮಿಶ್ರಣವನ್ನು ಪುಡಿಯ ರೂಪದಲ್ಲಿ ಉಪಯೋಗಿಸುವುದು ಕಂಡುಬರುತ್ತದೆ.

ಕರೀಜೀರಿಗೆ ನಾಲ್ಕು ಭಾಗಗಳು ೧.ಕಿ.ಗ್ರಾಂ

ಸಿಹಿಜಂಬು ನಾಲ್ಕು ಭಾಗಗಳು ೧.ಕಿ.ಗ್ರಾಂ

ಲವಂಗ ಒಂದು ಭಾಗಗಳು ೧/೪ ಕ್ರಿ.ಗ್ರಾಂ

ಕರಿಮೆಣಸು ಒಂದು ಭಾಗಗಳು ೧/೪ ಕಿ.ಗ್ರಾಂ

ದಾಲಚಿನ್ನಿ ನಾಲ್ಕು ಭಾಗಗಳು ೧ ಕಿ.ಗ್ರಾಂ

೨೦ ಗ್ರಾಂ ನಷ್ಟು ಕರ್ಪೂರವನ್ನು ಈ ಮಿಶ್ರಣ ಪುಡಿಗೆ ಸೇರಿಸಬೇಕು. ಮತ್ತು ಒಂದು ಕಟ್ಟಿನ ರೀತಿಯಲ್ಲಿ ಬಟ್ಟೆಯಿಂದ ಮುಚ್ಚಬೇಕು. ಈ ಕಟ್ಟುಗಳನ್ನು ಕ್ರಿಮಿಕೀಟಗಳಿಂದ ರಕ್ಷಿಸಲು ಕಪಾಟುಗಳಲ್ಲಿ ಇಡಬೇಕು. ಇದು ಆರು ತಿಂಗಳವರೆಗೆ ಸಮರ್ಥವಾಗಿರುತ್ತದೆ.[೧]

**೬.೧.೨. ಬಣ್ಣದ ಬಟ್ಟೆಗಳ ಬಳಕೆ**

ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ಕೆಂಪು/ಹಳದಿ/ಹಸಿರು ಬಟ್ಟೆಯ ಬಣ್ಣವು ಕ್ರಿಮಿಕೀಟಗಳಿಂದ ತೇವಾಂಶದಿಂದ ಕಾಪಾಡುತ್ತವೆ. ವಸ್ತ್ರದ ಉಲ್ಲೇಖ ಭವಿಷ್ಯ ಪುರಾಣದಲ್ಲಿ ಬರುತ್ತದೆ.

'ವಸ್ತ್ರಯುಗ್ಮೇನ ಸಂವೀತಂ ಪುಸ್ತಕಂ ಪ್ರತಿಪಾದಯೇತ್

ಸಾಮಾನ್ಯಂ ಸರ್ವಲೋಕಾನಾಂ ಸ್ಥಾಪಯೋದದ ವಾ ಮಠೇ೨

ಹಸ್ತಪ್ರತಿಗಳ ಸಂರಕ್ಷಣೆಯ ದೃಷ್ಟಿಯಿಂದ ವಸ್ತ್ರದ ಮನೆತನ ಒಂದು ರೂಪಗೊಂಡಿತು. ರೇಷ್ಮೆ ಹತ್ತಿ ಬಟ್ಟೆಗಳು ಹಸ್ತಪ್ರತಿಗಳ ಸಂರಕ್ಷಣೆಗೆ ಉಪಯುಕ್ತವಾಗಿ ಬಳಸಲಾಗುತ್ತದೆ.

**೬.೧.೩. ತೈಲ ಲೇಪನ**

ಬರೆಯಲ್ಪಟ್ಟ ಗರಿಗಳಲ್ಲಿನ ಅಕ್ಷರಗಳು ಸ್ಪಷ್ಟವಾಗಿ ಮೂಡಿಬರಲು ಎರಡು ಬಗೆಯ ಉಪಚಾರಗಳನ್ನು ಮಾಡಬೇಕಾಗುತ್ತದೆ. ಗರಿಗಳ ಮೇಲ್ಮೈಗೆ ಅರಿಷಿಣ ಪುಡಿ ಹಾಕಿದ ನಿರನ್ನು ಸಿಂಪಡಿಸಲಾಗುತ್ತಿತ್ತು. ಆ ನೀರು ಪವಿತ್ರ ಎನ್ನುವ ನಂಬಿಕೆಯಿದ್ದು ಆ ಕಾರಣಕ್ಕಾಗಿಯೇ ಪೂಜೆಗೂ ಇಡಲಾಗುತ್ತಿತ್ತು. ಹೆಚ್ಚಾಗಿ ರಾಮಾಯಣ ಮತ್ತು ಮಹಾಭಾರತ ಹಸ್ತಪ್ರತಿಗಳಿಗೆ ಅರಿಷಿಣದ ಲೇಪವನ್ನು ಲೇಪಿಸಲಾಗುತ್ತಿತ್ತು. ಮತ್ತು ಕೊಠಡಿಯಲ್ಲಿಡಲಾಗುತ್ತಿತ್ತು. ಇತರ ಹಸ್ತಪ್ರತಿಗಳಿಗೆ ಅವುಗಳ ಅಕ್ಷರದ ಸ್ಪಷ್ಟತೆಗಾಗಿ ಸಸ್ಯಾದಿಗಳ ರಸ(Cocinaindica) ಮತ್ತು ಎಳ್ಳೆಣ್ಣೆಯನ್ನು ಉಪಯೋಗಿಸಿ ತಯಾರಿಸಿದ ರಸ ಇವೆರಡರ ಮಿಶ್ರಣ ಮಾಡಿ ಲೇಪಿಸಲಾಗುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಎಳ್ಳೆಣ್ಣೆಯಿಂದ ತಯಾರಿಸಿದ ರಸಕ್ಕೆ ಆರುವ ಗುಣವುಳ್ಳ ಕೆಲವು ಸಸ್ಯಗಳ ತೈಲವನ್ನು ಮಿಶ್ರಣ ಮಾಡಿ ಬಳಸಲಾಗುತ್ತದೆ.

ಸಿಟ್ರನಲ್ ಆಯಿಲ್ ಇದನ್ನು ಹತ್ತಿ ಬಟ್ಟೆಯಿಂದ ಹಚ್ಚಲಾಗುತ್ತಿತ್ತು. ತೇವಾಂಶ ಬೇಗ ಒಣಗುವ ಗುಣಪಡೆದಿತ್ತು. ಮೇಲುಕೋಟೆ ನರಸಿಂಹಚಾರ್ ಸುಬ್ಬರಾಯರು ಹಸ್ತಪ್ರತಿಯ ರಕ್ಷಣೆಗೆ ಒಂದು ರೀತಿಯ ಎಣ್ಣೆಯನ್ನು ಬಳಸುತ್ತಿದ್ದು ಅದರಲ್ಲಿ ಹುಚ್ಚುಎಳ್ಳು ಮತ್ತು ಪಚ್ಚೆಕರ್ಪೂರ ಬಳಸಲಾಗುತ್ತಿತ್ತೆಂದು ತಿಳಿದುಬಂದಿದೆ. ಆದರೆ ಆ ಎಣ್ಣೆ ೩ ರಿಂದ ೪ ದಿನಗಳ ಕಾಲ ತೇವ ಒಣಗದೇ ಹಾಗೆ ಇರುತ್ತಿತ್ತು ಎಂಬ ಮಾಹಿತಿಯನ್ನು ಕ್ಷೇತ್ರಕಾರ್ಯ ಕೈಗೊಂಡಾಗ ಪ್ರಾಚ್ಯ ವಿದ್ಯಾ ಸಂಶೋಧನಾಲಯ ಮೈಸೂರಿನ ಎಸ್. ಜಗನ್ನಾಥ ಎಂಬುವವರಿಂದ ತಿಳಿದು ಬಂದಿತು.

ಕೇರಳ ವಿಶ್ವವಿದ್ಯಾಲಯದ ಹಸ್ತಪ್ರತಿ ಗ್ರಂಥಾಲಯದಲ್ಲಿ ಹಸ್ತಪ್ರತಿಗಳಿಗಾಗಿಯೇ ಸಿದ್ಧಪಡಿಸಿದ ತೆರೆದ ಮರದ ಕಪಾಟುಗಳಲ್ಲಿ ಇರಿಸಲಾಗಿದೆ. ತೈಲ ಸವರುವುದರ ಮೂಲಕ ತಾಳೆಗರಿಯ ಮೃದುತ್ವವನ್ನು ಮರಳಿ ಪಡೆಯುಬಹುದಾಗಿದೆ ಕೆಲವು ಕಾಲದವರೆಗೆ ಕೇರಳ ವಿಶ್ವದ್ಯಾಲಯದ ಹಸ್ತಪ್ರತಿ ಗ್ರಂಥಾಲಯದಲ್ಲಿ Citronella ಎಣ್ಣೆ ಮತ್ತು Camphor ಎಣ್ಣೆಯನ್ನು ಬಳಸುತ್ತಿದ್ದರು. ಆದರೆ Citronella oil ತಾಳೆಗರಿಯ ಸಂರಕ್ಷಣೆಗೆ ಒಳ್ಳೆಯದಲ್ಲ ಎಂಬುದು ಬಹಳ ದಿನಗಳ ನಂತರ ಗೊತ್ತಾಯಿತು. ಇದೊಂದು ಶಾಖಾಹಾರ ತೈಲ. ಇದರ ಶಾಖಾಹಾರಿ ಗುಣವು ಹುಳುಗಳಿಗೆ ಆಹಾರವಾಗುವುದರಿಂದ ಸಂರಕ್ಷಣೆಯ ಶಕ್ತಿಯನ್ನು

ಕಳೆದುಕೊಳ್ಳುತ್ತಿತ್ತು. ಟರ್ಪೆಂಟೈನ್ ೧ ಲೀಟರ್, ಕ್ಯಾಂಪೊರ್ ೫೦೦ ಗ್ರಾಂ, ಸಿಟ್ರೊನೆಲ್ಲ ತೈಲ ೨೫೦ ಗ್ರಾಂ, ಬೇವಿನ ಎಣ್ಣೆ ೧೦ ಎಂ.ಎಲ್, ಗ್ರಾಫೆಟ್ ಪೌಡರ್ ೪ ಗ್ರಾಂ, ಸಿಟ್ರೊನೆಲ್ಲ ತೈಲ ಮತ್ತು Camphor ಎಣ್ಣೆ ಈ ಮೇಲಿನ ಮಿಶ್ರಣವಾಗಿತ್ತು. ಆದರೆ ಕೊಚ್ಚಿನ ತ್ರಿಪುಣಿಪುರನ ಗ್ರಂಥ ಲೈಬರಿಯು ಸ್ವಲ್ಪ ಭಿನ್ನವಾದ ವಿಧಾನವನ್ನು ಅನುಸರಿಸುತ್ತದೆ. ಟರ್ಪೆಂಟೈನ್ ೧ ಲೀಟರ್, ಬೇವಿನ ಎಣ್ಣೆ ೧೦ ಎಂ.ಎಲ್, ಕ್ಯಾಂಪೊರ್ ೨೫೦ ಗ್ರಾಂ, ಗ್ರಾಫೆಟ್ ಪೌಡರ್ ೪ ಗ್ರಾಂ.[೪] ಈ ಮೇಲಿನ ತೈಲಗಳಲ್ಲಿ ಬೇವಿನ ಎಣ್ಣೆಯ ಬಳಕೆ ಅತಿ ಪ್ರಮುಖವಾಗಿದೆ.

### ೬.೧.೪. ಧೂಮ್ರ ಚಿಕಿತ್ಸೆ

ಹಸ್ತಪ್ರತಿಗಳ ಸಂರಕ್ಷಣೆ ಕಷ್ಟ ಸಾಧ್ಯವಾದ ಆದರೆ ಅಷ್ಟೇ ಅವಶ್ಯಕವಾದ ಕೆಲಸ. ಹಿಂದಿನ ಕಾಲದಲ್ಲಿ ತಾಡವೋಲೆಗಳ ಕಟ್ಟುಗಳನ್ನು ಬಟ್ಟೆಯಲ್ಲಿ ಸುತ್ತಿ ಅವುಗಳನ್ನು ಅಡುಗೆ ಮನೆಯೊಳಗೆ ಇಡುತ್ತಿದ್ದರು. ಇನ್ನೂ ಕೆಲವೊಮ್ಮೆ ಅಡುಗೆ ಮನೆಯ ಒಲೆಮೇಲಿನ ಅಟ್ಟದಲ್ಲಿ ಅಥವಾ ಹೊಗೆ ಗಿಂಡಿಗಳಲ್ಲಿ ಕೂಡಿಡುತ್ತಿದ್ದರು. ಈ ಮೂಲಕ ಹಸ್ತಪ್ರತಿಗಳನ್ನು ಬೆಳ್ಳಿ ಮೀನು, ಜಿರಲೆ, ನುಸಿ, ಗೆದ್ದಿಲು ಮುಂತಾದವುಗಳಿಂದ ಕಾಪಾಡುತ್ತಿದ್ದರು.

### ೬.೧.೫. ಸೂರ್ಯನ ಶಾಖದ ಚಿಕಿತ್ಸೆ

ನಿರ್ದಿಷ್ಟ ಕಾಲಮಾನದಲ್ಲಿ ಸೂರ್ಯನ ಬೆಳಕಿನಲ್ಲಿ ಗರಿಗಳನ್ನು ಹರಡಿ ಒಣಗಿಸುವುದು. ಬಾದ್ರಪದ ಮಾಸದ ಒಂದು ದಿನಗಳಲ್ಲಿ ಹಸ್ತಪ್ರತಿಗಳನ್ನು ಪ್ರತಿ ಮನೆಯವರು ಸೂರ್ಯನ ಬೆಳಕಿಗೆ ಇಡುವುದು ಒರಿಸ್ಸಾದಲ್ಲಿ ಸಾಂಪ್ರದಾಯಿಕವಾಗಿ ಬೆಳೆದು ಬಂದಿದೆ. ಈ ತಿಂಗಳ ಬಿಸಿಲು ಹಸ್ತಪ್ರತಿಗಳ ರಕ್ಷಣೆಗೆ ಅನುಕೂಲಕರವಾಗಿದೆ. ಸಣ್ಣ ಹುಳುಗಳು ಬೆಳಕಿಗೆ ಸಾಯುವುವಲ್ಲದೆ, ಗರಿಗಳ ಮೇಲೆ ಇರುವ ಬೂಷ್ಟ ಕೂಡಾ ಕರಗುತ್ತದೆ. ನಂತರದಲ್ಲಿ ಅವುಗಳನ್ನು ಬಿಗಿಯಾಗಿ ಕಟ್ಟಿಡಲಾಗುವುದು. ಕೆಲವು ಮನೆಗಳಲ್ಲಿ ಅಡಿಗೆ ಮನೆಯ ಮಾಡುಗಳಲ್ಲಿ ಇಡುತ್ತಾರೆ. ಅಡಿಗೆ ಮನೆ ಒಲೆಯ ಶಾಖವು ಹುಳುಗಳಿಂದ ಗರಿಗಳನ್ನು ರಕ್ಷಿಸುತ್ತದೆ.

### ೬.೧.೬. ಸಸ್ಯಜನ್ಯ ಔಷಧಗಳ ಬಳಕೆ

ಬೇವಿನ ಎಲೆ ಕಹಿರುಚಿ ಇದ್ದು ಎಲೆಗಳಲ್ಲದೇ ಬೇವಿನ ಬೀಜದ ಪುಡಿಯೂ ಸಹ ಕೀಟಗಳನ್ನು ಹಸ್ತಪ್ರತಿಗಳಿರುವ ಕೊಠಡಿಯಿಂದ ದೂರವಿಡುತ್ತದೆ. ಬೇವಿನ ಎಲೆಗಳು ಹಸ್ತಪ್ರತಿಗಳನ್ನು ಕ್ರಿಮಿಕೀಟಗಳಿಂದ ಸಂರಕ್ಷಿಸಲು ಪ್ರಮುಖ ಸಾಂಪ್ರದಾಯಿಕ ಆಕರವಾಗಿದೆ.

ತಾಳೆವೋಲೆಗಳ ಮೇಲೆ ಮಸಿಯ ಪದರು ಏರ್ಪಡುವುದರಿಂದ ಅದರ ಮೇಲಿನ ಅಕ್ಷರಗಳು ಸ್ಫುಟಗೊಳ್ಳುತ್ತವೆ. ಆದರೆ ಇದರಿಂದ ತಾಳೆವೋಲೆಗಳು ಪೆಡಸಾಗಿ ಹರಿದು ಹೋಗುವ ಸಾಧ್ಯತೆಯಿದೆ. ಹೀಗಾಗದಂತೆ ಗರಿಗಳ ಮೇಲೆ ಬೇವಿನ ಎಣ್ಣೆಯನ್ನು ಸವರುತ್ತಿರಬೇಕು. ಮೆದುವಾದ ಬಟ್ಟೆಚೂರಿನಿಂದ ಬೇವಿನ ಎಣ್ಣೆಯನ್ನು ಸವರಬೇಕು. ಮೆದುವಾದ ಕತ್ತದ ಚೂರನ್ನು ಈ ಕೆಲಸಕ್ಕೆ ಬಳಸಬಹುದು. ಆ ಬಳಿಕ

ಬಟ್ಟೆಯಲ್ಲಿ ಸುತ್ತಿ ಜತನವಾಗಿ ಕಾಪಾಡಬೇಕು. ಹುಳುಕು ಪುಟಗಳು ಬಾಧಿಸದಂತೆ 'ವಸ' ಪುಡಿಯನ್ನು ಇವುಗಳ ಮೇಲೆ ಚಿಮುಕಿಸಬೇಕು. ಹಸ್ತಪ್ರತಿಗಳನ್ನು ಬಳಸುವಾಗ ಮುರಿದು ಹೋಗಬಹುದು. ಇದನ್ನು ತಪ್ಪಿಸಲು ಮಧ್ಯದ ಕಡ್ಡಿ ಇರುವ ಎಲೆಗಳನ್ನು ಮತ್ತು ಮರದ ತುಂಡನ್ನು ಕಟ್ಟಿನ ಎರಡೂ ಕಡೆಗಳಿಗೆ ಸೇರಿಸಲಾಗುವುದು. ಹಸ್ತಪ್ರತಿಗನ್ನಿಟ್ಟಿರುವ ಸ್ಥಳದಲ್ಲಿ ಬೇವಿನ ಎಲೆಗಳನ್ನು ಹರಡಲಾಗುತ್ತದೆ. ಮತ್ತು ವಸಂಪೂವಿನ ತುಂಡಗಳನ್ನು ಇಡಲಾಗುತ್ತದೆ. ಮಳೆಗಾಲದಲ್ಲಿ ಈ ಕಟ್ಟುಗಳನ್ನು ರಕ್ಷಿಸುವ ತುಂಬ ಸರಳ ಮತ್ತು ಸಹಜವಾದ ವಿಧಾನಗಳಾಗಿವೆ. ಇವೆಲ್ಲವೂ ಸಾಂಪ್ರದಾಯಿಕ ಸಂರಕ್ಷಣೆಯಲ್ಲಿ ನೈಸರ್ಗಿಕ ವಸ್ತುವಾಗಿ ಬೇವಿನ ಬಳಕೆ ಕಂಡುಬರುತ್ತವೆ.

ಒರಿಸ್ಸಾದಲ್ಲಿ ಹಸ್ತಪ್ರತಿಗಳ ರಕ್ಷಣೆಯನ್ನು ನಾನಾ ರೀತಿಯಲ್ಲಿ ಮಾಡಿಕೊಂಡು ಬರಲಾಗುತ್ತದೆ. ಹುಳು ಹುಪ್ಪಡಿಗಳಿಂದ ರಕ್ಷಿಸಲು ಹಸ್ತಪ್ರತಿಗಳನ್ನು ಅಶ್ವಗಂಧ ಎಲೆಗಳಲ್ಲಿಟ್ಟ ಬಟ್ಟೆಯಿಂದ ಕಟ್ಟಲಾಗುತ್ತಿತ್ತು. ಅಲ್ಲದೇ ಹಸ್ತಪ್ರತಿಗಳ ರಕ್ಷಣೆಗೆ ನೆಲಮಾಳಿಗೆಯನ್ನು ನಿರ್ಮಿಸಲಾಗುತ್ತಿತ್ತು.[೬]

ಇನ್ನೂ ಕೆಲವು ಸಾಂಪ್ರದಾಯಿಕ ವಿಧಾನಗಳಲ್ಲಿ ತುಂಬಾ ವಿಭಿನ್ನವಾದ ಹಾಗೂ ವಿಧಾನವೆಂದರೆ, ಅವರೆಕಾಯಿಯ ರಸವನ್ನು ಗರಿಗಳಿಗೆ ಹಚ್ಚುವುದು ಇದರಿಂದ ಅಕ್ಷರಗಳು ಸ್ಪುಟವಾಗಿ ಕಾಣುವವು. ಈ ವಿಧಾನವು ಓರಿಸ್ಸಾದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ. ವಿಧಾನವೆಂದರೆ, ಬೇವಿನ ಎಲೆ ಹುಡಿಯನ್ನು ಬಳಸುವುದು. ಗರಿಗಳನ್ನು ರಕ್ಷಿಸಲು ಯಾವುದೇ ವಿಧಾನವನ್ನು ಬಳಸಿದಾಗಲೂ ಗರಿಗಳನ್ನು ಬಿಗಿಯಾಗಿ ಕಟ್ಟಿಡುವುದು ಬಹುಮುಖ್ಯವಾದುದು.[೭]

**೬.೨. ಮಸಿ ತಯಾರಿಕೆ**

ಬಿಳಿಯ ದಾಸಿವಾಳದ ಬಡಗ ಹರಿದ ಬೇರ ತಂದು, ಹೊಸ ಹಂಚಿಗೆ ಹೂಡಿ, ಅಲತೆಗೆಯ ಬತ್ತಿಯ ಮಾಡಿ ಆಮದಮಡಿ ಕಾಳಿ ಆವಿನ ತುಪ್ಪದಲ್ಲಿ ಕಾಡಿವಿಡಿದುಮದು ಕರ್ಪೂರದಿಂದಮರ್ದಿ ಕಪ್ಪನ್ನು ಸಿದ್ಧಪಡಿಸುತ್ತಿದ್ದರೆಂಬ ಉಲ್ಲೇಖ ಹಸ್ತಪ್ರತಿಯಲ್ಲಿ ದೊರೆಯುತ್ತದೆ.

ಡಾ.ಡಿ.ಎಲ್.ನರಸಿಂಹಾಚಾರ್ಯ ಅವರು ಮಸಿಯನ್ನು ಮಾಡುವ ವಿವಿಧ ವಿಧಾನಗಳ ಕುರಿತು ಮಾಹಿತಿ ನೀಡುತ್ತಾರೆ. ರಾಗಿಯನ್ನು ಹುರಿದು ಸೀಯಿಸಿ ಪುಡಿಮಾಡಿ ನೀರಿನಲ್ಲಿ ಕಲಿಸಿ ಅದಕ್ಕೆ ಗೋಂದನ್ನೋ ಸಕ್ಕರೆಯನ್ನೋ ಅಂಟಿಗಾಗಿ ಸ್ವಲ್ಪ ಮಿಶ್ರಮಾಡಿ ಅದನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದರು. ಇದಕ್ಕೆ ರಾಗಿಮಸಿ ಎಂದು ಹೆಸರು. ಕಾಗದದ ಮೇಲೆ ಬರೆಯಲು ಇದನ್ನು ಬಳಸುತ್ತಿದ್ದರು. ಅಳಲೆಕಾಯಿ ಅನ್ನಭೇದಿ ಮುಂತಾದವುಗಳಿಂದ ಮಸಿಯನ್ನು ತಯಾರಿಸುತ್ತಿದ್ದರು. ಬರಿ ಇದ್ದಲಿನ ಪುಡಿಯನ್ನು ವಸ್ತ್ರಗಾಲಿತ ಮಾಡಿ ಅದಕ್ಕೆ ನೀರು, ಗೋಂದು, ಸಕ್ಕರೆ ಮುಂತಾದವನ್ನು ಹದವರಿತು ಬೆರಸಿ ಮಸಿಯನ್ನು ಮಾಡುತ್ತಿದ್ದುದೂ ಉಂಟು.

**೬.೩. ಕಪಾಟುಗಳ ಬಳಕೆ**

ತಾಳೇಗರಿಗಳನ್ನು ಕಾಗದ ಗ್ರಂಥಗಳನ್ನು ಸಂರಕ್ಷಿಸಲು ತೇಗದ ಮರದ ಪಟ್ಟಿ ಹೆಚ್ಚು ಉಪಯುಕ್ತವಾದುದು. ಬಿದಿರಿನ ಬಳಕೆ ಅಷ್ಟು ಸುರಕ್ಷತೆ ಆಗಲಾರದು. ಆದರೆ ಬಿದಿರಿನ ಪ್ರಕಾರಗಳಲ್ಲಿ ತಾಮೆ ಬಿದಿರು ಮಾತ್ರ

ಪ್ರಮುಖ ಮತ್ತು ಪ್ರಸಿದ್ಧ ಬಿದಿರಾಗಿದ್ದು ಇದನ್ನು ಬಳಸಬಹುದು. ಆದರ್ಶ ಅಕಾಡಮಿ ಆಫ್ ಇಂಡಿಯನ್ ಕಲ್ಚರ್ ಇಲ್ಲಿ ಮೊದಲು ನೈಲಾನ ಬಳಕೆ ಮಾಡಲಾಗುತ್ತಿತ್ತು. ಇದರ ಬಳಕೆಯಿಂದ ಹೆಚ್ಚು ಸುರಕ್ಷತೆ ಆಗಲಾರದೆಂದು ಹತ್ತಿ ದಾರವನ್ನು ಬಳಕೆ ಮಾಡಲಾಯಿತು. ಹಸ್ತಪ್ರತಿ ಮತ್ತು ಕಾಗದ ಗ್ರಂಥಗಳನ್ನು ಗಾಳಿ ಮತ್ತು ಬೆಳಕು ಸರಿಯಾಗಿ ಇರುವ ಸ್ಥಳದಲ್ಲಿ ಇಡಬೇಕು. ಗಾಳಿ ಬೆಳಕು ಸಿಗಲು ಕೆಳಗೆ ರಂಧ್ರಗಳಿರಬೇಕು. ಶೃಂಗೇರಿ ಕಡತಗಳನ್ನು ಕಬ್ಬಿಣ ಪೆಟ್ಟಿಗೆಯಲ್ಲಿ ಇಟ್ಟಿದ್ದರಿಂದ ಅವು ನಾಶವಾದವು ಎಂದು ಹೇಳಲಾಗುತ್ತದೆ. ಹಸ್ತಪ್ರತಿ ಮತ್ತು ಕಾಗದ ಗ್ರಂಥಗಳಿಗೆ ಯಾವುದೇ ರೀತಿಯ ಲೋಹದ ಪೆಟ್ಟಿಗೆ ಬಳಕೆ ಅಷ್ಟು ಸುರಕ್ಷತೆಯಾಗಲಾರದು.

**ಹಸ್ತಪ್ರತಿಗಳ ತಯಾರಿಕೆ: ಸಂರಕ್ಷಣಾ ದೃಷ್ಟಿಕೋನ**

ಇದನ್ನು ಭೌತಿಕ ಸಂರಕ್ಷಣೆಯೆಂದು ಕರೆಯಬಹುದು. ಹಸಿಯಾದ ತಾಳೆಗರಿಗಳು ಪೆಡಸಾಗಿದ್ದು ಬೂದುಬಣ್ಣದಲ್ಲಿರುತ್ತವೆ. ಆದ್ದರಿಂದ ಇವುಗಳನ್ನು ಬರವಣಿಗೆಗಾಗಿ ಸಿದ್ಧಪಡಿಸಬೇಕಾಗುತ್ತದೆ. ಕೇರಳದಲ್ಲಿ ಬರವಣಿಗೆಗಾಗಿ ಬೇಕಾದಷ್ಟು ಗಾತ್ರದಲ್ಲಿ ತುಂಡು ಮಾಡಿ ಒಣಗಿಸುತ್ತಾರೆ. ಬಳಕೆಗೆ ಬೇಕಾದಷ್ಟು ಅರಿಶಿಣಕ್ಕೆ ನೀರು ಹಾಗೂ ಹಾಲು ಸೇರಿಸಿದ ಮಿಶ್ರಣದಲ್ಲಿ ಕುದಿಸುತ್ತಾರೆ. ನಂತರ ಅವುಗಳನ್ನು ನೆರಳಿನಲ್ಲಿ ಒಣಗಿಸಿ ಓಲೆಗಳ ೧/೪ ಭಾಗದಷ್ಟನ್ನು ಎರಡು ಅಂಚುಗಳಲ್ಲಿ ತೂತುಗಳನ್ನು ಮಾಡಲಾಗುತ್ತದೆ. ಎರಡು ಮರದ ಹಲಗೆ ತುಂಡುಗಳ ನಡುವೆ ಇವುಗಳನ್ನು ಇರಿಸಿ ತಾಳೆಓಲೆಗಳು ದೃಢವಾಗಿ ನಿಲ್ಲುವಂತೆ ಕಟ್ಟಲಾಗುತ್ತದೆ. ಬಳಿಕ ಅವುಗಳನ್ನು ಬರವಣಿಗೆಗೆ ಬಳಸಲಾಗುತ್ತದೆ.[೮] ಹಸ್ತಪ್ರತಿಗಳನ್ನು ಬರವಣಿಗೆಗೆ ಸಿದ್ಧಪಡಿಸುವಾಗಲೂ ಸಾಂಪ್ರದಾಯಿಕ ಕ್ರಮದ ಜೊತೆಗೆ ನೈಸರ್ಗಿಕವಾಗಿ ಸಿಗುವ ವಸ್ತುಗಳನ್ನು ಹಸ್ತಪ್ರತಿಗಳ ಸಂರಕ್ಷಣೆಯ ದೃಷ್ಟಿಯಿಂದ ಅವುಗಳ ತಯಾರಿಕೆಯ ಹಂತದಲ್ಲಿಯೇ ಬಳಸುತ್ತಿದ್ದರು.

ದೊಡ್ಡದಾದ ಗರಿಗಳನ್ನು ರಕ್ಷಿಸಲು ಮರದ ಹಲಗೆಯನ್ನು ಸರಿಯಾದ ಆಕಾರಕ್ಕೆ ಮಾಡಿಕೊಂಡು ಮೂರು ರಂಧ್ರಗಳನ್ನು ಮಾಡಿಕೊಳ್ಳಲಾಗುತ್ತಿತ್ತು. ಈ ರಂಧ್ರಗಳು ಮಧ್ಯೆ ಅಕ್ಕಪಕ್ಕದಲ್ಲಿ ಇರುತ್ತಿದ್ದು, ಇವುಗಳ ಮೂಲಕ ಕಟ್ಟುಗಳನ್ನು ಕಟ್ಟಲಾಗುತ್ತಿತ್ತು. ಅದೇ ರೀತಿ ಕಾಗದ ಹಸ್ತಪ್ರತಿಗಳನ್ನು ಹಲಗೆಗಳನ್ನು ಬಳಸಿ, ದಾರಗಳಿಂದ ಕಟ್ಟಿ ರಕ್ಷಿಸಿಡಲಾಗುತ್ತಿತ್ತು. ಮರದ ಹಲಗೆಯ ಮೇಲೆ ಬಣ್ಣದ ಚಿತ್ರಗಳನ್ನು ರಚಿಸುತ್ತಿದ್ದರು. ಕೆಲವು ಹಲಗೆಗಳ ಮೇಲೆ ರೇಷ್ಮೆ ಸ್ಯಾಟಿನ್ ಅಥವಾ ಸುಂದರವಾದ ಅಂಚುಗಳುಳ್ಳ ಬಟ್ಟೆಗಳನ್ನು ಅಥವಾ ಆ ಬಟ್ಟೆಗಳ ಮೇಲೆ ಅಲಂಕಾರಿಕ ಅಷ್ಟಮಂಗಲಗಳನ್ನು ಪ್ರತಿನಿಧಿಸುವ ಕಸೂತಿಯನ್ನು ಹಾಕುತ್ತಿದ್ದರು. ಬಟ್ಟೆಯಿಂದ ಸುತ್ತಿದ ಹಸ್ತಪ್ರತಿಗಳನ್ನು ಕಟ್ಟಿಗೆ ಅಥವಾ ಅಲ್ಯೂಮಿನಿಯಂ ಪೆಟ್ಟಿಗೆಯಲ್ಲಿ ರಕ್ಷಿಸಲಾಗುತ್ತಿತ್ತು. ಕೆಲವು ಸಾರಿ ಬಂಧಕವಾಗಿ ಕಟ್ಟಲಾಗುತ್ತಿದ್ದ ಬಟ್ಟೆಯನ್ನು ಬಳಸದೇ ಬೀಟೆ, ತೇಗ ಅಥವಾ ಶ್ರೀಗಂಧದ ಹಲಗೆಗಳನ್ನು ನಾಲ್ಕು ಕಡೆ ಇಟ್ಟು ರಕ್ಷಣೆ ಮಾಡಲಾಗುತ್ತಿತ್ತು. ಸಣ್ಣದಾದ ಹಸ್ತಪ್ರತಿಗಳನ್ನು ಕಾಗದದಿಂದ ತಯಾರಿಸಿದ ಪೆಟ್ಟಿಗೆಗಳಲ್ಲಿ ಸಂರಕ್ಷಿಸಲಾಗುತ್ತದೆ. ಆನೆದಂತ ಅಥವಾ ಚರ್ಮದಿಂದ ತಯಾರಿಸಿದ ಅಥವಾ ಶ್ರೀಗಂಧದ ಪೆಟ್ಟಿಗೆಯಲ್ಲಿಯೂ ರಕ್ಷಿಸಲಾಗುತ್ತದೆ.[೯]

ತೇವಾಂಶ ರಹಿತವಾದ ಅಥವಾ ಒಣಗಿದ ಗರಿಗಳು ಹಾಳಾಗುವುದಕ್ಕೆ ಹೆಚ್ಚು ಅವಕಾಶವಿರುವುದರಿಂದ ತೇವಾಂಶ ಇರುವ ಪ್ರದೇಶಗಳಲ್ಲಿ ಸಂಗ್ರಹಿಸಿಡಲಾಗುತ್ತದೆ. ಇದೇ ಕಾರಣವಾಗಿ ನೆಲ ಕೊಠಡಿಗಳಲ್ಲಿ ಹಸ್ತಪ್ರತಿಗಳನ್ನು ರಕ್ಷಿಸಲಾಗುತ್ತದೆ.[೧೦]

ಪತ್ತಳಿಕೆಯನಲು ಕಾಗದಮಕ್ಕು ದೌಲೆಮಸಿ

ಪಾತ್ರೆಯಕ್ಕು ಕಲಾಮು ಲೇಖನಿಯಕ್ಕೋಲೆ

ಪತ್ರಮದ ಲೇಖಮಕ್ಕಲ್ಲಿ ಕರತಾಳಿ ಹಿಂತಾಳಿ ತಾಳಿಯೆಸಿಕ್ಕುಂ

ಪ್ರತ್ರಿ ನಾರಾಚಮನೆಕಂಟಂ ಶುತ್ರಂ ಲೇಖಿಗೆ

ಬಿತ್ತಿಯೆನೆ ಪುಸ್ತಕಂ ರವಾನಿಕೆಮೆನಲ್ಕದಂ

ಪೊತ್ತಿರ್ಪ್ಪಕೋಲಕ್ಕು ಕಡಿತಮಂಬರಿಯಕ್ಕು ಬಳಪಮದು ಶಭ್ರೊಪಲಂ[೧೧]

ಮರದ ಪೆಟ್ಟಿಗೆಗಳಲ್ಲಿ ಭದ್ರವಾಗಿ ಮುಚ್ಚಿಟ್ಟು ತಾಳೆಗರಿಯ ಹಸ್ತಪ್ರತಿಗಳನ್ನು ಪರಂಪರಾಗತವಾಗಿ ಕಾಪಾಡಿಕೊಂಡು ಬರಲಾಗುತ್ತಿತ್ತು. ನವರಾತ್ರಿಯ ಸಂದರ್ಭದಲ್ಲಿ ಸರಸ್ವತಿ ಪೂಜೆಯ ವೇಳೆಗೆ ಮಾತ್ರ ಇವನ್ನು ಹೊರತೆಗೆದು ಧೂಳು ಹೊಡೆಯಲಾಗುತ್ತಿತ್ತು. ಇದು ಹಸ್ತಪ್ರತಿಗಳ ಸಂರಕ್ಷಣೆಯ ಜೊತೆಗೆ ಹಸ್ತಪ್ರತಿಗಳ ವಿನಾಶಕ್ಕೂ ಕಾರಣವಾಗುತ್ತಿತ್ತು. ತೊಲ್ಕಾಪಿಯಂ ಎಂಬ ಪ್ರಾಚೀನ ವ್ಯಾಕರಣ ಕೃತಿ ಜನಜೀವನಕ್ಕಾಗಿ ವ್ಯಾಕರಣವನ್ನು ಹೇಳುತ್ತದೆ. ತಮಿಳಿನಲ್ಲಿ ಬಳಸುವ ಬರವಣಿಗೆ ಸಾಧನಗಳು ಚಿನ್ನದ, ಬೆಳ್ಳಿಯ, ತಾಮ್ರದ ಪಟ್ಟೆಗಳು, ಕಲ್ಲುಬಂಡೆ, ತಾಳೆ ಎಲೆ ಮತ್ತು ಬಟ್ಟೆಗಳನ್ನು ಉಪಯೋಗಿಸುತ್ತಿದ್ದುದಕ್ಕೂ ಪುರಾವೆಯಾಗಿವೆ. ಅಲ್ಲದೆ ಆವೆಮಣ್ಣಿನ ಹಲಗೆಗಳು, ಚರ್ಮ ಮರದ ತೊಗಟೆ, ಮರದ ಹಲಗೆಗಳು ಸೀಳಿನ ಬೊಂಬುಗಳನ್ನು ಸಹಾ ಉಪಯೋಗಿಸುತ್ತಿದ್ದರು.

ಆತಿ ಕಾಲತಿಲ್ ಅಪ್ಪನ್ಯೈ ವಿಟ್ಟವಳ್

ಅರಿವುಳ್ಕೋರ್ತಮ್ ಕೈಯ್ಯಕಪ್ ಪಟ್ಟುವಳ್

ವೆಟ್ಟುಂಟು ಕಟ್ಟುಂಟು ಮೇನಿ ಚಿತ್ತೈಂತವಳ್

ಓತ್ ಕಣಿವಳ್ ವೇಚಿಯಮ್ ಅಲ್ಲಾಳೇ

ಉರೈತ್ತೋರುಡ್ಡು ಆಯಿರಮ್ ಪೊನುನ್ ತರುವಳೇ[೧೨]

ತಾಳೆಯ ಗಿಡದಿಂದ ತಾಳೆಯೋಲೆ ತಂದು ಅದನ್ನು ಬರಹದ ಅಳತೆಗೆ ತಕ್ಕಂತೆ (ಕೃತಿಗೆ ಬೇಕಾದ ರೀತಿಯಲ್ಲಿ) ಕತ್ತರಿಸಿ ಬರಹಕ್ಕೆ ಬಿರುವಂತೆ ಹದಗೊಳಿಸಿ ಬರಹದ ನಂತರ ಅವುಗಳಿಗೆ ಅರಿಷಿಣ ಮತ್ತು ಕಪ್ಪು ಅಂಟನ್ನು ಹಚ್ಚಲಾಗುತ್ತಿತ್ತು. ಈ ಒಗಟು ಹಸ್ತಪ್ರತಿಗಳನ್ನು ಮಾಡುವ ವಿಧಾನ ಮತ್ತು ಅವುಗಳನ್ನು ಸಂರಕ್ಷಿಸುವ ವಿಚಾರವನ್ನು ಹೇಳುತ್ತದೆ. ಹಸ್ತಪ್ರತಿ ಬರಹದ ನಂತರ ಅರಿಷಿಣ ಪುಡಿ, ಎಲೆಯರಸ, ಕಪ್ಪು ಅಂಟನ್ನು ಹಚ್ಚುವುದರ ಒಂದು ಬರಹ ಸುಲಭವಾಗಿ ಗೋಚರವಾಗುವುದು. ಎರಡು ಕೀಟಗಳಿಂದ ರಕ್ಷಿಸುವ ಗುಣವನ್ನು ಹೊಂದಿತ್ತು.

ಮಂಚಲ್ ಕುಳಿಪ್ಪಾಟ್ಟೆ ಮೈಯಿಟ್ಟು ಮುಪ್ಪಾಲುಮ್

ಮಿಂಚಪ್ಪಕಟ ಮಿಕವಳ್‌ರ್ನ್ ತಾಯ್[೧೩]

ಇಲ್ಲಿ ಹಸ್ತಪ್ರತಿ ಸಂರಕ್ಷಣೆಯನ್ನು ತಮಿಳಿನ ಬೆಳವಣಿಗೆ ಎಂಬಂತೆ ಪ್ರತಿಮಾತ್ಮಕವಾಗಿ ಚಿತ್ರಿಸಲಾಗಿದೆ. ನೀರಿನಿಂದ, ತೈಲದಿಂದ, ಸಡಿಲ ಕಟ್ಟಿನಿಂದ ಮೂರ್ಖರ ಕೈಯಲ್ಲಿ ಕೊಡದಂತೆ ಗ್ರಂಥವನ್ನು ರಕ್ಷಿಸುವುದು ಮುಖ್ಯವಾಗಿತ್ತು. ಅಲ್ಲದೇ ಅವುಗಳನ್ನು ಪುತ್ರರ ರೀತಿಯಲ್ಲಿ ಜವಾಬ್ದಾರಿಯಿಂದ ಸಂರಕ್ಷಿಸಬೇಕೆಂದು ಲಿಪಿಕಾರರು ಹೇಳಿದ್ದಾರೆ.

"ಅಗ್ನಿ ಮೂಶಿಕ ಚೋರೇಭ್ಯೋಶಿವೋ ರಕ್ಷಂತು ಪುಸ್ತಕಂ"

"ತೈಲಾದ್ರಕ್ಷೇಜ್ಜಲಾದ್ರಕ್ಷೇಚ್ಛಿಥಿಲ ಬಂಧನಾತ್

ಮೂರ್ಖಹಸ್ತೇನ ದಾತವ್ಯಮೇಯಂ ವದತಿ ಪುಸ್ತಕಂ"[೧೪]

ಅಗ್ನಿ ಮೂಷಕ, ತೈಲ, ಜಲ, ಚೋರ, ಶಿಥಿಲ ಬಂಧನ, ಮೂರ್ಖಹಸ್ತದಿಂದ ರಕ್ಷಿಸಿ ಎಂದು ಹಸ್ತಪ್ರತಿ ತೋರುತ್ತದೆ. ಇವೆಲ್ಲ ಹಸ್ತಪ್ರತಿಗಳಿಗೆ ವಿನಾಶಕ್ಕೆ ಕಾರಣವಾಗಿವೆ. ಈ ಎಂಟು ಆಪತ್ತುಗಳಲ್ಲಿ ಮೊದಲೈದು 'ಆಕಸ್ಮಿಕ' ಉಳಿದ ಮೂರು 'ನಿವಾರಕ'ಗಳೆಂದು ಹೇಳಲಾಗಿದೆ.

"ಜಿರಲೆಗಳೂ ಇಲಿಗಳೂ ಪ್ರವೇಶ ಮಾಡದಂತಹ ಸಂದು ಬಿಡದ, ಮುಚ್ಚಳ ಇರುವ ಮರದ ಪೆಠಾರಿಗಳಲ್ಲಿ ಗ್ರಂಥಗಳನ್ನು ಓರಣವಾಗಿ ಇಡುತ್ತಿದ್ದರು. ಈ ಪದ್ಧತಿ ಗ್ರಂಥಾಲಯಗಳಲ್ಲಿ ಈಗಲೂ ಕಾಣಬಹುದು. ಓದುಗರಿ ಗ್ರಂಥಗಳನ್ನು ಪಡೆಯಲು ಸಹಾಯಕವಾಗಲೂ ಗಾಳಿ ಬೆಳಕು ಸರಿಯಾಗಿ ದೊರೆಯುತ್ತೆಂಬ ಕಾರಣವು ಇದೆ. ಪ್ರತಿಯೊಂದು ಗ್ರಂಥದ ಕಟ್ಟನ್ನು ಕೆಂಪು ಇಲ್ಲವೆ ಹಳದಿ ಬಣ್ಣದ ರೇಶಿಮೆ ವಸ್ತ್ರಗಳಿಂದ ಸುತ್ತಿಡುತ್ತಿದ್ದರು. ಈ ಬಣ್ಣದ ಬಟ್ಟೆ ನುಸಿ ಹುಳು ಮುಂತಾದ ಕ್ರಿಮಿಕೀಟಗಳನ್ನು ದೂರವಿಡುತ್ತವೆ ಎಂದು ತಮ್ಮ ಜೀವನ ಅನುಭವದಿಂದ ಕಂಡುಕೊಂಡಿದ್ದರು. ಬಟ್ಟೆಯ ಒಳಗಡೆ ಕಟ್ಟುಗಳು ಸುತ್ತಲೂ ಒಣಗಿದ ಹೊಂಗೆಯ ಮತ್ತು ಬೇವಿನ ಎಲೆಯ ಪುಡಿಗಳನ್ನು ಉದರಿಸುತ್ತಿದ್ದರು ಎಂಬುದು ಎಂ.ವಿ.ಸೀ. ಅವರ ಅಭಿಪ್ರಾಯ.[೧೫]

ತಾಡಪತ್ರಂ ದೃಢಂ ಸೌಮ್ಯಂ ಋಜುಸಾಗ್ರಂ ದ್ವಿಧಾಕೃತಂ।

ಮೃದುಲಂ ಯತ್ಪ್ರಶಸ್ತಂ ತತ್ ಮತಂ ಲೇಖಾವಿಲೇಖನೇ॥

ಕರ್ಕಶಂ ಕಲ್ಮಷಂ ವಕ್ರಂ ಹೀನಾಗ್ರಂ ಸ್ಫುಟಿತಂ ಯುಗಂ।

ತಾಲಪತ್ರಂ ನ ತತ್ ಶ್ರೇಷ್ಠ ಮತಂ ಲೇಖಾವಿಲೇಖ ನೇ॥[೧೬]

ಉತ್ತಮ ಅನುತ್ತಮ ಗರಿಗಳ ಬಗ್ಗೆ ವಿವರಣೆ ನೀಡುತ್ತದೆ. ತಾಳೆಯೋಲೆಗಳು ಭದ್ರವಾಗಿ, ನಯವಾಗಿ, ನೇರವಾಗಿ, ಅಂಚು ತುದಿಗಳು ಸರಿಯಾಗಿರಬೇಕು, ಮೃದುವಾಗಿರಬೇಕು. ಇಂತಹವು ಬರವಣಿಗೆಗೆ ಯೋಗ್ಯವಾದವು. ಒರಟೋರಟಾಗಿ, ಕೊಳುಕುಳ್ಳುವಾಗಿ, ಸೊಟ್ಟಸೊಟ್ಟವಾಗಿ, ತುದಿ ಅಂಚುಗಳು ಸರಿಯಾಗಿಲ್ಲದ, ಸೀಳೀಕೊಂಡಿರುವ ತಾಳಪತ್ರಗಳು ಬರವಣಿಗೆಗೆ ಯೋಗ್ಯವಲ್ಲದವು. ಎಂದು ಈ ಶ್ಲೋಕಗಳ ಅರ್ಥ.

ಹಸ್ತಪ್ರತಿಗಳ ತಯಾರಿಕಾ ವಿಧಾನ "ಮರದಿಂದ ಎಲೆಯ ಹೊರಟು, ಇನ್ನೇನು ಎಲೆ ಬಿಚ್ಚಿ ಹರಡಿಕೊಳ್ಳುತ್ತದೆ ಎನ್ನುವಷ್ಟರಲ್ಲಿ ಅವುಗಳನ್ನು ಕತ್ತರಿಸಿ ತಂದು ಒಂದು ವಾರ ಕಾಲ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಅವುಗಳನ್ನು ೪ ತಿಂಗಳವರೆಗಾದರೂ ನೆಲದಲ್ಲಿ ಹೂಳಿ ಮತ್ತೆ ತೆಗೆದು ಶುದ್ಧಗೊಳಿಸಿ, ಬೇಕಾದ ಅಳತೆಗೆ ಕತ್ತರಿಸಿ, ಅಡುಗೆ ಮನೆಯ ಅಟ್ಟಗಳಲ್ಲಿ ಇಡುತ್ತಿದ್ದರು. ಅವುಗಳು ಅಡುಗೆ ಮನೆಯ ಹೊಗೆಯಿಂದ ಹದಗೊಳ್ಳುತ್ತಿದ್ದವು. ಹೀಗೆ ಹದಗೊಂಡವನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು ಎಂದು ಬರೋಡ ಓರಿಯಂಟಲ್ ಇನ್‌ಸ್ಟಿಟ್ಯೂಟ್‌ನ ಡೈರೆಕ್ಟರ್ ಬಿ. ಭಟ್ಟಾಚಾರ್ಯ ಹೇಳಿದರು. ಗರಿಗಳನ್ನು ಬಿಸಿಲಿನಲ್ಲಿ ಒಣಗಿಸಬೇಕು. ಅನಂತರ ಬಿಸಿನೀರಿನಲ್ಲಿ ಕುದಿಸಿ ಒಣಗಿಸಬೇಕು ಎಂದು ಬಿಮಲ್‌ಕುಮಾರ ದತ್ತ ಹೇಳುತ್ತಾರೆ. ಬರೆಯುವ ಮೊದಲು ಕಟ್ಟುವುದಕ್ಕೆ ಅನುಕೂಲವಾಗುವುದರ ಸಲುವಾಗಿ ಹಸ್ತಪ್ರತಿಗಳ ಅಳತೆಗಳ ಅನುಗುಣವಾಗಿ ರಂಧ್ರ ಮಾಡಲಾಗುತ್ತದೆ. ಎಲೆಯ ಕಟ್ಟಗಳು ಬರವಣಿಗೆಗೆ ಸಿದ್ಧವಾಗುವ ಸ್ವರೂಪವನ್ನು "ದವ್ಯತಾಳಪತ್ರಮಂ ತಂದು ದ್ವಿತೀಯ ರಂಧ್ರಮಂ ಮಾಡಿ, ಬಂಗದ ಹೊರೆಯಂತೊಂದೊಂದಂ ಪೊದಿಸಿಕ್ಕೆಲದಲಭಯಂ ಮೂಲೆಗಳಿಂದತ್ಯಲಂಕಾರವಾಗಿ ಕಣ್ಣೆ ಚೆಲ್ವಾಗೊಪ್ಪಲ್ಪಟ್ಟು ದಿವ್ಯಶಿವಾಲಯವೆಂದು ಒಬ್ಬ ಲಿಪಿಕಾರ ವರ್ಣಿಸಿದುದನ್ನು ಗಮನಿಸಬಹುದು. ಸಾಂಪ್ರದಾಯಿಕ ಸಂರಕ್ಷಣೆಯೆಂಬುದು ಪರಿಸರಮುಖಿ ಪರಿಸರ ಸ್ನೇಹಿಯಾಗಿದೆ.

ಸಾಲುಗಳು ವಕ್ರವಾಗಬಾರದೆಂದು ಬರೆಯುವ ಮೊದಲು ಕಾಗದದ ಮೇಲೆ ದಾರದ ರೇಖೆಗಳನ್ನು ಮೂಡಿಸುತ್ತಿದ್ದರು. ಮತ್ತು ಹುಳು ಮುಟ್ಟಬಾರದೆಂದು ಪಟಕದ ನೀರಿನಲ್ಲಿ ಅದ್ದುತ್ತಿದ್ದರು. ಈ ವಿಷಯ ಮೊದಲು ಪಟಕದ ನೀರಿನಲ್ಲಿ ಎದ್ದಿ ಒಣಗಿಸಬೇಕು ನಂತರ ಒಂದೊಂದು ಓಲೆಗೆ ಎಷ್ಟೆಷ್ಟು ಸಾಲುಗಳು ಬರೆಯಬೇಕೊ ಅಷ್ಟು ದಾರದ ಸುತ್ತುಗಳನ್ನು ವಾಲಿಗೆ ಸರಿಯಾಗಿ ಹಲಗೆಯಲ್ಲಿ ಸುತ್ತಿ ಆ ದಾರ ಸುತ್ತಿದ ಹಲಗೆಯ ಮೇಲೆ ಎಳೆಯಬೇಕು. ಅಂದರೆ ಗೆರೆಗಳು ಸ್ಪಷ್ಟವಾಗಿ ಮಾಡುವವು. ಪಟಕದ ನೀರಿನಲ್ಲಿ ತೋಯಿಸುವುದರಿಂದ ಓಲೆಗಳು ಎಷ್ಟು ದಿವಸಗಳಿಗಾದರೂ ನುಸಿಮುಟ್ಟುವುದಿಲ್ಲ. ಇನ್ನು ಪಟಕದ ನೀರು ಅಂದರೆ ಪಾವಸೇರು ಪಟಕದವನ್ನು ಒಂದು ಧಡೆ ನೀರಿನಲ್ಲಿ ಪುಡಿಮಾಡಿ ಹಾಕಬೇಕು. ಈ ನೀರನ್ನು ಪರಾತದಲ್ಲಿ ಹಾಕಿ ಹಾಳಿಯನ್ನು ಎದ್ದಿ ತೆಗೆದು ಒಣಗಿಸಬೇಕು. ಈ ನೀರನ್ನು ಹೆಚ್ಚಿಗೆ ಬೇಕಾದರೆ ಈ ಪ್ರಮಾಣದಂತೆ ಮಾಡಿಕೊಳ್ಳಬೇಕು ಎಂದು ಉದ್ಧರಣೆಗಳಿಂದ ತಿಳಿದು ಬರುತ್ತದೆ.[೧೭]

ನೈಸರ್ಗಿಕ ವಿಕೋಪಗಳಿಂದ ಮಾನವನಿಂದ ಒದಗುವ ಆಪತ್ತಿನಿಂದ, ಆಕಸ್ಮಿಕವಾಗಿ ಸಂಭವಿಸುವ ಆಪತ್ತುಗಳಿಂದ ಮತ್ತು ಕ್ರಿಮಿಕೀಟಗಳ ಆಪತ್ತುಗಳಿಂದ ಹಸ್ತಪ್ರತಿಗಳನ್ನು ಕಾಪಾಡಲು ತಮ್ಮದೇ ಆದ ಮನೋವೈಜ್ಞಾನಿಕ ನೆಲೆಯಲ್ಲಿ ಸಂರಕ್ಷಣಾ ತಾಂತ್ರಿಕತೆಯನ್ನು ರೂಢಿಸಿಕೊಂಡಿದ್ದರು. ಹಾಗೆಯೇ ಗ್ರಂಥಗಳನ್ನು ಪಾವಿತ್ರತ್ಯೆಯ ರೂಪವಾಗಿ ಸರಸ್ವತಿ ಪ್ರತಿಕವಾಗಿ ಭಕ್ತಿ–ಭಾವದಿಂದ ಸಂರಕ್ಷಿಸಿಕೊಂಡು ಬದುಕನ್ನು ಸಾಗಿಸುತ್ತಿದ್ದರು. ಇಲ್ಲಿ ಭಾವನೆ ಪ್ರಧಾನವಾದ ಸಾಂಪ್ರದಾಯಕ ಸಂರಕ್ಷಣೆಯೂ ಮಹತ್ವವನ್ನು ಪಡೆದಿದೆ.

ಯಂತ್ರದಿಂದ ತಯಾರಾದ ಕಾಗದಕ್ಕಿಂತಲೂ ಕೈಯಿಂದ ತಯಾರಿಸಿದ ಕಾಗದವು (Hand made paper) ಹೆಚ್ಚು ಕಾಲ ಬಾಳಿಕೆ ಬರುತ್ತದೆ. ಅಲ್ಲದೇ ಬಟ್ಟೆಯ ಚೂರುಗಳಿಂದ ಮಾತ್ರ ಮಾಡಲಾಗುತ್ತಿತ್ತು.

ಆದುದರಿಂದ ಹಸ್ತಪ್ರತಿಗಳು ದಾಖಲೆ ಪತ್ರಗಳು ಮತ್ತು ಅಪೂರ್ವವಾದ ಅಚ್ಚಾದ ಗ್ರಂಥಗಳನ್ನು ದುರಸ್ತಿಪಡಿಸುವಾಗ ಕೈಯಿಂದ ಮಾಡಿದ ಕಾಗದವನ್ನು ಉಪಯೋಗಿಸುವುದು ಹೆಚ್ಚು ಸುರಕ್ಷಿತವಾಗಿದೆ. ಶ್ರವಣಬೆಳಗೊಳ, ಗದಗ, ಧರ್ಮಸ್ಥಳ ಮುಂತಾದ ಕಡೆಗಳಲ್ಲೂ ಸಾಂಪ್ರದಾಯಿಕ ಸಂರಕ್ಷಣಾ ಕ್ರಮದಲ್ಲಿ ಗ್ರಂಥಗಳ ಸಂರಕ್ಷಣೆ ಮಾಡುತ್ತಿದ್ದಾರೆ. ದಕ್ಷಿಣ ಭಾರತದ ಎಲ್ಲಾ ಹಸ್ತಪ್ರತಿಗಳ ಎಲ್ಲಾ ಭಾಷೆಗಳಲ್ಲಿ ಲಿಪಿಕಾರರು ಗ್ರಂಥ ಸಂರಕ್ಷಣೆ ಕುರಿತು ಒಂದಲ್ಲ ಒಂದು ವಿಷಯ ಹೇಳಿದ್ದಾರೆ. ಪ್ರತಿಯೊಬ್ಬ ಕವಿ ಲಿಪಿಕಾರ ತನ್ನ ಕೃತಿ ಸೂರ್ಯ, ಚಂದ್ರರಿರುವವರೆಗೆ ಶಾಶ್ವತವಾಗಿರಲೆಂದು ಹೇಳಿಕೊಂಡಿದ್ದಾರೆ. ಕೃತಿಗಳ ಆದಿ ಅಥವಾ ಅಂತ್ಯದ ಭಾಗಗಳಲ್ಲಿ ಗ್ರಂಥ ಸಂರಕ್ಷಣೆ ಕುರಿತು ಹೇಳಿದ್ದಾರೆ.

ಹಲವಾರು ಕಡೆಗಳಲ್ಲಿ ಹಾಳಾಗುತ್ತಿರುವ ಹಸ್ತಪ್ರತಿಗಳನ್ನು ಸಂಗ್ರಹಿಸುವುದರಿಂದ ಹೊಸ ಹೊಸ ಕೃತಿಗಳು ಬೆಳಕಿಗೆ ಬರುತ್ತಲೇ ಇರುತ್ತವೆ. ಹೀಗಾಗಿ ಹಸ್ತಪ್ರತಿಗಳ ಸಂಗ್ರಹ ಕಾರ್ಯ ಸಂರಕ್ಷಣೆಯ ಮೂಲವಾಗಿದೆ. ಸಂಗ್ರಹಿತ ಹಸ್ತಪ್ರತಿಗಳಿಗೆ ಮೊದಲು ಮಾಡಬೇಕಾದ ಕೆಲಸವೆಂದರೆ ಅವುಗಳನ್ನು ಚೊಕ್ಕಟಗೊಳಿಸುವುದು. ಅನಂತರ ದಾಖಲೆ ಕಡತದಲ್ಲಿ ನಮೂದಿಸುವುದು ಸೂಚೀಕರಣವೆಲ್ಲಾ ಮುಗಿದ ಮೇಲೆ, ಹೊರಗಣ ರಕ್ಷಆ ಪಟ್ಟಿಗಳಿಲ್ಲದಿದ್ದಲ್ಲಿ ಓಲೆಗಳಿಗೆ ರಂಧ್ರಕ್ಕೆ ಸರಿಹೊಂದುವಂತೆ ರಂಧ್ರಗಳನ್ನು ಮಾಡಿ ದಾರದಿಂದ ಪೋಣಿಸಿ ಕಟ್ಟಬೇಕು. ಹೀಗೆ ದಾರದಿಂದ ಕಟ್ಟುವಾಗಲೂ ಬಹಳ ಎಚ್ಚರಿಕೆವಹಿಸಬೇಕು. ಅದು ಯಾವುದೇ ಪತ್ರಗಳಿಗೆ ಹಾನಿಯಾಗುವಂತಿರಬಾರದು. ಕಾಗದ ಹಸ್ತಪ್ರತಿಗಳಿಗೆ ರಕ್ಷಾ ಪಟ್ಟಿಗಳನ್ನು ಅವುಗಳ ಅಳತೆಗೆ ತಕ್ಕುದಾದ ರಟ್ಟನ್ನೋ ಮರದ ಹಲಗೆಯನ್ನೋ ಅಳವಡಿಸಬಹುದು. ಇಂತಹ ಯಾವುದೇ ಹಸ್ತಪ್ರತಿಗಳನ್ನು ಗ್ರಂಥ ಭಂಡಾರಕ್ಕೆ ಸೇರಿಸುವ ಮೊದಲು ಪ್ರಧೂಮನ ಉಪಚಾರಕ್ಕೆ ಒಳಪಡಿಸುವುದು ಅತ್ಯಂತ ಅಗತ್ಯವಾಗಿದ್ದು ನಮ್ಮ ಹಿರಿಕರು ಗ್ರಂಥಗಳನ್ನು ಅಡುಗೆಯ ಮನೆಯಲ್ಲಿ ಇಡುತ್ತಿದ್ದರು.

ಸಾಂಪ್ರದಾಯಿಕ ಸಂರಕ್ಷಣೆ ಒಂದು ಜೈವಿಕ ಕ್ರಿಯೆಯಾಗಿತ್ತು. ಸ್ವಾವಲಂಬನೆ ಸಮುದಾಯ ಪ್ರಜ್ಞೆ ಭಾವನೆಗಲು ಜಾಗೃತಗೊಳ್ಳುತ್ತಿದ್ದವು. ಸಾಂಪ್ರದಾಯಿಕ ಸಂರಕ್ಷಣೆ ವಿಶೇಷವಾದ ರೀತಿಯಲ್ಲಿ ಮಾಡುವ ಗೋಜಿಗೆ ಹೋಗದಿದ್ದರು. ನಮ್ಮ ಪ್ರಾಚೀನರು, ಗ್ರಾಮೀಣರು ಬದುಕಿಗೆ ಬೇಕಾಗುವ ಜೀವನವಶ್ಯಕ ಆಹಾರ ಪದಾರ್ಥ, ಧನ ಧಾನ್ಯಗಳನ್ನು ಸಂರಕ್ಷಿಸುವ ರೀತಿಯಲ್ಲಿ ಗ್ರಂಥಗಳ ಸಂರಕ್ಷಣೆ, ಜ್ಞಾನದ ಸಂರಕ್ಷಣೆಯನ್ನು ಬದುಕಿನ ಭಾಗವಾಗಿ ಕಾಣುತ್ತಾ ಬಂದಿದ್ದಾರೆ.

**೬.೪. ಹಸ್ತಪ್ರತಿಗಳ ಬಳಕೆ : ಸಂರಕ್ಷಣಾ ಸಮಸ್ಯೆಗಳು:**

ಹಸ್ತಪ್ರತಿಗಳ ಉಪಯೋಗದ ಸಂದರ್ಭದಲ್ಲಿ ಅವುಗಳನ್ನು ಜಾಗೃತೆಯಿಂದ ಬಳಸುವ ಕಲೆಯನ್ನು ನಮ್ಮ ಪ್ರಾಚೀನರು ಬಲ್ಲವರಾಗಿದ್ದರು. ನೈಸರ್ಗಿಕವಾಗಿ ಸಿಗುವ ವಸ್ತುಗಳನ್ನು ಒಳ್ಳೆಯ ಗಳಿಗೆಯಲ್ಲಿ ಮಡಿಮೈಲಿಗೆಯಿಂದ ತಂದು ಕ್ರಿಮಿಕೀಟಗಳ ಬಾದೆಗೆ ಒಳಗಾಗದಂತೆ ಆಹಾರ-ಧಾನ್ಯಗಳು ಬದುಕಿಗೆ ಬೇಕಾಗುವ ಜೀವನಾವಶ್ಯಕಗಳನ್ನು ಜೊತೆ ಜೊತೆಗೆ ಜ್ಞಾನ ಸಾಮಗ್ರಿಗಳಾದ ಹಸ್ತಪ್ರತಿಗಳನ್ನು ಸಂರಕ್ಷಿಸುತ್ತಿದ್ದರು.

ಯಾವ ಯಾವ ವಸ್ತುವನ್ನು ಯಾವ ಪ್ರಮಾಣದಲ್ಲಿ ಹೇಗೆ ಬಳಸಬೇಕು ಎಂಬುದು ಬಲ್ಲವರಾಗಿದ್ದರು. ಇವರ ಸಂರಕ್ಷಣೆ ವೈಜ್ಞಾನಿಕ ಮನೋಭಾವದ ನೆಲೆಯಲ್ಲಿ ರೂಪಗೊಂಡು ಬಂದಿದೆ.

ಗತದ, ಪಳಯುಳಿಕೆಗಳನ್ನು ವಸ್ತುರೂಪಿಯಾಗಿ ನಾಲ್ಕು ಗೋಡೆಗಳ ಮಧ್ಯದಲ್ಲಿ ಅದಕ್ಕೆ ತಕ್ಕ ತಾಂತ್ರಿಕ ಹಾಗೂ ರಾಸಾಯನಿಕಗಳ ಬಲದಿಂದ ಶಾಸ್ತ್ರೀಯವಾಗಿ ಸಂಗ್ರಹಿಸಿ, ಸಂರಕ್ಷಿಸಿ ಇಡುವ ಕ್ರಮವೇ ವಸ್ತುಸಂಗ್ರಹಾಲಯದ ಮುಖ್ಯ ಉದ್ದೇಶವಾಗುತ್ತದೆ. ಇದೊಂದು ಭೌತಿಕ ರೂಪ ಹಾಗೂ ನಿರ್ಭಾವುಕ ಸಂರಕ್ಷಣೆಯ ಮಾದರಿಯಾಗಿದೆ. ಆದರೆ ಭಾರತೀಯ ಸಾಂಪ್ರದಾಯಿಕ ಮನಸ್ಸು ಇದಕ್ಕಿಂತ ಭಿನ್ನವಾದ ಹಾಗೂ ಜೀವಂತವಾದ ಸಂಗ್ರಹ ಹಾಗೂ ಸಂರಕ್ಷಣೆಯ ಕ್ರಮಗಳನ್ನು ಕಾಪಾಡಿಕೊಂಡು ಬಂದಿರುವುದು ವಿಶೇಷ. ಇಲ್ಲಿ ಸಂಗ್ರಹಣೆ ಹಾಗೂ ಸಂರಕ್ಷಣೆ ಎನ್ನುವುದು ಬರೀ ಕಾಯ್ದಿಟ್ಟುಕೊಳ್ಳುವ ನಿರ್ವೀರ್ಯ ಸ್ಥಿತಿಯದ್ದಲ್ಲ. ಅದೊಂದು ಸಂವರ್ಧನಶೀಲ ಪ್ರಕ್ರಿಯೆಯೂ ಆಗಿತ್ತು. ಎನ್ನುವುದು ಗಮನಾರ್ಹವಾದುದು.[೮]

ಗರಿಗಳಿಗೆ ಎಣ್ಣೆ ನೀರು ಧೂಳು ಮುಂತಾದವುಗಳು ಸೇರಿದಂತೆ ಮಾಡಬೇಕಾದುದು ಅತಿಮುಖ್ಯ. ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದ ಗ್ರಂಥದಲ್ಲಿ

ಗೃಹೆಯಸ್ಯೆದಮಾಖ್ಯಾನ ಪುಸ್ತಕಂ ತಿಪ್ಪತಿ ಧೃವಂ।

ತಸ್ಮೈಶ್ವರ್ಯ ಸವೃದ್ಧಿಸ್ಯಾನ್ನಾಗ್ನಿ ಚೋರಭಯಂ ಭವೇತ್॥[೯]

ಯಾವಗೃಹದಲ್ಲಿ ಅಖ್ಯಾನ ಗ್ರಂಥವಿದೆಯೋ ಅಲ್ಲಿ ಐಶ್ವರ್ಯ ಸಮೃದ್ಧಿಗಳು ನೆಲೆಸಿರುತ್ತವೆ. ಆದರೆ ಅಗ್ನಿ ಚೋರ ಭಯವೂ ನಿಶ್ಚಿತ ಎಂದು ಹೇಳಲಾಗಿದೆ. ಕೈಗಾರಿಕೋದ್ಯಮದ ಪ್ರಪಂಚದಲ್ಲಿ ಗಂಧಕಾಮ್ಲ ನೈಟ್ರೋಜನ್ ಡೈ ಆಕ್ಸೈಡ್ ಮತ್ತು ಓಜೋನ್ ಎಂಬ ಮುಖ್ಯ ಮೂರು ಅನಿಲರೂಪ ಮಾಲಿನ್ಯಗಲಿಂದ ಗ್ರಂಥಗಳನ್ನು ಸಂರಕ್ಷಿಸಲಾಗುತ್ತಿದೆ.

ಓಲೆ ಹಾಗೂ ಕಾಗದ ಹಸ್ತಪ್ರತಿಗಳನ್ನು ಕೆಂಪು ಅಥವಾ ಹಳದಿ ವಸ್ತ್ರಗಳಲ್ಲಿ ಸುತ್ತಿಟ್ಟು ಗ್ರಂಥ ಭಂಡಾರಗಳಲ್ಲಿ ರಕ್ಷಿಸಿಕೊಂಡು ಬಂದರು. ದಕ್ಷಿಣ ಕನ್ನಡದಲ್ಲಿ ತಾಡವೋಲೆ ಗ್ರಂಥಗಳನ್ನು ಸಂರಕ್ಷಿಸಿ ಇಡುವ ವಿಶಿಷ್ಟ ವಿಧಾನವನ್ನು ಎನ್. ಅನಂತರಂಗಾಚಾರ್ ಅವರು "....... ಕಲ್ಲಿನ ಕಪಾಟುಗಳಲ್ಲಿ ಒಂದು ಪದರ ಮೆಣಸು ಮತ್ತೊಂದು ಪದರ ಓಲೆಯ ಪುಸ್ತಕಗಳನ್ನು ಜೋಡಿಸಿ ಪುನಃ ಮೆಣಸಿನ ಕಾಳಿನಿಂದ ಅಚ್ಛಾದಿಸಿ ಅವುಗಳ ಮೇಲೆ ಹಲಗೆಗಳನ್ನು ಹೊದಿಸಿ ಅವುಗಳನ್ನು ಹುಳು-ಹಂಬಲು ಶೈತ್ಯಗಳಿಂದ ರಕ್ಷಿಸುವ ಕ್ರಮ ಇದೆಯೆಂದು ಹೇಳುತ್ತಾರೆ.

ದಕ್ಷಿಣ ಭಾರತದಲ್ಲಿ ತಾಳೆಗರಿ ಹಸ್ತಪ್ರತಿಗಳನ್ನು ಪಂಡಿತರ ಮನೆಗಳಲ್ಲಿ, ದೇವಾಲಯದ, ಖಜಾನೆಗಳಲ್ಲಿ ಧಾರ್ಮಿಕ ಮಠಗಳಲ್ಲಿ ಮತ್ತು ಅರಮನೆಗಳಲ್ಲಿ ಸಂರಕ್ಷಿಸಿಡಲಾಗುತ್ತಿತ್ತು. ವಿದ್ಯಾವಂತ ಜನರ ಮನೆಗಳಲ್ಲಿ ತಾಳೆಗರಿ ಹಸ್ತಪ್ರತಿಗಳನ್ನು ಫಂಗಸ್ ಮತ್ತು ಕ್ರಿಮಿಕೀಟಗಳಿಂದ ಸಂರಕ್ಷಿಸಲು ಅಡುಗೆ ಮನೆಯಲ್ಲಿ ಮಣ್ಣಿನ ಗೋಡೆಗಳುಳ್ಳ ಹುಲ್ಲಿನ ಮನೆಗಳು ನಿರ್ಮಾಣಗೊಳ್ಳುತ್ತಿದ್ದವು. ಅತಿಯಾದ ಮಳೆಯಿಂದಾಗಿ ಹಸ್ತಪ್ರತಿಗಳು ಫಂಗಸ್ ಮತ್ತು ಕ್ರಿಮಿಕೀಟಗಳಿಂದ ಹಾನಿಗೊಳಗಾಗುತ್ತಿದ್ದವು. ಇವುಗಳಿಂದ ತಡೆಯಲು ಹಸ್ತಪ್ರತಿಗಳನ್ನು

ಮನೆಗಳಲ್ಲಿ ಜೋತಾಡುವ ರೀತಿಯಲ್ಲಿ (ನೆಲವುಗಳ ಮೇಲೆ) ಇಡಲಾಗುತ್ತಿತ್ತು ಅಡುಗೆ ಮನೆ ಯಾವಾಗಲೂ ಬಿಸಿ ಇರುವುದರಿಂದ ಹಾಗೂ ಹೊಗೆ ಇಡೀ ಕೊಠಡಿಯನ್ನು ಆವರಿಸಿರುವುದರಿಂದಾಗಿ ಹಸ್ತಪ್ರತಿಗಳಿರುವ ಕಟ್ಟುಗಳು ಕ್ರಿಮಿಕೀಟಗಳಿಂದ ರಕ್ಷಣೆ ಪಡೆಯುವಂತಾಯಿತು. ಪ್ರತಿವರ್ಷ ಮಳೆಗಾಲ ಮುಗಿದ ಬಳಿಕ ಹಸ್ತಪ್ರತಿಗಳನ್ನು ಸ್ವಚ್ಛಗೊಳಿಸಲಾಗುತ್ತಿತ್ತು. ಮತ್ತು ಒಣಗಿಸಲಾಗುತ್ತಿತ್ತು. ಅವುಗಳ ಸ್ಥಿತಿಯನ್ನು ಪರೀಕ್ಷಿಸಲಾಗುತ್ತಿತ್ತು.[೨೦]

**೬.೫. ಸಂರಕ್ಷಣೆ ಮತ್ತು ಹೆಣ್ಣು**

ಪಾರಂಪರಿಕ ಸಂಗ್ರಹ ಹಾಗೂ ನಿರ್ವಹಣಾ ಕೆಲಸದಲ್ಲಿ ಹೆಣ್ಣಿಗೆ, ಪ್ರಧಾನ ಪಾತ್ರವಿತ್ತು. ಹೆಣ್ಣೆ ಅಲ್ಲಿ ಸಂಗ್ರಹ, ಸಂರಕ್ಷಣೆ, ನಿರ್ವಹಣೆ ಹಾಗೂ ಸಂವರ್ಧನೆಗೆ ಕಾರಣಳಾಗಿದ್ದಳು. ಸಾಂಪ್ರದಾಯಿಕ ಸಂವರ್ಧನೆ ಹಾಗೂ ಉತ್ಪಾದಿತ ಮೌಲ್ಯಗಳು ಪ್ರಕೃತಿಯ ಪರವಾಗಿ ಮತ್ತು ಹೆಂಗಸರ ಪರವಾಗಿ ಇರುವಂಥವು. ಸಾವಯವಶೀಲವಾದ ಸಂಗ್ರಹ ಸಂರಕ್ಷಣೆ ಸಂವರ್ಧನೆಯ ಸಾಂಪ್ರದಾಯಿಕ ಕ್ರಮಗಳಿಗೂ ವ್ಯವಹಾರ ಹಾಗೂ ವಸ್ತುರೂಪಿಯಾದ ವೈಜ್ಞಾನಿಕ ನಿರ್ವಹಣಾ ಶಾಸ್ತ್ರಗಳಿಗೂ ಇರುವ ವ್ಯತ್ಯಾಸಗಳು ಬಹಳ ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳಲ್ಲಿ ಹೆಣ್ಣಿಗೆ ಪ್ರಥಮಾದ್ಯತೆ. ಆಧುನಿಕವಾದ ವಸ್ತುರೂಪಿಯಾದ ಸಂರಕ್ಷಣಾ ಕ್ರಮಗಳಲ್ಲಿ ಗಂಡು ಪ್ರಧಾನವಾಗುತ್ತದೆ. ಇಂದು ಬಳಕೆಯಲ್ಲಿರುವ ಬ್ರಿಟಿಷ ಪ್ರಣೀತ ಎಲ್ಲ ಸಂಗ್ರಹ ಸಂರಕ್ಷಣೆ ಹಾಗೂ ಸಂವರ್ಧನಾ ಕ್ರಮಗಳು ವ್ಯವಹಾರ ರೂಪಿಯಾದ ಜಡಪರಿಕಲ್ಪನೆಗಳು ಸಂಗ್ರಹಿತ ವಸ್ತುಗಳಿಗೂ ಸಂಗ್ರಹ ವಿಧಾನಗಳಿಗೂ ಯಾವುದೇ ಜೈವಿಕ ಸಂಬಂಧಗಳಿಲ್ಲ. ಜೀವಜಾಲದ ಸ್ವಾಭಾವಿಕ ಗುಣಕ್ಕೂ ರಾಸಾಯನಿಕ ಮೂಲಕ ಆಧುನಿಕ ಕ್ರಮಕ್ಕೂ ಪರಸ್ಪರ ಸಾಮ್ಯವೇ ಇಲ್ಲ. ಈ ಆಧುನಿಕ ರಾಸಾಯನಿಕಗಳು ಸಂಗ್ರಹಿತ ವಸ್ತುವಿನ ಅಸ್ಥಿಪಂಜರ ರೂಪವನ್ನು ಒಂದು ತೋರಿಕೆಯ ವಸ್ತು ಸಂಗ್ರಹಾಲಯದ ವೈಭವೀಕೃತ ಅಥವಾ ಪಳಯುಳಿಕೆ ರೂಪವನ್ನಾಗಿ ಪರಿಗಣಿಸುತ್ತವೆ. ಕಾಡು ಹಾಗೂ ಅದರ ಉತ್ಪನ್ನಗಳು ಕೃಷಿ ಪರಿಕರಗಳು, ದಿನಬಳಕೆಯ ಮರ ಮಟ್ಟುಗಳಾಗಿ ಅಲಂಕಾರಿಕ ಹಾಗೂ ಪ್ರಾಚೀನ ಅವಶೇಷಗಳಾಗಿ ಮಾತ್ರ ಕಾಣುತ್ತವೆ. ಜೀವಜಾಲದ ಹಂಗಿಲ್ಲದ ಇಂಥ ಪರಿಕಲ್ಪನೆಗಳು ಜೈವಿಕ ಮೂಲದ ಸಂಗತಿಗಳನ್ನು ಹೈಬ್ರಿಡ್ ಕೋಳಿಗಳಂತೆ ನಿರ್ಭಾವುಕವಾಗಿ ಸಲಹುತ್ತವೆ.[೨೧]

ಜೀವನವು ತಾಳಿಕೆ ಬರುವಂತೆ ಉಳಿಯಲು ಅಗತ್ಯವಿರುವ ಪೋಷಣೆಗಳನ್ನು ಒದಗಿಸುವ ಮಾರ್ಗವಾಗಿ ನಮ್ಮಲ್ಲಿ ಸಂಗ್ರಹ ಹಾಗೂ ಸಂರಕ್ಷಣಾ ಕ್ರಮಗಳಿದ್ದವು. ಪ್ರಕೃತಿಯ ಸಂಪತ್ತನ್ನು ಪ್ರಕೃತಿಯೊಡನೆ ಹಂಚಿಕೊಳ್ಳುವ ಹಾಗೂ ಜೀವನದ ಮೂಲಭೂತ ಅಗತ್ಯಗಳಿಗಾಗಿ ಪ್ರಕೃತಿಯ ಸಂಪತ್ತನ್ನು ಬಳಸುವ ಹಾಗೂ ಉಳಿಸುವಲ್ಲಿ ಹೆಂಗಸರ ಪಾತ್ರ ಪ್ರಧಾನವಾದದ್ದಾಗಿತ್ತು. ಇಂದಿಗೂ ಕೌಟುಂಬಿಕ ಮಟ್ಟದಲ್ಲಿ ನಡೆಯುವ ಹೆಚ್ಚಿನ ಪೋಷಣೆ ಹಾಗೂ ಪರಿವರ್ತನೆಯ ಕ್ರಮಗಳು ಹೆಂಗಸರು ಪ್ರಧಾನವಾದ ತಾಂತ್ರಿಕ ಚಟುವಟಿಕೆಗಳೇ ಆಗಿವೆ. ವಸ್ತು ಸಂಗ್ರಹಾಲಯ/ಪುಸ್ತಕ ಭಂಡಾರದಂತಹ ಆಧುನಿಕ ಸಂರಕ್ಷಣೆ ಹಾಗೂ ಸಂಗ್ರಹ ಪರಿಕಲ್ಪನೆಗಳು ಇಂಥ ಜೈವಿಕ ನೆಲೆಗಳಲ್ಲಿ ವಿಕಾಸ ಪಡೆಯುವುದು ಇಂದು ಅಗತ್ಯವಾಗಿದೆ.[೨೨] ಜ್ಞಾನದ ಸಂರಕ್ಷಣೆ ಸಂವರ್ಧನ ಸಂಗೋಪನೆಯಲ್ಲಿ ಮಹಿಳೆಗೆ ಪ್ರಧಾನ ಸ್ಥಾನವಿದೆ. ಬರೀ ಮಕ್ಕಳ ಪಾಲನೆ

ಪೋಷಣೆ ಅಷ್ಟೇ ಅಲ್ಲದೇ ಇಡೀ ಕುಟುಂಬದ ಹಿತವನ್ನು ಕಾಪಾಡುವ ಆಹಾರ ಧಾನ್ಯಗಳ ಜೀವನೋಪಯೋಗಿ ವಸ್ತುಗಳನ್ನು ಗ್ರಂಥಗಳನ್ನು ಭಾವನಾತ್ಮಕವಾಗಿ ಮತ್ತು ಅವಿನಾಭಾವ ನೆಲೆಯಲ್ಲಿ ಸಂರಕ್ಷಣೆ ಮಾಡುತ್ತಾ ಬಂದಿದ್ದಾಳೆ. ಪ್ರಾಚೀನ ಸಂರಕ್ಷಣೆ ಅಥವಾ ಸಾಂಪ್ರದಾಯಿಕ ಜ್ಞಾನ ಸಂರಕ್ಷಣೆ ಮಾತೃಪ್ರಧಾನ ನೆಲೆಯಲ್ಲಿ ನಡೆಯುತ್ತಿರುವ ಸಂರಕ್ಷಣೆ ಪದ್ಧತಿಯಾಗಿದೆ. ಇದರ ಮುಂದುವರಿದ ಭಾಗ ಆಧುನಿಕ ಸಂರಕ್ಷಣಾ ವಿಧಾನಗಳಾಗಿವೆ.

**ಅಡಿಟಿಪ್ಪಣಿಗಳು**

೧. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಪುಟ.೮೧;೨೦೦೫

೨. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ: ಪುಟ.೪೮;೧೯೯೨

೩. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಪುಟ.೭೭;೨೦೦೫

೪. ಅದೇ, ಪುಟ.೧೬, ೧೭; ೨೦೦೫

೫. ಅದೇ, ಪುಟ.೧೧; ೨೦೦೫

೬ ಅದೇ, ಪುಟ.೧೧;೨೦೦೫

೭ ಅದೇ, ಪುಟ.೧೨;೨೦೦೫

೮. ಅದೇ, ಪುಟ.೭೯;೨೦೦೫

೯. ಕೆ. ರವೀಂದ್ರನಾಥ (ಸಂ), ಹಸ್ತಪ್ರತಿ ಅಧ್ಯಯನ ಪುಟ.೫೧;೨೦೦೭-೦೮

೧೦. ವೀರೇಶ ಬಡಿಗೇರ, ಎಸ್.ಆರ್. ಚನ್ನವೀರಪ್ಪ (ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ-೦೪: ಪುಟ.೭೬; ೨೦೦೩

೧೧. ಅದೇ, ಪುಟ.೭೭; ೨೦೦೩

೧೨. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಪುಟ.೩೯;೨೦೦೫

೧೩. ಅದೇ, ಪುಟ.೧೨; ೨೦೦೫

೧೪. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ: ಪುಟ.೨೩೭;೧೯೯೨

೧೫. ಅದೇ, ಪುಟ.೨೩೦; ೧೯೯೨

೧೬. ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ: ಪುಟ.೧೩,೧೪;೧೯೯೩

೧೭ ಅದೇ, ಪುಟ.೧೭; ೧೯೯೩

೧೮. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಹಂಬಲ: ೨೦೦೮-೨೦೦೯

೧೯. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ: ಪುಟ.೨೩೮; ೧೯೯೨

೨೦. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಪುಟ.೧೧, ೧೨; ೨೦೦೫

೨೧. ವೀರೇಶ ಬಡಿಗೇರ (ಸಂ), ಹಸ್ತಪ್ರತಿ ಅಧ್ಯಯನ: ಹಂಬಲ: ೨೦೦೮-೨೦೦೯

೨೨. ಅದೇ, ೨೦೦೮-೨೦೦೯



ಮಹಾಭಾರತದ ಕಥೆಯೊಂದು ವ್ಯಾಸನಿಂದ ಹಿಡಿದು ಪಂಪ, ರನ್ನ, ಕುಮಾರವ್ಯಾಸನವರೆಗೂ ಕಾಲದ ಅಗತ್ಯಕ್ಕೆ ತಕ್ಕಂತೆ ಮರು ರಚನೆಗೊಳ್ಳುತ್ತಾ ಬಂದಿದೆ. ವಚನಗಳನ್ನು ವಚನಕಾರರನ್ನು ಕುರಿತು ಹರಿಹರ ತನ್ನ ರಗಳೆಯಲ್ಲಿಯೂ ಚಾಮರಸ ಪ್ರಭುಲಿಂಗಲೀಲೆಯಲ್ಲಿಯೂ ಶೂನ್ಯಸಂಪಾದನಕಾರರು ಶೂನ್ಯ ಸಂಪಾದನೆಗಳಲ್ಲಿಯೂ ಬಳಸಿಕೊಂಡ ರೀತಿ ಹಾಗೂ ಅರ್ಥೈಸಿಕೊಂಡ ಬಗೆಗಳು ಬಹುಮುಖಿ ಸಂವೇದನೆಗಳ ಪುನರುತ್ಪತ್ತಿಯ ಆಶಯಗಳಾಗಿ ಗೋಚರವಾಗುತ್ತವೆ.

ವಚನ ಸಾಹಿತ್ಯ ಹಾಗೂ ವಚನ ಚಳುವಳಿಯನ್ನು ಕುರಿತು ಹೆಚ್ಚು ಹೆಚ್ಚು ಅಧ್ಯಯನಗಳು ನಡೆದಿವೆ. ಇದನ್ನು ಸಾಹಿತ್ಯಿಕ ಚಳುವಳಿಯೆಂದು ಮತ್ತು ಸಾಂಸ್ಕೃತಿಕ ಚಳುವಳಿಯೆಂದು ಗ್ರಹಿಸಿ ಅಧ್ಯಯನ ಮಾಡಲಾಗಿದೆ. ಅಲ್ಲದೇ ಒಬ್ಬೊಬ್ಬ ವಚನಕಾರರನ್ನು ಆಧರಿಸಿ ಅನೇಕ ಗ್ರಂಥಗಳು ಹುಟ್ಟಿಕೊಂಡಿವೆ. ವಚನ ಚಳುವಳಿ, ವಚನಕಾರರನ್ನು ಕುರಿತು ಅನ್ಯ ಭಾಷೆ ಅನ್ಯದೇಶಗಳ ಜೊತೆಗೆ ಹಾಗೂ ಕನ್ನಡದ ಸಂದರ್ಭದಲ್ಲಿಯೇ ತೌಲನಿಕ ಅಧ್ಯಯನಗಳು ನಡೆದಿವೆ. ಪ್ರಭುತ್ವ ಪರವಾದ ಸಾಹಿತ್ಯವನ್ನು ಬಿಟ್ಟು ಜನಸಾಮಾನ್ಯರ ಆಡು ಭಾಷೆಯಲ್ಲಿ ಯಾವುದೇ ರಾಜಾಶ್ರಯವಿಲ್ಲದ ರೀತಿಯಲ್ಲಿ ೧೨ನೆಯ ಶತಮಾನದಲ್ಲಿ ವಚನಕಾರರು ತಮ್ಮ ಅಭಿವ್ಯಕ್ತಿಯನ್ನು ಅನುಭವಗಳನ್ನು ಅನುಭವ ಮಂಟಪದ ಮೂಲಕ ವ್ಯಕ್ತಪಡಿಸಿದ್ದಾರೆ. ವಚನೋತ್ತರ ಕಾಲದಲ್ಲಿ ವಚನ ಸಾಹಿತ್ಯ ಮತ್ತು ಚಳುವಳಿಯನ್ನು ಕಾಲದ ಒತ್ತಡಕ್ಕೆ ಅನುಗುಣವಾಗಿ ಗ್ರಹಿಸುತ್ತ ರೂಪಾಂತರಗೊಂಡು ಭಿನ್ನ ಭಿನ್ನ ಪ್ರಕಾರಗಳಲ್ಲಿ ವಚನಗಳು ಹಾಗೂ ವಚನಕಾರರು ಮರುಸೃಷ್ಟಿಗೊಂಡರು. ಪುರಾಣಗಳು, ಸಂಕಲನಗಳು, ಸಂಪಾದನೆಗಳು, ಟೀಕುಗಳು, ಗಮಕಗಳಂಥ ವಿವಿಧ ಮಾದರಿಯ ರೂಪಾಂತರದಲ್ಲಿ ಪುನರುತ್ಪತ್ತಿಯ ನೆಲೆಗಳನ್ನು ಢಾಳಾಗಿ ಕಾಣಬಹುದು.

ಲಿಂಗಾಯತ, ವೀರಶೈವ, ಧರ್ಮದ ಚೌಕಟ್ಟಿನಲ್ಲಿ ಅಧ್ಯಯನಗಳು ನಡೆದಂತೆ, ವಚನಕಾರರ ಜಾತಿ, ವೃತ್ತಿಯ ನೆಲೆಯಲ್ಲಿಯೂ ಅಧ್ಯಯನಗಳಾಗಿವೆ. ೧೨ನೇ ಶತಮಾನದ ವಚನಸಾಹಿತ್ಯವನ್ನು ನಿರ್ದಿಷ್ಟ ಕಾಲದ ಚೌಕಟ್ಟಿನಲ್ಲಿ ಅಧ್ಯಯನ ಮಾಡಿದಾಗ ಸಿಗುವ ಫಲಿತಗಳು ಬೇರೆ. ಹರಿಹರ, ಚಾಮರಸ, ಭೀಮಕವಿ, ಸಿಂಗರಾಜ ಮುಂತಾದವರ ಪುರಾಣ ಕಾವ್ಯಗಳಲ್ಲಿ ವಚನ ಸಾಹಿತ್ಯ ಪಡೆದ ರೂಪಾಂತರ ಅಥವಾ ಮರುಸೃಷ್ಟಿಯಾದ ಬಗೆಯನ್ನು ಆ ಕಾಲದ ಒತ್ತಡಗಳನ್ನು ಗಮನಿಸಿದಾಗ ವಚನಸಾಹಿತ್ಯದ

ಮೇಲಿನ ಗ್ರಹಿಕೆಗಳು ಬೇರೆಯಾಗುತ್ತವೆ. ಶೂನ್ಯಸಂಪಾದನಕಾರರ ಸಂಪಾದನೆಗಳಿರಬಹುದು, ಲಿಂಗಲೀಲಾ ವಿಲಾಸ ಚಾರಿತ್ರ; ಏಕೋತ್ತರಸ್ಥಲ; ಸ್ಥಲಕಟ್ಟುಗಳಲ್ಲಿ ವಚನಗಳು ಮರುಜೋಡಿಸಿರುವ ಸಾಹಿತ್ಯವನ್ನು ಗಮನಿಸಿದಾಗ, ವಚನಸಾಹಿತ್ಯದ ಗ್ರಹಿಕೆಗಳು ಬೇರೆಯಾಗುತ್ತವೆ. ಅದೇ ರೀತಿ ಕೊಡೇಕಲ್ಲು ಸಾಹಿತ್ಯ, ಮಂಟೇಸ್ವಾಮಿ, ಗೋಣಿಬಸವ ಮುಂತಾದ 'ಬುಡಕಟ್ಟು ಕಾವ್ಯಗಳನ್ನು ಅಧ್ಯಯನ ಮಾಡಿದರೆ, ವಚನಸಾಹಿತ್ಯ ಚಳುವಳಿಯ ಸ್ವರೂಪವನ್ನು ಅದರ ತಾತ್ವಿಕತೆಯನ್ನು ಇನ್ನೂ ವ್ಯಾಪಕವಾಗಿ ಭಿನ್ನವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಶೂನ್ಯಸಂಪಾದನೆ ಹರಿಹರ, ಚಾಮರಸರ ಕಾವ್ಯಗಳಲ್ಲಿ ಕಥೆಯ ನಾಯಕನನ್ನು ಉನ್ನತೀಕರಿಸಿ ಚಿತ್ರಿಸಿದರೆ ಬುಡಕಟ್ಟು ಸಂಸ್ಕೃತಿಯ ಪ್ರತಿನಿಧಿಯನ್ನಾಗಿ ಮಂಟೇಸ್ವಾಮಿ, ಜುಂಜಪ್ಪನಂತ ಕಾವ್ಯಗಳು ಹುಟ್ಟಿಕೊಂಡು ಇಲ್ಲಿ ಕನಿಷ್ಠವೆಂದು ಭಾವಿಸುವ ಕೆಳವರ್ಗಗಳ ಸಮುದಾಯದ ವ್ಯಕ್ತಿಗಳ ರೀತಿಯಲ್ಲಿ ಚಿತ್ರಿಸಲಾಗಿದೆ. ಉದಾ:- ಮಂಟೇಸ್ವಾಮಿ ಕಲ್ಯಾಣಕ್ಕೆ ಬರುವಾಗ ಅವನ ವೇಷ ಭೂಷಣಗಳ ವರ್ಣನೆಯೂ ಕೆಳವರ್ಗದ ಅಥವಾ ಕೆಳಜಾತಿಯ ಪ್ರತಿನಿಧಿಯ ಕಾಣಿಸುವುದರ ಜೊತೆಗೆ ಮಡಿ, ಮೈಲಿಗೆಗೆ ವ್ಯತಿರಿಕ್ತವಾಗಿ ಚಿತ್ರಿಸಲಾಗಿದೆ. ಹೀಗಾಗಿ ಒಂದೇ ಸಾಹಿತ್ಯ ಪ್ರಕಾರವು ಬೇರೆ ಬೇರೆ ಕಾಲದಲ್ಲಿ ವ್ಯಕ್ತಿ-ವ್ಯಕ್ತಿಗಳ ಆಲೋಚನೆ, ಸುತ್ತಮುತ್ತಲಿನ ಪರಿಸರ, ಸಂಸ್ಕೃತಿಯ ಪ್ರಭಾವದಿಂದ ಸಾಹಿತ್ಯ ಕೃತಿಗಳು ಪುನರ್ ಉತ್ಪತ್ತಿ ನೆಲೆಯಲ್ಲಿ ಮರುರಚನೆಗೊಂಡವು.

ವಚನ ಸಾಹಿತ್ಯ ಚಳುವಳಿಯನ್ನು ವಚನೋತ್ತರ ಕಾಲದಲ್ಲಿ ಗ್ರಹಿಸಿದ ರೀತಿ. ಹರಿಹರ, ರಾಘವಾಂಕ, ಚಾಮರಸ, ಭೀಮಕವಿ, ಸಿಂಗರಾಜು ಮುಂತಾದವರು ಪೌರಾಣಿಕ ಹಿನ್ನೆಲೆಯಲ್ಲಿ ವಚನಕಾರರನ್ನು ದೈವತ್ವಕ್ಕೆ ಏರಿಸಿ ಪುರಾಣದ ನಾಯಕರನ್ನಾಗಿ ರೂಪಿಸುವುದರ ಜೊತೆಗೆ ಪವಾಡ ಸದ್ರೂಶವಾದ ರೀತಿಯಲ್ಲಿ ಗ್ರಂಥಗಳು ರಚನೆಯಾಗಿವೆ. ವಚನ ಹಾಗೂ ವಚನಕಾರರನ್ನು ವೀರಶೈವೀಕರಣ ಮಾಡುವ ಉದ್ದೇಶದಿಂದ ಶೂನ್ಯಸಂಪಾದನೆಗಳು, ಸಂಕಲನಗಳು, ಟೀಕುಗಳು ರಚನೆಯಾದವು. ವಚನ ಸಾಹಿತ್ಯ ಎಲ್ಲರಿಗಾಗಿ ಇರುವಂತದ್ದು ಎಂಬ ಭಾವನೆಯೂ ಮರೆಯಾಗಿ ಅದು ಒಂದು ಧರ್ಮವಾಗಿ ಅಲ್ಲಮ, ಬಸವಣ್ಣ, ಸಿದ್ಧರಾಮ, ಚನ್ನಬಸವಣ್ಣ ಅಕ್ಕಮಹಾದೇವಿಯಂತವರು ಮಾತ್ರ ಪ್ರಸಿದ್ಧಿಪಡೆದರು. ಅಲ್ಲವನನ್ನು ನಾಯಕನಾಗಿಸಿ ಶೂನ್ಯಸಂಪಾದನೆಗಳು ಚಾಮರಸ ಪ್ರಬುಲಿಂಗಲೀಲೆಯಂಥ ಕೃತಿಗಳು ಹುಟ್ಟಿಕೊಂಡವು. ಹರಿಹರ, ಭೀಮಕವಿಗಳು ಬಸವಣ್ಣನನ್ನು ಕಾವ್ಯದ ನಾಯಕನನ್ನಾಗಿ ಪವಾಡ ಪುರುಷನ ರೀತಿಯಲ್ಲಿ ಚಿತ್ರಿಸಿದರು.

೧೨ನೆಯ ಶತಮಾನದಲ್ಲಿ ಶೋಷಣೆಗೆ ಒಳಗಾದ ವ್ಯಕ್ತಿಗಳು ಎಲ್ಲರೂ ಸಮಾನರೆಂಬ ಭಾವನೆಯಿಂದ ವಚನಕಾರರು ವಚನವನ್ನು ಹೇಳಿದರೆ ಮುಂದೆ ಅದೇ ಸಾಹಿತ್ಯಕ್ಕೆ ಧಾರ್ಮಿಕ ತಳಹದಿಯನ್ನು ರೂಪಿಸಲಾಗಿದೆ. ೧೨ನೆಯ ಶತಮಾನದ ಶರಣರ ವಚನ ಸಾಹಿತ್ಯವನ್ನು ಧಾರ್ಮಿಕ ಚೌಕಟ್ಟನ್ನು ನೀಡುವುದಕ್ಕಾಗಿ ವೀರಶೈವ ಧರ್ಮದ ಆಚಾರ-ವಿಚಾರಗಳಾಗಿ ಇಷ್ಟಲಿಂಗ ಪೂಜೆ, ಪಂಚಾಚಾರ, ಷಟ್ಸ್ಥಲಗಳು, ದಾಸೋಹದಂತಹ ಅಂಶಗಳನ್ನು ಸೇರಿಸಿ ವಚನ ಸಾಹಿತ್ಯವನ್ನು ಧಾರ್ಮಿಕತೆಯ ಹಿನ್ನೆಲೆಯಲ್ಲಿ ಪುನರ್ ಉತ್ಪತ್ತಿ ಮಾಡಲಾಗಿದೆ. ಇದರಿಂದ ವಚನ ಸಾಹಿತ್ಯ ಚಳುವಳಿಯ ಸತ್ವವನ್ನು ಮುಂದುವರಿಸದೆ, ಭಿನ್ನ ದಾರಿಯಲ್ಲಿ ಸಾಗಿದವು ಎಂಬ ವಾದವು ರೂಪುಗೊಂಡಿದೆ. ಇದರ

ಪರಿಣಾಮವಾಗಿ ವಚನ ಚಳುವಳಿಯನ್ನು ಮತ್ತೆ ಮುಂದುವರಿಸಲೆಂಬಂತೆ ಕೊಡೇಕಲ್ಲು ಬಸವಣ್ಣ, ಮಂಟೇಸ್ವಾಮಿ ಮುಂತಾದವರು ಪ್ರತ್ಯೇಕವಾಗಿ ಪ್ರಯತ್ನಿಸಿದರು. ಆದರೆ ಕಾಲದ ಸ್ಥಿತ್ಯಂತರ, ಬದಲಾದ ಸಾಂಸ್ಕೃತಿಕ ಪರಿಸರದಿಂದ ಈ ಕವಲುಗಳು ಬೇರೆಯದೇ ಆದ ಪಂಥಗಳಾಗಿ ಹುಟ್ಟಿ ಬೆಳೆದವು. ಹೀಗಿರುವಾಗ ವಚನ ಸಾಹಿತ್ಯವೂ ವಚನೋತ್ತರ ಕಾಲದಲ್ಲಿಯೂ ಅದೇ ಸತ್ವದೊಂದಿಗೆ ಮುಂದುವರೆಯಲು ಒಂದು ಕಡೆ ಸಾಧ್ಯವಾದರೆ ಇನ್ನೊಂದು ಕಡೆ ಸಾಧ್ಯವಾಗಿಲ್ಲ. ಬೇರೊಂದು ವಿಧಾನದಲ್ಲಿ ಕಾಲದ ಅಗತ್ಯ ಮತ್ತು ಒತ್ತಡಗಳಿಗನುಗುಣವಾಗಿ ಬೆಳೆಯಲು ಸಾಧ್ಯವಾಗಿದೆ. ಹೀಗಾಗಿ ವಚನ ಸಾಹಿತ್ಯವನ್ನು ಹರಿಹರ, ಚಾಮರಸ, ಶಿವಗಣಪ್ರಸಾದಿ ಮಹಾದೇವಯ್ಯ ಮುಂತಾದವರು ತಮ್ಮ ಕಾಲಕ್ಕೆ ಅನುಗುಣವಾಗಿ ಗ್ರಹಿಸಲು ಮತ್ತು ಅದರ ಹಿನ್ನೆಲೆಯಲ್ಲಿ ರೂಪಿಸಿಕೊಳ್ಳಲು ಪ್ರಯತ್ನಿಸಿದರು. ಯಾವುದೇ ಮಹತ್ವದ ಚಳುವಳಿ ಇರಲಿ ಅದು ನಿರ್ದಿಷ್ಟ ಕಾಲದಲ್ಲಿ ಕಿಯಾಶೀಲವಾಗಿದ್ದು ವಿರಮಿಸುತ್ತದೆ. ಆದರೆ ಅದರ ಪರಿಣಾಮಗಳು ಮಾತ್ರ ಕ್ರಿಯಾಶೀಲವಾಗಿ ಮುಂದಿನ ದಿನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಹೀಗೆ ವಚನ ಸಾಹಿತ್ಯ ನಂತರ ಅನೇಕ ಪಂಥಗಳಲ್ಲಿ ಕಾಣಿಸಿದೆ.

ವಚನ ಸಾಹಿತ್ಯದ ನಂತರದ ಕಾಲದಲ್ಲಿ ಬಸವಣ್ಣನನ್ನು ಕೇಂದ್ರೀಕರಿಸಿ ಅಲ್ಲಮನನ್ನು ಕೇಂದ್ರೀಕರಿಸಿ ಅನೇಕ ಗ್ರಂಥಗಳು ರಚನೆಯಾದವು. ಶಿವಗಣಪ್ರಸಾದಿ ಮಹಾದೇವಯ್ಯ ಶೂನ್ಯಸಂಪಾದನೆ, ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅಲ್ಲಮನೇ ನಾಯಕ. ಮುಂದಿನ ಶೂನ್ಯಸಂಪಾದನೆಗಳಲ್ಲಿ ಅಲ್ಲಮನ ಜೊತೆ ಜೊತೆಗೆ ಬಸವಣ್ಣನಿಗೆ ಆಧ್ಯತೆ ಸಿಕ್ಕಿದೆ. ಭಿಮಕದವಿ, ಸಿಂಗಿರಾಜು ಮುಂತಾದವರು ಬಸವಣ್ಣನ ಮೇಲೆ ಪುರಾಣ ರಚಿಸಿದ್ದಾರೆ. ಬಸವಣ್ಣನನ್ನು ಕೇಂದ್ರೀರಿಸಿ ಸಾಹಿತ್ಯ ಕೃತಿಗಳ ಜೊತೆಗೆ ಮಠಗಳು ಬೆಳೆಯುತ್ತ ಬಂದಿದ್ದರಿಂದ ಬಸವಣ್ಣನನ್ನು ಸಾಂಸ್ಥಿಕಗೊಳಿಸಲಾಯಿತು.

ವಚನ ಸಾಹಿತ್ಯದ ಜೊತೆಗೆ, ವಿಜಯನಗರದ ರಾಜ್ಯದ ಅರಸ ಪ್ರೌಢದೇವರಾಯನ ಕಾಲದಲ್ಲಿ ಹಂಪೆಯ ಪರಿಸರದಲ್ಲಿ ನಡೆದ ವೀರಶೈವ ಧರ್ಮದ ಸಂಘಟನೆ, ವಚನ ಸಂಕಲನ, ಸಂಪಾದನೆ ಕೆಲಸಗಳು ರಚನೆಯಾದ ಪುರಾಣ ಕಾವ್ಯಗಳು, ಕೊಡೇಕಲ್ಲು ಸಾಹಿತ್ಯ ಮತ್ತು ಬುಡಕಟ್ಟು ಕಾವ್ಯಗಳು ಅಧ್ಯಯನ ಮಾಡುವುದರಿಂದ ಮಾತ್ರ ಭಿನ್ನವಾದ ಫಲಿತಗಳನ್ನು ಪಡೆಯಲು ಸಾಧ್ಯವಾಗುತ್ತದೆ. ವಚನ ಸಾಹಿತ್ಯ, ಕೊಡೇಕಲ್ಲು ಸಾಹಿತ್ಯ ಈ ಎಲ್ಲಾ ಸಾಹಿತ್ಯಧಾರೆಗಳು ಪ್ರತ್ಯೇಕವಾಗಿ ಬೆಳೆದಿಲ್ಲ. ವಚನ ಸಾಹಿತ್ಯ ಮತ್ತು ಚಳುವಳಿಯ ಫಲವಾಗಿ ನಂತರ ಹುಟ್ಟಿದವುಗಳಾಗಿವೆ.[೧]

ತತ್ವಪದಕಾರರ ಕಾಲದಲ್ಲಿ ಸಾಹಿತ್ಯ ರಚನೆ ಎಂಬುದು ಮೌಖಿಕವಾಗಿತ್ತು. ತತ್ವಪದಗಳ ಭಾಷೆ ಆಡುಮಾತಿನ ನುಡಿಯಾಗಿದೆ. ಅದು ಹಲವು ಭಾಷೆಗಳ ಸಮ್ಮಿಶ್ರಣದಿಂದ ರೂಪುಗೊಂಡದ್ದು, ಮೌಖಿಕವೇ ಹೆಚ್ಚು ಚಾಲ್ತಿಯಲ್ಲಿತ್ತು. ಸಾಹಿತ್ಯ ರಚನೆಗೆ ಬೇಕಾದ ಭಾಷೆಯನ್ನು ಪ್ರತ್ಯೇಕವಾಗಿ ಪುನರ್‌ರೂಪಿಸಿಕೊಳ್ಳುವ ವಾತಾವರಣ ಈ ಕಾಲಾವಧಿಯಲ್ಲಿ ಇರಲಿಲ್ಲ. ಸಮುದಾಯಗಳ ಭಾಗವಾಗಿದ್ದ ತತ್ವಪದಕಾರರು ಸಮುದಾಯದ ಆಡುನುಡಿಯನ್ನೇ ಬಳಸಿಕೊಂಡು ಹಾಡಿದರು. ಹಾಗಾಗಿ ಈ ಕಾಲದಲ್ಲಿ ಲಿಖಿತ ಸಾಹಿತ್ಯಕ್ಕಿಂತ ಮೌಖಿಕತೆಗೆ ಹೆಚ್ಚು ಪ್ರಧಾನತ್ಯೆ ದೊರೆಯಿತು.

ಸ್ವಸುಖದ ಹಾರೈಕೆಗಳಾದ ಭಕ್ತಿ, ಸಮಯನಿಷ್ಠೆ, ಸಂಪ್ರೀತಿ, ಜ್ಞಾನರ್ಜಾನೆ, ಜ್ಞಾನರಕ್ಷಣೆ, ಶುದ್ಧಿಯಾರ್ಜನೆ, ಅನಿಷ್ಠನಿವಾರಣೆ, ಕರ್ಮೋಪಶಮನ, ಸಾಧನೆ, ದಾನ, ಪುಣ್ಯಸಂಪಾದನೆ ಪರಸುಖದ ಹಾರೈಕೆಗಳಾದ ಮನೋಭಿಷ್ಟ, ಕಾರ್ಯಸಿದ್ಧಿ, ಆಯುರಾರೋಗ್ಯ ಭಾಗ್ಯ, ಪುತ್ರ ಸಂತಾನ, ವಂಶಾಭಿವೃದ್ಧಿ, ಸಕಲೈಶ್ವರ್ಯ ಅಲ್ಲದೇ ಮೋಕ್ಷ ಸಂಪಾದನೆ, ರೋಗರುಜಿನ ನಿವಾರಣೆ, ಮಳೆಗಾಗಿ ಹೀಗೆ ಹತ್ತು ಹಲವು ರೀತಿಯ ಆಶಯ ನೆಲೆಯಲ್ಲಿ ಕನ್ನಡ ಹಸ್ತಪ್ರತಿಗಳು ಸಂರಕ್ಷಣೆಗೊಳ್ಳುತ್ತಾ ಪುನರುತ್ಪತ್ತಿಗೊಳ್ಳುತ್ತಾ ಬಂದಿವೆ.

ಹಸ್ತಪ್ರತಿ ಪುಷ್ಪಿಕೆಗಳಲ್ಲಿ ಕಾಣುವ ಅವಿಭಕ್ತ ಪ್ರಜ್ಞೆ ಹಸ್ತಪ್ರತಿಗಳನ್ನು ಬದುಕಲು ಬಳಸಲು ಮತ್ತು ಆಚರಿಸಲು ಇರುವ ಅವಕಾಶಗಳೆಂದು ಪರಿಗಣಿಸಿದ್ದು ಕಾಣುತ್ತದೆ. ಅಂದರೆ ಕ್ರಿಯೆ-ಅರಿವು-ಆಚರಣೆ ಎಂದೂ ಕೂಡ ಇದನ್ನು ಭಾವಿಸಿಕೊಳ್ಳಬಹುದು. ಜ್ಞಾನವನ್ನು Monopolize ಮಾಡುವ ಸ್ವಾರ್ಥಪರ ಹಿತಾಸಕ್ತಿಗಳಿಗಿಂತ ಭಿನ್ನವಾಗಿ ಅದನ್ನು ಸಮೂಹ ಪ್ರಜ್ಞೆಯ ಭಾಗವನ್ನಾಗಿಸುವ ಜನಮುಖಿ ನೆಲೆಗಳನ್ನು ಇನ್ನುಳಿದವರು ಬೇರೆ ಬೇರೆ ನೆಲೆಗಳಲ್ಲಿ ಪುನರ ಸೃಷ್ಟಿಮಾಡುತ್ತಾ ಬೆಳಸಿಕೊಂಡು ಬಂದರು.[೨]

ಪ್ರಾಚೀನ ಗ್ರಂಥಗಳನ್ನು ಆಧುನಿಕ ಸಂದರ್ಭದಲ್ಲಿ ರಸನಿಷ್ಠ ರೂಪನಿಷ್ಠ ವಿಮರ್ಶೆಗೆ ಒಳಪಡಿಸುವುದರ ಹಿಂದೆ ಭಾವನಾತ್ಮಕ, ಧಾರ್ಮಿಕ, ಪ್ರಾದೇಶಿಕ, ಸಾಮಾಜಿಕದಂತಹ ಹಲವು ಉದ್ದೇಶಗಳು ಇದ್ದದ್ದು ಸ್ಪಷ್ಟವಾಗುತ್ತದೆ. ಇಂಥ ಅಕ್ಷರ ನಿರ್ಮಿತ ಪಠ್ಯಗಳು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರತೀಕಗಳಾದವು. ಚರಿತ್ರೆಯನ್ನು ರೂಪಿಸುವ ಸತ್ಯಗಳಾದವು. 'ಪಠ್ಯಗಳು ಹಳೆಯದಾದಷ್ಟು ಅವು ಮೂಲಪಠ್ಯವಾಗುವ, ಹೊಸದಾದಷ್ಟು ಉಪೇಕ್ಷೆಗೆ ಒಳಗಾಗುವ ಈ ಪ್ರಕ್ರಿಯೆ ಪಠ್ಯಗಳ ಅಂತರ್ ಚಲನೆಗಳನ್ನು ಮೊಟಕುಮಾಡಿತು. ಬರವಣಿಗೆಯೇ ಆಧುನಿಕ ಬದುಕಿನ ಲಕ್ಷಣವಾಗಿ ಇದು ಸಾಹಿತ್ಯ ಪರಂಪರೆಯನ್ನು ಆಧುನಿಕ ಪೂರ್ವ ಮತ್ತು ಆಧುನಿಕೋತ್ತರ ಎಂದು ವಿಭಾಗಿಕರಿಸುತ್ತದೆ. ಹಾಗೆ ನೋಡಿದರೆ ಪ್ರಾಚೀನ ಮತ್ತು ಆಧುನಿಕ ಎನ್ನುವ ಕಾಲಬದ್ಧ ವಿಂಗಡನೆಯೇ ಯಜಮಾನ ಮತ್ತು ಅಧೀನ ಎನ್ನುವ ಅರ್ಥಗಳನ್ನು ಹೊಂದಿದೆ. ಆಧುನಿಕ ಪೂರ್ವ ಎಂದರೆ ಇಂಗ್ಲೀಷ್ ಭಾಷೆ ಸಾಹಿತ್ಯದೊಡನೆ ಸಂಪರ್ಕ ಪಡೆಯದ, ಮುದ್ರಣ ರೂಪದಲ್ಲಿರುವ ಸಾಹಿತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಮತ್ತು ಅದರಿಂದ ಪ್ರೇರಣೆ ಪಡೆದ ಸಾಹಿತ್ಯವೆಂದು ಭಾವಿಸಲಾಗಿದೆ'.[೩]

ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ ಎನ್ನುವ ಮಹಾಭಾರತದಲ್ಲಿನ ವಿವರವು ಪ್ರತಿಷ್ಠಿತ ವರ್ಗಗಳ ಮನೋಭಾವನೆ ಕೆಳಸಮುದಾಯಗಳು ಒಂದು ರೀತಿಯ ಭ್ರಮಾತ್ಮಕ ನೆಲೆಯಲ್ಲಿ ಜೀವನ ನೆಡೆಸುವಂತಾಗಿತ್ತು. ಜ್ಞಾನವು ಏಕವ್ಯಕ್ತಿ ನೆಲೆ ಮತ್ತು ಒಂದು ನಿರ್ದಿಷ್ಟ ಸಮುದಾಯದ ಸ್ವತ್ತಾಗಿತ್ತು. ಯಾಕೆಂದರೆ ಸ್ವರ್ಗ-ನರಕ, ಪಾಪ-ಪುಣ್ಯದಂತಹ ಮಾನದಂಡವನ್ನು ಅಳವಡಿಸಿ ವೈದಿಕೇತರ ಸಮುದಾಯಗಳಿಗೆ ವೇದಗಳ ಓದುವುದಕ್ಕೆ ತಿಳಿಯುವುದಕ್ಕೆ ಅವಕಾಶವಿಲ್ಲವೆಂಬ ವಿಚಾರದಿಂದ ಅವರು ಸಂಸ್ಕೃತಿಯನ್ನು ಕಟ್ಟಿಕೊಳ್ಳಲು ಅವರಿಗೆ ಸಂಸ್ಕೃತಿ ಇಲ್ಲವೆಂಬ ಭ್ರಮಾತ್ಮಕ ಕಲ್ಪನೆಗೆ ಕನ್ನಡ ಹಸ್ತಪ್ರತಿ ಗ್ರಂಥಗಳು ವ್ಯಕ್ತಿನೆಲೆಯಿಂದ ಎಲ್ಲಾ ಸಮುದಾಯದ ಪಾಲ್ಗೊಳ್ಳುವಿಕೆಯಿಂದ ಗ್ರಂಥರಚನೆಯಲ್ಲಿ ಕೃತಿಕಾರನಿಗಿರುವಷ್ಟೇ ಪ್ರಾಧ್ಯಾನತೆ ಲಿಪಿಕಾರನಿಗೂ ಪ್ರತಿಕಾರನಿಗೆ ನೀಡುವುದರಿಂದ ಲಿಪಿಕಾರರ ಸೃಜನಾತ್ಮಕತೆಯಿಂದ ಅದೇ

ಕೃತಿಗಳನ್ನು ಪ್ರತಿಗೊಳ್ಳುವಾಗ ಹೊಸ ರೀತಿಯಿಂದ ಲಿಪಿಕಾರನ ಜ್ಞಾನದಿಂದ ಪುನರ್ ಉತ್ಪಾದನ ನೆಲೆಯಿಂದ ರೂಪಗೊಂಡವು. ಕೆಲವೊಂದು ಉದಾಹರಣೆಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ಜ್ಞಾನಾರ್ಜನೆ:** ಬಾಗಣವಾಡಿಯ ರಾಮಣ್ಣಗಳ ಮಗನು ಬೊಮ್ಮರಸನು ಶ್ರೀ ಮಲ್ಲಷೇಣಾಚಾರ್ಯರಿಗೆ ಮನ (ನೋ) ವಚನ ಕಾಯ ಶುದ್ಧಿಯಿಂ ನಮೋಸ್ತು ಮಾಡಿ ತಾನು ಓದುವುದಕ್ಕೆ ಈ ಸಜ್ಜನ ಚಿತ್ತವಲಭ ಗ್ರಂಥಾರ್ಥವನ್ನು ಪ್ರತಿಸಮಾನವಾಗಿ ಬರೆದನು.[೪]

ಈ ಪುರಾಣದಾರು ಬರದನಂದರೆ ಕಸಬಾ ಹಿರೇಹಾಳ ಕನಕಗಿರಿ ವಸ್ತ್ರದ ವೀರಭದ್ರಯ್ಯನ ವಡಲಾಬ್ಧಿ ಚಂದ್ರನಾದಂಥಾ ವಿರುಪಾಕ್ಷಯ್ಯನು ಬರೆದು ಇದ್ದನು. ಈ ಪುರಾಣ ದಾರು ಬರಿಸ್ಯಾರಂದರ ಮೌಜೆ ಅರಹುಣಿಸಿ ಕೆಂಚನಗೌಡನ ಗರ್ಭವುತ್ಪನ್ನತ್ಯನಾದ ಲಿಂಗನಗೌಡನು ಈ ಶ್ರುಂಗಿರಾಜಪುರಾಣ ತನಗೆ ಓದಬೇಕೆಂಬು ಪ್ರೀತಿಯಿಂದ ಬರೆಸಿ ಇದ್ದನು.[೫]

**ಜ್ಞಾನರಕ್ಷಣೆ:** ಗಂಡನೆ ಸ್ಥಳದ ಶ್ಯಾನುಭೋಗ ಮಟ್ಟೆಯನವರ ದ್ವಿತೀಯ ಕುಮಾರ ಬಾನಯ್ಯನು ತನ್ನ ಸಂಗ್ರಹ ನಿಮಿತ್ತಕೋಸ್ಕರ ಸದಾ ದೇವಪುರ ಲಕ್ಷ್ಮೀಕಾಂತ ಸ್ವಾಮಿಯವರ ದಿವ್ಯ ಶ್ರೀ ಪಾದಪದ್ಮಂಗಳನು ಜಾಗ್ರತ್ಸ್ವಪ್ನ ಸಷ್ಪಪ್ತಿಯಲ್ಲಿಯೂ ಸ್ಮರಣೆ ಮಾಡಬೇಕು ಎಂದು ಜೈಮಿನಿ ಭಾರತದ ಪುಸ್ತಕ ಬರೆವುದಕ್ಕೆ ನಿರ್ವಿಘ್ನ ಮಸ್ತು![೬] ಯಿೂ ಪುಸ್ತಕವನ್ನು ಜೋಗನಹಳ್ಳಿ ವಿರಕ್ತದೇವರು ತಮ್ಮ ಮನೆಗೆ ಪುಸ್ತಕವಾಗಿರಲೆಂದು ಕಾರ್ಯದ ಮಹಂತಸ್ವಾಮಿಗಳ ಬಳಿಯಲ್ಲಿದ್ದ ಪ್ರತಿಯ ತಂದು ಪ್ರತಿಯಿದ್ದ ಮೇರೆಗೆ ಬರೆದಿರಿಸಿದೆನು "ಇತಿ ಶ್ರೀ" (ಪಂಚ ಬ್ರಹ್ಮೋದಯ ಭಾಷ್ಯ; ಕ.ಹ.ವ.ಸೂ.ಸಂ.೨ ಕ್ರ.ಸಂ. ೮೧೭)[೭]

[ಉದ್ಧೃತ; ಹಿರೇಮಠ ಬಿ.ಕೆ; ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ವೀರಶೈವ ಅಧ್ಯಯನ ವೇದಿಕೆ ಕಸಬಾ ಜಂಬಗಿ ೧೯೯೨, ಪುಟ.೧೪೧, ೧೪೨)

ಕೃತಿಯೊಂದರ ಹುಟ್ಟು ಅನೇಕ ಅನುಭವಗಳ ಪ್ರೇರಣೆಗಳ ಲೋಕಗ್ರಹಿಕೆಗಳ ಸಮ್ಮಿಳನವಾಗಿರುತ್ತದೆ. ಈ ಅನುಭವಗಳ ಆಗಾದ ವಿಸ್ತಾರವೂ ಲೇಖಕ, ಓದುಗ, ಕೇಳುಗ ಇವರಲ್ಲಿ ಪುನರ್ ಸೃಷ್ಟಿಗೆ ಕಾರಣವಾಗುತ್ತದೆ. 'ಪೊಸತಾಗಿ ರಚಿಸಿದೆ' ಎನ್ನುವ ಮಾತು ಕನ್ನಡ ಕಾವ್ಯಪರಂಪರೆಯ ಕವಿಗಳಲ್ಲಿ ಸಾಮಾನ್ಯ. ಕವಿ ಮೂಲಕ್ಕೆ ನಿಷ್ಠನಾದರೂ ಆತನ ಸೃಜನಕ್ರಿಯೆ ಸಮಾಜದಿಂದ ಪಡೆದದ್ದನ್ನು ಒಳ ಆಗತ್ಯದಲ್ಲಿ ತನ್ನ ಮನೋಸ್ಥೈರ್ಯದ ನೆಲೆಯಲ್ಲಿ ಹೊಸದಾಗಿ ನಿರ್ಮಿಸಿಕೊಳ್ಳುತ್ತಾನೆ.

ಧಾರ್ಮಿಕ ಬದ್ಧತೆಯ ಮಧ್ಯೆಯೂ, ಬರವಣಿಗೆಯಲ್ಲಿ ವೈವಿದ್ಯತೆಯನ್ನುಳಿಸಿಕೊಂಡು ಅದನ್ನೇ ಒಂದು ಸೃಜನಶೀಲ ಕಲೆಯನ್ನಾಗಿ ಬೆಳಸಿಕೊಂಡು ಬಂದಿದ್ದು ವಿಶೇಷ. ಅಂದರೆ ಶಾಸ್ತ್ರದಾಸ್ಯ ಸಂಸ್ಕೃತಿಯ ಮಾನಸಿಕ ಗುಲಾಮಗಿರಿಯಿಂದ ಹೊರಬರಲು ಪ್ರಯತ್ನಿಸಿದ್ದು ಇಲ್ಲಿ ಪ್ರಧಾನ ವಿಷಯ. ಒಂದು ವೇಳೆ ಬರಪಗಾರಿಗೆ ಯಥಾವತ್ ಲಿಪಿಯೇ ಮುಖ್ಯವಾಗಿದ್ದರೆ ಬರವಣಿಗೆಯಲ್ಲಿ ಇಷ್ಟೊಂದು ವಿಭಿನ್ನ ಸಾಧ್ಯತೆಗಳು ಗೋಚರಿಸುತ್ತಿರಲಿಲ್ಲ. ಇಲ್ಲಿ ಬರಪಕಾರನ ಸ್ವತಂತ್ರ ಮನೋಭೂಮಿಕೆಯೊಂದಿಗೆ ಭಾಷೆ ಮತ್ತು ಲಿಪಿ ಪರಿಣತಿ, ಓರಣದ ಒಲವು ಸೌಂದರ್ಯ ಪ್ರಜ್ಞೆಗಳಂತಹ ಸೃಜನಾತ್ಮಕ ನೆಲೆಗಳು ನಮಗೆ ದಕ್ಕುತ್ತವೆ.

ಒಂದರ್ಥದಲ್ಲಿ ಹಸ್ತಪ್ರತಿಗಳ ಅಧ್ಯಯನವೆಂದರೆ ಪ್ರಾಚೀನ ಲಿಪಿಕಾರರ ಮತ್ತು ಲಿಪಿಗಳ ಸಾಂಸ್ಕೃತಿಕ ಅಧ್ಯಯನವೇ ಆಗಿದೆ.[೮]

ಹಸ್ತಪ್ರತಿ ಗ್ರಂಥಗಳ ಕಥಾವಸ್ತುಗಳನ್ನು ಗಮನಿಸಿದಾಗ ಆಯಾ ಧರ್ಮದವರು ತಮ್ಮ ಧರ್ಮದ ಪರಮದೇವತೆಗಳ ಲೀಲೆ, ಮಹಿಮೆ, ಆಚಾರ-ವಿಚಾರ ಚರಿತ್ರೆಗಳನ್ನು ಗ್ರಂಥಗಳ ಪ್ರತಿಮಾಡುವಲ್ಲಿ ಆಳವಡಿಸಿಕೊಂಡರು. ಆಯಾ ಧರ್ಮದ ಉತ್ಕರ್ಷೆಗಾಗಿ, ಪ್ರತಿಷ್ಠಾಪನೆಗಾಗಿ ನಿಷ್ಠೆಯಿಂದ ತನ್ಮೂಲಕ ಭಕ್ತಿ, ಸಮಯನಿಷ್ಠೆ, ಧರ್ಮಾಭಿಮಾನಗಳನ್ನು ತೋರಿದ ಭಕ್ತರುಗಳ ಅಪೂರ್ವ ಜೀವನದ ಕಥಾವಸ್ತುವನ್ನೊಳಗೊಂಡವುಗಳು ಪ್ರತಿಮಾಡಲ್ಪಟ್ಟಿರುವುದು ತಿಳಿಯುತ್ತದೆ.

ಮನೋಭಿಷ್ಟ ಹಾಗೂ ಕಾರ್ಯಸಿದ್ಧಿಯ ಉದ್ದೇಶಕ್ಕಾಗಿ ಕರ್ನಾಟಕ ಕಾದಂಬರಿ, ಪಂಚತಂತ್ರದ ಹಸ್ತಪ್ರತಿಗಳನ್ನು, ಆಯುರಾರೋಗ್ಯ ಭಾಗ್ಯಕ್ಕಾಗಿ ಶೃಂಗಾರ ರಸಪ್ರಧಾನವಾದ 'ಲೀಲಾವತಿ' ಹಾಗೂ ಸೂಪಶಾಸ್ತ್ರದ ಹಸ್ತಪ್ರತಿಗಳನ್ನು, ಸಕಲೈಶ್ವರ್ಯಕ್ಕಾಗಿ ಅಮರಕೋಶ, ಶಬ್ದಮಣಿ ದರ್ಪಣ, ಸಲಿಕೆ ಗಣಿತ, ಕಾಲಜ್ಞಾನ ಮುಂತಾದ ಹಸ್ತಪ್ರತಿಗಳನ್ನು ಪೋಷಿಸಿದುದು ಮಾತ್ರ ಪರಮ ಸೋಜಿಗವನ್ನುಂಟು ಮಾಡುತ್ತದೆ.

ಧಾರ್ಮಿಕವಾಗಿ ಪುರಾಣ, ಚರಿತ್ರೆ, ಮಹಿಮೆ, ಲೀಲೆ, ಸ್ತೋತ್ರಗಳಂತಹ ವಿಚಾರಗಳು ಹಸ್ತಪ್ರತಿ ಗ್ರಂಥಗಳ ಲೌಕಿಕ ಜೀವನದ ಸಮೃದ್ಧಿಗೆ ಕಾರಣವಾಗಿ ಆ ನಂಬಿಕೆ ಕಾಲಾಂತರದಲ್ಲಿ ಯಾವುದಾದರೂ ಒಂದು ಹಸ್ತಪ್ರತಿಯ ಗ್ರಂಥವನ್ನು ರಚಿಸಿ ಪೋಷಿಸಿದರೆ ಸಾಕು. ಲೌಕಿಕ ಸಂಪದ ಪ್ರಾಪ್ತವಾಗುತ್ತದೆಂಬ ವಿಶ್ವಾಸದಿಂದ ಇನ್ನಿತರೆ ಲೋಕೋಪಕಾರಕ ಲೌಕಿಕ ಗ್ರಂಥಗಳು ಹುಟ್ಟಿಕೊಂಡವು. ಪ್ರಧಾನವಾಗಿ ಧಾರ್ಮಿಕ ಕಥಾವಸ್ತುಗಳನ್ನೊಳಗೊಂಡ ಶಾಸ್ತ್ರಗಳಲ್ಲದೆ ಧಾರ್ಮಿಕ ಕಥಾವಸ್ತುಗಳನ್ನೊಳಗೊಳ್ಳದ ಶಾಸ್ತ್ರ ಗ್ರಂಥಗಳು ಕಾಲಾಂತರದಲ್ಲಿ ಪೋಷಕರಿಲ್ಲದೇ ಅಳಿದು ಹೋಗಬಾರದೆಂಬ ಉದ್ದೇಶದಿಂದ ಧಾರ್ಮಿಕ ಮತ್ತು ಲೌಕಿಕ ಗ್ರಂಥಗಳು ರಕ್ಷಣೆ ಹಾಗೂ ಪುನರ್ ಉತ್ಪಾದನೆ ಮೂಲಕ ಸಂರಕ್ಷಣೆಗೊಂಡಿರಬೇಕು. ಆದಿಕವಿ ಪಂಪ ಒಂದು ಧಾರ್ಮಿಕ ಇನ್ನೊಂದು ಲೌಕಿಕ (ಕಾವ್ಯ) ಕೃತಿಗಳನ್ನು ರಚಿಸಿ ಮುಂದಿನ ಕವಿಗಳಿಗೆ ದಾರಿದೀಪನಾದನು. ಮುಂದೇ ಬಂದ ಕವಿಗಳಾದ ಪೊನ್ನ, ರನ್ನ, ಜನ್ನರಂತಹ ಕವಿಗಳು ಇದನ್ನು ಪಾಲಿಸಿಕೊಂಡು ಬಂದರು. ಆ ಮೂಲಕ ಮಹಾಭಾರತ ಕಥನವನ್ನು ಭಿನ್ನ ರೀತಿಯಲ್ಲಿ ಸಂಗ್ರಹಿಸಿ ಪುನರ್ ಸಂದರ್ಭೀಕರಣ ಗೊಳಿಸಿದರು.

ವಿಶೇಷವಾಗಿ ಕುಮಾರವ್ಯಾಸನ ದರ್ಶನಪ್ರಜ್ಞೆ, ಪಾಪ, ಪುಣ್ಯ ಸುಖ ದುಃಖ ಆತ್ಮ ಪರಮಾತ್ಮಗಳ ಕುರಿತ ಚರ್ಚೆಗಳಿಂದಾಗಿ ಕುಮಾರವ್ಯಾಸ ಮಹಾಭಾರತವು ಲೌಕಿಕತೆಯಿಂದ ದೈವೀಕತೆಯತ್ತ ತಿರುಗುತ್ತದೆ. ಹಾಗಾಗಿಯೋ ಇದು ಹೆಚ್ಚು ಜನಪ್ರಿಯತೆಯನ್ನು ಪಡೆಯಿತು. ಕುಮಾರವ್ಯಾಸ ಭಾರತದ ವಿರಾಟ ಪರ್ವವಂತೂ ಮಳೆ ಬೆಳೆಯಂತಹ ಕೃಷಿಪ್ರಧಾನ ಸಂಸ್ಕೃತಿಯ ಸಂಕಥನವಾಗೇ ಬೆಳೆದು ಬಂದಿತು. ಮಳೆ ಬರದಿದ್ದಾಗ, ಬರ ಬಿದ್ದಾಗ ಈ ಪಠ್ಯವನ್ನು ಪಠಣಮಾಡುವ ಮಾಡಿಸುವ ಮೂಲಕ ಜನ ತಮ್ಮ ಸಮಸ್ಯೆಗೆ ಪರಿಹಾರವನ್ನು ಕಾಣುತ್ತಿದ್ದರು.[೯]

ಕೇಳಿಸಿಕೊಳ್ಳುವ ಮತ್ತು ವಾಚಿಸುವ ಎರಡು ಕ್ರಮಗಳನ್ನು ಕುಮಾರವ್ಯಾಸ ಕಟ್ಟಿಕೊಡುತ್ತಾನೆ. ಇದು ಪಠ್ಯವೊಂದರ ದ್ವಿಗುಣನೀತಿ. ಲಿಖಿತ ಮತ್ತು ಮೌಖಿಕ ನೆಲೆಯಲ್ಲಿ ಬಳಕೆ ಲಿಖಿತ ಪಠ್ಯ ಮೌಖಿಕವಾಗಿ ರೂಪಗೊಂಡದ್ದು. ಉದಾ: ವೈಶಂಪಾಯನ ಮುನಿಯು ಜನಮೇಜಯನಿಗೆ ಭಾರತವನ್ನು ಹೇಳುತ್ತಿರುವುದು ಕೂಡ ಕರ್ಮಕಳೆದುಕೊಳ್ಳುತ್ತಿರುವ ಸಲುವಾಗಿ, ಶಾಪಮುಕ್ತವಾಗುವ ಹಂಬಲದಿಂದ. ಪ್ರಾಚೀನ ಹಸ್ತಪ್ರತಿಗಳು ಪವಿತ್ರತೆಯ ನೆಲೆಯಲ್ಲಿ ಲಿಖಿತ ಮತ್ತು ಮೌಖಿಕವಾಗಿ ಹೀಗೆ ಸಂರಕ್ಷಣೆಗೆ ಒಳಪಟ್ಟಿದ್ದವು. ಭವದ ಕಷ್ಟ ಕಾರ್ಪಣ್ಯಗಳನ್ನು ಕಳೆದುಕೊಳ್ಳುವ, ಫಲಾಪೇಕ್ಷೆಗಳನ್ನು ಸಿದ್ಧಿಸಿಕೊಳ್ಳುವ ರೀತಿಯಲ್ಲಿ ಹಸ್ತಪ್ರತಿಗಳು ಸಂಗ್ರಹ ಸಂರಕ್ಷಣೆ ಹಾಗೂ ಸಂವರ್ಧನೆ ಹೊಂದಿದ ರೀತಿಗಳನ್ನು ಹಸ್ತಪ್ರತಿ ಪುಷ್ಪಿಕೆಗಳಿಂದ ತಿಳಿಯಬಹುದು.

'ಪ್ರತಿಯ ಬರದೋದಿ ಕೇಳ್ದರ್ಗೆ ಪರ ಸುಖವು ಲಭಿಸುವುದು..... ಯಿದರ ವಿಚಾರಮಾಡುವರಿಗೆ ಜನ್ಮ ಭಯ। ಮೃತ್ಯುಭಯ। ಜ್ವರಭಯ। ರಾಜಭಯ। ಚೋರಭಯ। ಶತ್ರುಭಯ। ಮೃಗಭಯ! ಸರ್ವಭಯ! ದರಿದ್ರ ಭಯ। ಕರ್ಮಭರ್ಯ। ಪೀಡೆಗಳು ಹೋಹವು' ಎನ್ನುವ ಉಲ್ಲೇಖಗಳು ಕನ್ನಡ ಸಂಸ್ಕೃತಿಯು ಹಸ್ತಪ್ರತಿಗಳನ್ನು ಗ್ರಹಿಸಿದ ಮತ್ತು ಸೃಷ್ಟಿಸಿದ ನೆಲೆಗಳನ್ನು ಮನಸ್ಸಿಗೆ ತರುತ್ತದೆ. ಹೀಗಾಗಿ ಕನ್ನಡ ಹಸ್ತಪ್ರತಿ ಜಗತ್ತೆಂದರೆ ಅದೊಂದು ಬಹುಮುಖಿ ಜಗತ್ತು.[೧೦]

ಕಥಾಭಿತ್ತಿ ಹಾಗೂ ಘಟನಾವಳಿಗಳ ಕ್ರಮಾನುಗತಿ ಒಂದೇ ಆಗಿದ್ದರೂ ಶೈಲಿ, ವಿವರಗಳು, ಧ್ವನಿ ಹಾಗೂ ಸಂರಚನೆಯಲ್ಲಿ ಮತ್ತು ಒಟ್ಟಾರೆ ಪರಿಣಾಮದಲ್ಲಿ ಅಗಾಧ ಅಂತರ ಕಂಡು ಬರಬಹುದು. ವಾಲ್ಮೀಕಿ ಕಾವ್ಯದಲ್ಲಿ ಇಂದ್ರ ವ್ಯಾಮೋಹಿತಳಾದ ಅಹಲ್ಯೆಯ ಜೊತೆ ಸರಸವಾಡುತ್ತಾನೆ. ಆದರೆ ಕಂಬ ರಾಮಾಯಣದಲ್ಲಿ ತಾನು ತಪ್ಪಿ ನಡೆಯುತ್ತಿದ್ದೇನೆಂದು ಅಹಲ್ಯೆಗೆ ಅರಿವಾಗುತ್ತದೆ; ಆದರೆ ಬಹಿಷ್ಕೃತವಾದ ಆ ಆನಂದವನ್ನು ಕೈಬಿಡಲು ಆಕೆಯ ಮನಸ್ಸಿಲ್ಲ. ಆಕೆಯ ಋಷಿಪತಿ ಪ್ರಚಂಡ ಕೋಪಿಷ್ಠನೆಂಬುದನ್ನು ಕಾವ್ಯದಲ್ಲಿ ಸೂಚಿಲಾಗಿದೆ. ಈ ಎಲ್ಲ ವಿವರಗಳು ಸೇರಿಕೊಂಡಿದ್ದರಿಂದ ಶೀಲಭಂಗದ ಸಂದರ್ಭಕ್ಕೆ ಒಂದು ಮನೋವೈಜ್ಞಾನಿಕ ಸೂಕ್ಷ್ಮತೆ ಬಂದೊದಗಿದೆ. ಹಾಗೂ ಭಿನ್ನ ವೃತ್ಪತ್ತಿಯ ಸೆಲೆ ಒದಗಿದೆ.

ಇಂದ್ರ ತನ್ನ ಕಾಮಕ್ಕೆ ತಕ್ಕ ಚಿಹ್ನೆಯನ್ನು ದೇಹದಲ್ಲಿ ಧರಿಸಿದರೆ, ಅಹಲ್ಯೆ ಭವ್ಯಶೂನ್ಯ ಕಲ್ಲಾಗುತ್ತಾಳೆ. ಇಲ್ಲಿ ಪುರುಷ ಪ್ರಧಾನ ನೆಲೆಯಲ್ಲಿ ಇಂದ್ರನಿಗೆ ನೀಡುವ ಶಾಪ ಅಹಲ್ಯೆಯಷ್ಟು ಗೋರವಾಗಲಾರದು. ವಾಲ್ಮೀಕಿಯ ಕಾವ್ಯದಲ್ಲಿಯ ಆಶಯಗಳು ದಕ್ಷಿಣ ಭಾರತದ ಜಾನಪದ ಸಂಪ್ರದಾಯ ಮತ್ತು ದಕ್ಷಿಣದ ಇತರ ರಾಮಕಥೆಯಲ್ಲಿ ಶಾಸನಗಳಲ್ಲಿ ಅಲ್ಲದೇ ಪ್ರಾಚೀನ ತಮಿಳು ಕಾವ್ಯಗಳಲ್ಲಿ ಹಾಗೂ ಇತರ ಮೂಲಗಳಲ್ಲಿ ಕಂಡುಬರುತ್ತವೆ. ಕಂಬನು ಬೇರೆ ಬೇರೆ ಭಾಗಗಳಲ್ಲಿ ವಾಲ್ಮೀಕಿಯ ಸಾಹಿತ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವುದಲ್ಲದೆ ಹಲವು ಪ್ರಾದೇಶಿಕ ಜಾನಪದ ಪರಂಪರೆಯನ್ನು ಪರಿಚಯಿಸುತ್ತಾನೆ. ರಾಮನಿಗಾಗಿ ಕಾಯುತ್ತಿರುವಂತ ಕಗ್ಗಲ್ಲು ಅತ್ಯಂತ ಮಾರ್ಮಿಕವಾದ ಸಂಕೇತವನ್ನು ಹೊಂದಿದೆ. ಹೀಗೆ ಅಹಲ್ಯೆ ಮತ್ತೆ ರಕ್ತಮಾಂಸಗಳ ಮನುಷ್ಯ ರೂಪಧಾರಣ ಮಾಡುವುದು ಹೃದಯಸ್ಪರ್ಶಿಯಾದ ಭಕ್ತಿ ಪ್ರದರ್ಶನಕ್ಕೆ ಎಡೆಮಾಡಿ ಕೊಡುತ್ತದೆ. ಅಲ್ಲದೇ ಸುಪ್ತವಾಗಿದ್ದ ಆತ್ಮ ಜಾಗೃತಗೊಂಡು ದೇವನಲ್ಲಿ ಲೀನವಾಗಲು ಹಾತೊರೆಯುವುದರ ಸಂಕೇತವಾಗಿ ಕಾಣುತ್ತದೆ. ಉದಾರದಾನಿ ಹಾಗೂ ಶತ್ರುಸಂಹಾರಕ,

ತಮಿಳು ನಾಯಕನೆಂದು ಕಂಬ ತನ್ನ ಕಾವ್ಯದ ಉದ್ದಕ್ಕೂ ರಾಮನನ್ನು ಚಿತ್ರಿಸುತ್ತಾನೆ. ಇಹ ಜೀವನದ ಜಂಜಡಗಳಲ್ಲಿ ಮುಳುಗಿದ ಚೇತನಗಳನ್ನು ವಿಮೋಚನೆಗೊಳಿಸಲೆಂದೇ ರಾಮನ ಅವತಾರವಾಗಿದೆ ಎಂಬುದನ್ನು ಅಹತ್ಯೋದ್ಧಾರದ ಪ್ರಕರಣದ ಮೂಲಕ ಭಕ್ತಿಪರವಾದ ದೃಷ್ಟಿಯು ಪ್ರತಿಪಾದಿಸುತ್ತದೆ.

೧೨ನೆಯ ಶತಮಾನದಲ್ಲಿ ಕಂಬನು ತಮಿಳು ಭಕ್ತಿ ಸಂಥದ ಪ್ರಭಾವದಿಂದಾಗಿ ಕಾವ್ಯ ರಚನೆ ಮಾಡಿದ. ಹೀಗಾಗಿ ಕಂಬನಿಗೆ ರಾಮ 'ದುಷ್ಟರ ಶಿಕ್ಷಕ ಶಿಷ್ಟರ ರಕ್ಷಣೆಯ ಜವಾಬ್ದಾರಿ ಹೊತ್ತ ದೇವನಾಗಿ ಕಾಣುತ್ತಾನೆ. ಈ ಕೃತಿಯಲ್ಲಿ ರಾಮ ಅಹಲ್ಯೆಯ ಭೇಟಿ ಮೊದಲನೆಯದು. ಕೊನೆಗೆ ಇದು ರಾವಣನ ಮುಖಾಮುಖಿಯೊಂದಿಗೆ ಮುಕ್ತಾಯವಾಗುತ್ತದೆ. ಕಂಬನ ಗುರು ಎನಿಸಿದ ನಮ್ಮಾರ್ ಪಾಲಿಗೆ ರಾಮ ಸಚರಾಚರಗಳ ರಕ್ಷಕ. ನಮ್ಮಾರ್ ರಾಮನನ್ನು ಕಂಡರಿಸಿದ ರೀತಿಯಲ್ಲೇ ಕಂಬನ ಕಾವ್ಯವು ಕೂಡ ರಚನೆಗೊಂಡಿದೆ.

ಜೈನ ಧರ್ಮದ ನೆಲೆಯಲ್ಲಿ ರಚಿತವಾದ ರಾಮ ಕಥೆಯು ಹಿಂದೂ ಧರ್ಮದ ಮೌಲ್ಯಗಳಿಗೆ ವ್ಯತಿರಿಕ್ತವಾಗಿರುವುದು ಕಾಣುತ್ತದೆ. ಹಾಗೆ ನೋಡಿದರೆ ಹಿಂದೂಗಳು ಅದರಲ್ಲೂ ಬ್ರಾಹ್ಮಣರೂ ರಾವಣನ ಮುಖಕ್ಕೆ ಮಸಿ ಬಳಿದು ಅಂದರೆ ದುಷ್ಟನನ್ನಾಗಿ ಚಿತ್ರಿಸಿದ್ದಾರೆ ಎಂಬ ಭಾವನೆ ಜೈನ ಗ್ರಂಥಗಳಲ್ಲಿ ವ್ಯಕ್ತವಾಗಿದೆ. ಅತಿಯಾದ ಕಲ್ಪನಾವಿಲಾಸ ಸುಳ್ಳು ಹಾಗೂ ತರ್ಕಕ್ಕೆ ವಿರುದ್ಧವಾದುದು ಎಂದು ಹೇಳುತ್ತಾರೆ.

ಅಸ್ಪೃಶ್ಯ ಕವಿಯು ಹಾಡುವ ಜಾನಪದ ಕಥನದಲ್ಲಿ ರಾವಣನಿಗೆ ಇಲ್ಲಿ ರಾವುಳ ಎಂಬ ಹೆಸರಿದೆ. ಕಥೆ ಪ್ರಾರಂಭವಾಗುವುದೆ ರಾವಣ ಮತ್ತು ಅವನ ಹೆಂಡತಿ ಮಂಡೋದರಿಯ ಮೂಲಕ. ಇವರಿಗೆ ಸಂತಾನವಿಲ್ಲದ್ದು ರಾವಣ ಕಾಡಿಗೆ ಹೋಗಿ ಉರುಳು ಸೇವೆಯ ಹರಕೆಗಳಿಂದ ಜೋಗಿ ರೂಪದಲ್ಲಿರುವ ಶಿವನನ್ನು ಕಾಣುವುದು, ಶಿವನಿಂದ ವರಪಡೆಯುವಾಗ ಜೋಗಿಯ ಸಂಶಯಕ್ಕೆ ಒಳಪಡುವುದು ಜೋಗಿ ರೂಪದ ಶಿವ ನೀನು ಹೇಳುವುದೊಂದು ಮಾಡುವುದೊಂದು. ನಿನ್ನ ಒಡಲಲ್ಲಿ ವಿಷವಿದೆ. ನೀನು ಬೆಣ್ಣೆಯಂಥ ಮಾತಾಡುತ್ತೀ ಆದ್ದರಿಂದ ಒಂದು ವೇಳೆ ನೀನು ಸುಳ್ಳಾಡಿದರೆ, ನಿನ್ನ ಕರ್ಮಫಲವನ್ನು ಅನುಭವಿಸುತ್ತೀ ಎಂದು ಹೇಳಲಾಗಿದೆ. ರಾವುಳ ಕನಸು ಕಾಣುವುದೊಂದು ನಿಜಜೀವನದಲ್ಲಿ ನಡೆದುಕೊಳ್ಳುವುದೇ ಒಂದು. ಶಿವನು ಕೊಟ್ಟ ಹಣ್ಣನ್ನು ತಾನೇ ತಿಂದು ಹೆಂಡತಿಗೆ ಮೇಲಿನ ತೊಗಟೆ ಮಾತ್ರ ನೀಡುವುದರಿಂದ ಇಲ್ಲಿ ಲೋಕವಿರೋಧಿಯಾಗಿ ಪುರುಷನಾದ ರಾವುಳನೇ ಗರ್ಭದರಿಸಿ ತಾನು ಸೀನಿದಾಗ ಸೀತೆ ಹುಟ್ಟಿದಳು. ಸೀನಿದಾಗ ಹುಟ್ಟಿದವಳಿಗೆ ಸೀತಮ್ಮ ಎಂದು ಹೆಸರಿನಿಂದ ಕರೆದು ಸ್ತ್ರೀಯರು ಹೆರುವುದು ಬಿಟ್ಟು ತಾನು ಗರ್ಭಧರಿಸಿ ಹುಟ್ಟಿದ ಸೀತೆಯನ್ನು ಅನಾಥರಂತೆ ಬಿಟ್ಟುಬರುವುದು ಮಾತಿಗೆ ತಪ್ಪಿದರೆ ಆಗುವ ಅಪಾಯವನ್ನು ತಿಳಿಸಲಾಗಿದೆ.

ಜಾನಪದ ರಾಮಾಯಣದಲ್ಲಿ ಒಂದು ವಿಶಿಷ್ಟವಾದ ರಚನೆ ಹಾಗೂ ಅವಧಾರಣೆಯ ಅಂಶಗಳು ಒಳಗೊಂಡಿವೆ. ಸೀತೆಯ ಜನನ, ದತ್ತು ಸ್ವೀಕಾರ, ವಿವಾಹ, ಅಪಹರಣ, ಪುನರ್ಮಿಲನ ಹೀಗೆ ಇದರಲ್ಲಿ ಸೀತೆಯ ವಿಷಯಕ್ಕೆ ಮತ್ತೆ ಮತ್ತೆ ಮರಳಿ ಬರಲು ಕಥೆಗಾರ ಹಾತೊರೆಯುತ್ತಾನೆ. ರಾಮಲಕ್ಷ್ಮಣರ ಜನನ,

ವನವಾಸ, ರಾವಣನ ಜೊತೆ ಯುದ್ಧ – ಈ ಭಾಗಗಳು ದೊಡ್ಡವಾದಷ್ಟು ಸೀತಾಪರಿತ್ಯಾಗ, ಗರ್ಭಧಾರಣ ಮತ್ತು ಪುನರ್ಮಿಲನ ಭಾಗಗಳು ದೊಡ್ಡವಾಗಿವೆ. ಈ ಕೃತಿಯಲ್ಲಿ ಮುಖ್ಯವಾಗಿ ಪುರುಷನಾದ ರಾವುಳನ ವಿಚಿತ್ರ ಜನನವು ಗರ್ಭ ಹಾಗೂ ಶಿಶು ಜನನದ ಬಗೆಗಿರುವ ಪುರುಷರ ಅಸಡ್ಡೆ ಲೋಕಬಾಹಿರವಾದ ತಂದೆ ಮಗಳನ್ನು ಮೋಹಿಸುವುದು ಅದು ಸಂಭೋಗದ ವಿರೋಧ ನೀತಿಯಾಗಿದೆ. ಆದ್ದರಿಂದ ಇಲ್ಲಿ ಕಥೆಯ ರೂಪದ ಜಾನಪದ ಸಾಹಿತ್ಯವು ಭಾರತೀಯ ಸಂಸ್ಕೃತಿಯ ಅಂಶವನ್ನು ಒಳಗೊಂಡಿವೆ.

ಜೈನರ ಕೃತಿಗಳಲ್ಲಿ ರಾವಣನು ರಾಕ್ಷಸನಲ್ಲ ಆತ ನರಭಕ್ಷಕನೂ ಮಾಂಸಾಹಾರಿಯೂ ಅಲ್ಲ. ಮೂರ್ಖರು ಹಾಗೂ ಅವಿಚಾರ ರಮಣೀಯವಾಗಿ ಯೋಚಿಸುವ ಕವಿಗಳು ಈ ಸುಳ್ಳುಗಳನ್ನು ಹೇಳುತ್ತಾರೆ ಎನ್ನುತ್ತಾರೆ. ಜೈನಧರ್ಮೀಯನಾದ ವಿಮಲಸೂರಿಯು ರಾಮನ ವಂಶಾವಳಿಯ ವರ್ಣನೆಯೊಂದಿಗೆ ತನ್ನ ಕಾವ್ಯವನ್ನು ಆರಂಭಿಸುವುದಿಲ್ಲ. ಅದಕ್ಕೆ ಬದಲಾಗಿ ರಾವಣನ ವರ್ಣನೆಯೊಂದಿಗೆ ಕಾವ್ಯವನ್ನು ಆರಂಭಿಸುತ್ತಾನೆ. ರಾವಣನು ಜೈನ ತೀರ್ಥಂಕರ ಪರಮಭಕ್ತ. ಅವನು ತನ್ನಲ್ಲಿ ಅನುರಕ್ತಳಾಗದ ಹೆಣ್ಣನ್ನು ತಾನು ಮುಟ್ಟುವುದಿಲ್ಲವೆಂದು ತೀರ್ಥಂಕರರನ್ನು ಮೆಚ್ಚಿಸಲು ಪ್ರತಿಜ್ಞೆ ಮಾಡುತ್ತಾನೆ. ಸೀತೆ ಎಂಬ ಹೆಣ್ಣಿನಿಂದ ನಿನ್ನ ಅವಸಾನ ಖಚಿತ ಎಂದು ಜ್ಯೋತಿಷಿಗಳು ಹೇಳಿದ ಮಾತು ಕೇಳಿ ಅವನು ವಿಚಲಿತನಾಗುತ್ತಾನೆ. ಇಂಥ ರಾವಣನು ಸೀತೆಯ ಸೌಂದರ್ಯಕ್ಕೆ ಮರುಳಾಗಿ ಆಕೆಯನ್ನು ಅಪಹರಿಸಿ ವಿಧವಿಧವಾಗಿ ಮನವೊಲಿಸುವಲ್ಲಿ ವಿಫಲ ಯತ್ನ ಮಾಡುತ್ತಾನೆ. ತನ್ನ ಅಧೋಗತಿಯ ಬಗ್ಗೆ ಮರುಗುತ್ತಾನೆ. ಕೊನೆಗೆ ಯುದ್ಧ ಭೂಮಿಯಲ್ಲಿ ಸಾವನಪ್ಪುತ್ತಾನೆ. ಈ ಕಾವ್ಯದಲ್ಲಿ ರಾವಣ ಒಬ್ಬ ಮಹಾನ್ ವ್ಯಕ್ತಿ. ಆದರೆ ವ್ಯಾಮೋಹಕ್ಕೆ ಬಲಿಯಾಗುವುದಿಲ್ಲ ಎಂದು ತಾನು ಮಾಡಿದ ಪ್ರತಿಜ್ಞೆಯನ್ನು ಈಡೇರಿಸಲಾರದೆ, ಕಾಮಾಭಿಲಾಷೆಯನ್ನು ನಿಗ್ರಹಿಸಲಾರದೆ ಪತಿತನಾಗುತ್ತಾನೆ. ಜೈನ ರಾಮಾಯಣಗಳ ಇನ್ನೊಂದು ಪರಂಪರೆಯಲ್ಲಿ ಸೀತೆಯು ರಾವಣನ ತಂಗಿ. ಅದು ಅವನಿಗೆ ತಿಳಿದಿರುವುದಿಲ್ಲ. ಆದರೆ ಈ ಈಡಿಪಸ್ ಸಂದರ್ಭ (ನಿಷಿದ್ಧ ಸಂಭೋಗ, ತಾಯಿಗಂಡತನ) ದಿಂದಾಗಿ ದುರುಂತವು ದಾರಣವಾಗಿದೆ.[೧೧] ಇಲ್ಲಿ ಕಥನಗಳ ಹಾಗೂ ತತ್ವಗಳ ಪುನರುತ್ಪತ್ತಿಯ ಸಬಲ ನೆಲೆಗಳನ್ನು ಕಾಣಬಹುದಾಗಿದೆ.

ದಕ್ಷಿಣ ಭಾರತದ ಜಾನಪದ ರಾಮಾಯಣಗಳಲ್ಲಿ ರಾಮಾಯಣ ಕಥೆಯು ವಿವಿಧ ಭಾಗಗಳಾಗಿ ಕಂಡುಬರುತ್ತದೆ. ಕನ್ನಡದಲ್ಲಿ ಸೀತೆಯು ಜನ್ಮ, ಅವಳ ವಿವಾಹ, ಅಗ್ನಿಪರೀಕ್ಷೆ, ವನವಾಸ, ಲವಕುಶರ ಜನನ, ತಂದೆಯಾದ ರಾಮನೊಡನೆ ಅವರ ಕಾಳಗ – ಹೀಗೆ ಕಥೆಯು ಖಂಡ ಖಂಡವಾಗಿ ಕಾಣಬರುತ್ತದೆ. ಆದರೆ ತಂಬ್ಯೂರಿ ದಾಸಯ್ಯರ ಪದಗಳಲ್ಲಿ ರಾಮಾಯಣದ ಇಡೀ ಕಥೆ ಕಂಡುಬರುತ್ತದೆ.

ಹೀಗಾಗಿ ರಾಮಾಯಣ ಮಹಾಭಾರತ ಅಥವಾ ಇನ್ನೂ ಅನೇಕ ಕೃತಿಗಳು ಕಾಲದಿಂದ ಕಾಲಕ್ಕೆ ಆ ಕೃತಿಗಳನ್ನು ಅನುಲಕ್ಷಿಸಿ ಆ ಪ್ರದೇಶದ ವೈಶಿಷ್ಟತೆ ಕೃತಿಕಾರರ ಆಲೋಚನೆ, ತಿಳುವಳಿಕೆ, ಜ್ಞಾನದ ಹೊಳವುಗಳನ್ನು ರಾಜಕೀಯ ಹಾಗೂ ಧಾರ್ಮಿಕ ಸಂದರ್ಭವನ್ನು ಅವಲಂಬಿಸಿ ಅನೇಕ ಗ್ರಂಥಗಳ ಪುನರ್‌ಉತ್ಪತ್ತಿಯಾಗಿದೆ. ಸದಾ ಚಲನಶೀಲವಾಗಿ ಹರಿಯುವ ನದಿಗಳಂತೆ ಅವುಗಳ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಪ್ರಭಾವಗಳ ಮೂಲಕ ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ಬೇರೆ

ಜ್ಞಾನದ ಹರವುಗಳಾಗಿ ಹುಟ್ಟಿಕೊಂಡಿವೆ. ಉದಾ:- ದಂಡಿಯ "ಕಾವ್ಯಾದರ್ಶ" ಅನುಲಕ್ಷಿಸಿ ಶ್ರೀವಿಜಯನ ಕವಿರಾಜಮಾರ್ಗ ರಚನೆಗೊಂಡಿತು. ಹಾಗೆ ಅನೇಕ ಶಾಸ್ತ್ರ, ಅಲಂಕಾರ, ಛಂದಸ್ಸು, ನಿಘಂಟುಗಳಂತಹ ಲಾಕ್ಷಣಿಕ ಕೃತಿಗಳೂ ಇದೇ ಬಗೆಯ ಮರುಹುಟ್ಟಿಗೆ ಕಾರಣವಾಗಿರುವುದನ್ನು ಇಲ್ಲಿ ಸ್ಮರಿಸಬಹುದು. ಜ್ಞಾನವನ್ನು ಸದಾ ಕ್ರಿಯಾಶೀಲವಾಗಿ ಗ್ರಂಥಗಳ ರೂಪದಲ್ಲಿ ಅಥವಾ ಮೌಖಿಕವಾಗಿಯೂ ರಕ್ಷಿಸಿದ್ದು ಗ್ರಂಥ ಸಂರಕ್ಷಣೆಯ ಪ್ರಮುಖ ಕಾರ್ಯವಾಗಿದೆ.

ವಿಶ್ವಮಾನವನ ಹೃದಯಕ್ಕೆ ನಿಜಾನುಭೂತಿಯ ಬೆಳಗನ್ನು ಆನಂದವನ್ನು ನೀಡಬಲ್ಲ ದಿವ್ಯ ಕೃತಿರತ್ನಗಳಲ್ಲಿ ಶೂನ್ಯಸಂಪಾದನೆಯ ಕೃತಿಗಳು ಮಹತ್ವದ ಕೃತಿರತ್ನಗಳಾಗಿ ಕಾಣುತ್ತವೆ. ೧೨ನೆಯ ಶತಮಾನದ ವಚನಕಾರರನ್ನು ಆಧರಿಸಿ ಅಲ್ಲಮನನ್ನು ಕೇಂದ್ರೀಕರಿಸಿ, ಅಲ್ಲಮನಿಗೆ ಪ್ರಾಧ್ಯಾನತೆ ನೀಡಿ ರಚಿತವಾದ ಶೂನ್ಯಸಂಪಾದನೆಗಳು ಅಲ್ಲಮನ ಜೊತೆ ಜೊತೆಗೆ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮನನ್ನು, ಅಕ್ಕಮಹಾದೇವಿ ಇನ್ನಿತರ ವಚನಕಾರರ ಕುರಿತು ಹೆಚ್ಚಿನ ಮಾಹಿತಿ ನೀಡುವ ಕೃತಿಗಳಾಗಿವೆ. ೧೫ ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಗುಳೂರು ಸಿದ್ಧವೀರಣ್ಣೊಡೆಯುರು ಸಂಗ್ರಹಿಸಿದ ಶೂನ್ಯಸಂಪಾದನೆ ಮೊದಲು ಪ್ರಕಟವಾದುದು ಕ್ರಿ.ಶ. ೧೯೩೦ರಲ್ಲಿ ವಚನ ಸಾಹಿತ್ಯಕ್ಷೇತ್ರದಲ್ಲಿ ಏಕೈಕ ಧೀರರಾಗಿ ಶ್ರಮಿಸುತ್ತ ಬಂದಿರುವ ಹಳಕಟ್ಟಿಯವರು ಶೂನ್ಯಸಂಪಾದನೆಯನ್ನು ಪ್ರಕಾಶಕ್ಕೆ ತಂದು ಕನ್ನಡಿಗರ ವಿಶೇಷ ಗೌರವಕ್ಕೆ ಪ್ರೀತಿಗೆ ಪಾತ್ರರಾದರು.

ಶೂನ್ಯಸಂಪಾದನೆಯ ಪ್ರಕಟದ ನಂತರ ಅದರಲ್ಲಿರುವ ಸ್ವಾನುಭಾವದ ಗಾಂಭೀರ್ಯ, ಆಧ್ಯಾತ್ಮಿಕ ವಿಚಾರದ ಔನ್ನತ್ಯ, ಧರ್ಮ, ನೀತಿ ಆಚಾರ ತತ್ವಗಳ ಕೂಲಂಕುಷವಾದ ಚರ್ಚೆಯ ಸೊಗಸು, ಸಂವಾದದ ಬಿನ್ನಾಣ, ವಿಷಯ ವಿವೇಚನೆಯಲ್ಲಿ ತಂತಮ್ಮ ವ್ಯಕ್ತಿತ್ವದ ಸಾರಾಯವನ್ನೇ ಸೂಸುತ್ತಿರುವ ಶರಣರ ಮಹಾಂತ ನಿಲುವುಗಳು ಕನ್ನಡಿಗರ ಸಹೃದಯವನ್ನು ಮಿಗಿಲಾದ ಕಾಂತಿಯನ್ನು ತಳೆಯುತ್ತ ನಡೆದಿದೆ. ಶ್ರೀ ಹಳಕಟ್ಟಿಯವರ ಪರಿಶ್ರಮಕ್ಕೆ ಅಮರ ಫಲಮೂಡಿದೆ.[೨]

ಕನ್ನಡ ಗ್ರಂಥಸಂಪಾದನೆಯೂ ಒಂದು ಸಿದ್ಧ ಮತ್ತು ಶುದ್ಧ ಚಾರಿತ್ರಿಕ ಸಂದರ್ಭದ ಫಲಿತವಾಗಿದೆ. ಕನ್ನಡ ಪಠ್ಯಗಳ ಸಂಸ್ಕರಣೆಯ ಹಿಂದೆ ಬರೀ ತಪ್ಪು-ಸರಿ ಅಥವಾ ಶುದ್ಧ-ಅಶುದ್ಧ ಎನ್ನುವ ಸರಳೀಕೃತ ನಿರ್ಧಾರಗಳ ಹಿಂದೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಿತಾಸಕ್ತಿಗಳು ಪ್ರಭಾವ ಕಂಡು ಬರುತ್ತದೆ.

ನಮ್ಮ ಅಧ್ಯಯನವು, ಆಲೋಚನೆಯೂ ವೈದಿಕಶಾಹಿ ಮತ್ತು ವಸಾಹತುಶಾಹಿ ಪ್ರಭಾವಕ್ಕೆ ಒಳಗಾಗಿರುವುದು ಕೃತಿಕೇಂದ್ರಿತ ಹಿನ್ನೆಲೆಯಲ್ಲಿ ನೋಡುವ ಅಂಶವಾಗಿದೆ. ಕನ್ನಡ ಮನಸ್ಸುಗಳು ತನ್ನ ಲಿಪಿಕಾರ, ಕವಿ, ವಿದ್ವಾಂಸ ಕೇಳುಗರ ಮೂಲಕ ಸೃಜಿಸಿಕೊಂಡ ಸಾಹಿತ್ಯ ಸಂಸ್ಕೃತಿಗಳನ್ನು ಏಕೀಕರಿಸುವುದು ಸಲ್ಲದು. ಕೃತಿಯೊಂದರ ಹುಟ್ಟು ಮತ್ತು ಪ್ರತಿಹುಟ್ಟು ಅನೇಕ ಲೋಕಗ್ರಹಿಕೆಗಳು, ಅನುಭವಗಳು ಪ್ರೇರಣೆಗಳ ಸಮ್ಮಿಳನವಾಗಿರುತ್ತದೆ. ಈ ಅನುಭವ ಸಮಾಜದೊಳಗೆ ಹಲವು ಓದುಗಳಿಗೆ ಪ್ರೇರಣೆಯ ಕಾರಣವೂ ಆಗಿರುತ್ತದೆ. ಇಂಥ ಅನುಭವಗಳ ಅಗಾಧ ವಿಸ್ತಾರವೂ ಲೇಖಕ, ಓದುಗ, ಕೇಳುಗ, (ನಾಟಕ, ಅಭಿನಯಕಾರ ಅಥವಾ ನಟ, ನಟಿ, ಸಹೃದಯ, ಪ್ರೇಕ್ಷಕ) ಇವರಲ್ಲಿ ಪುನರ್‌ಸೃಷ್ಟಿಗೇ ಕಾರಣವಾಗುತ್ತದೆ.

'ಹಲವು ಕನ್ನಡಗಳ ಮಧ್ಯ 'ಪೊಸತಾಗಿ ರಚಿಸಿದೆ' ಎನ್ನುವ ಮಾತು ಕನ್ನಡ ಕಾವ್ಯ ಪರಂಪರೆಯ ಸೃಜನಶೀಲತೆಯನ್ನು ಹೇಳುತ್ತದೆ.

ಸಂಸ್ಕೃತ ಮತ್ತು ವಸಾಹತುಶಾಹಿ ಪರಿಕಲ್ಪನೆಗಳು ಯಾವುದನ್ನು ದೋಷವೆಂದು ಕರೆಯುತ್ತದೋ ಅದನ್ನು ಕನ್ನಡವು ಗುಣವೆಂದು ಭಾವಿಸುತ್ತದೆ.

ದೋಷಮನೆ ಗುಣದವೊಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯನೆ ನಿರಿಸಿ ಖಂಡ
ಪ್ರಾಸಮನತಿಶಯದೆಂದು ಯತಿಯಂ ಮಿಕ್ಕರ್

ಎನ್ನುವ ಕವಿರಾಜಮಾರ್ಗದ ಮಾತು ಕನ್ನಡದ ಕೃತಿಯೊಂದು ಮೌಖಿಕ ಮಾಧ್ಯಮದ ಮೂಲಕ ಸಮುದಾಯದ ಸಂಗಡ ಸಂವಾದ ನಡೆಸಿದ್ದನ್ನು ಸೂಚಿಸುತ್ತದೆ. ಕೃತಿ ಬರೆದಿದ್ದಿರಬಹುದು ಅದು ಸಮುದಾಯದಲ್ಲಿ ಜೀವಂತವಾಗಿರುತ್ತಿದ್ದುದು ಗಮಕ, ಹಾಡು, ನಾಟಕ, ಪ್ರದರ್ಶನ ಮುಂತಾದ ಮೌಖಿಕ ರೂಪಗಳ ಮೂಲಕವೇ. ಬಹುಪಾಲು ಜನ ಓದುಗರು ಅನಕ್ಷರಸ್ಥರೇ ಇರುವ ಸಮುದಾಯದಲ್ಲಿ ಸಂಸ್ಕೃತಿಯ ಪ್ರಸರಣದ ದೃಷ್ಟಿಯಿಂದ ಇದು ಬಹಳ ಮುಖ್ಯವಾಗಿತ್ತು.

ಕುಮಾರವ್ಯಾಸನ ವಿರಾಟ ಪರ್ವವನ್ನು ಮಳೆಗಾಗಿ ಪಟಿಸುವ ಸಾಂಸ್ಕೃತಿಕ ಜಗತ್ತು ಪಠ್ಯದ ಶುದ್ಧ ಅಶುದ್ಧ ಎನ್ನುವ ಲಿಖಿತ ಸಂಸ್ಕಾರದ ಗೊಡವೆಗೆ ಹೋಗದೆ ಮಳೆಯ ಆಶಯದ ದೃಷ್ಟಿಯಿಂದ ಅದನ್ನು 'ಕಥಾಂತರಿಸುತ್ತ' (ಓದುವ, ಕೇಳುಗ) ಹೋಗುತ್ತದೆ. ಈ ಪ್ರಕ್ರಿಯೆಗೆ ಸಂವಹನ ಮುಖ್ಯ ಮತ್ತು ಆ ಕ್ಷಣದ ಫಲಾಪೇಕ್ಷೆ ಮುಖ್ಯವಾಗುತ್ತದೆ. ಇಂಥ ನೂರಾರರು ಪಠ್ಯಗಳಿಂದು ಲಭ್ಯವಿವೆ ಮತ್ತು ಇಂಥ ಪಠ್ಯಗಳಲ್ಲಿನ ತಪ್ಪುಗಳಿಗೆ ಲಿಪಿಕಾರರನ್ನು ಹೊಣೆಗಾರರನ್ನಾಗಿಸಲಾಗುತ್ತದೆ. ಕವಿಯನ್ನು ಆತನ ಕೃತಿಯನ್ನು ಶ್ರೇಷ್ಠ ಸ್ಥಾನದಲ್ಲ ನಿಲ್ಲಿಸಿ ಪ್ರತಿಕಾರ ಮತ್ತು ಪ್ರತಿಯನ್ನು ಕನಿಷ್ಠ ಸ್ಥಾನದಲ್ಲಿ ನಿಲ್ಲಿಸುವ ಪ್ರವೃತ್ತಿಗಳು ಅಪಾಯಕಾರಿ, ವ್ಯಕ್ತಿನೆಲೆಯಲ್ಲಿ ಒಂದು ಸಾಂಸ್ಕೃತಿಕ ಆಕೃತಿ ಮತ್ತು ಅದರ ಪ್ರತ್ಯುತ್ಪನ್ನಗಳನ್ನು ಗ್ರಹಿಸುವ ಸಾಮ್ರಾಜ್ಯಶಾಹಿ ಧೋರಣೆಯ ಫಲಿತಗಳು ಇಂದು ಗ್ರಂಥಸಂಪಾದನಾ ಶಾಸ್ತ್ರವನ್ನು ಆಳುತ್ತಿವೆ.[೧೩]

ಗ್ರಂಥಗಳನ್ನು ಓದುವ, ಕೇಳುವ, ನೋಡುವ ಮೂಲಕ ಅವುಗಳು ಮರುಸೃಷ್ಟಿಗೆ ಕಾರಣವಾಗುತ್ತದೆ. ನಾಟಕವನ್ನು ಅಭಿನಯಿಸುವ ಮತ್ತು ನೋಡುವವನು ರಸದ ಅನುಭವವನ್ನು ಹೊಂದುತ್ತಾನೆ. ಭರತ ತನ್ನ ನಾಟ್ಯಶಾಸ್ತ್ರದಲ್ಲಿ ರಸ ಕುರಿತು ವಿಭಾವಾನುಭಾವ ವ್ಯಭಿಚಾರೀ ಸಂಯೋಗಾದ್ರಸನಿಷ್ಪತ್ತಿ: ಭರತನ ಪ್ರಕಾರ ನಾನಾ ಪದಾರ್ಥಗಳನ್ನು ಸೇರಿಸಿ ಮಾಡಿದ ಮೇಲೋಗರದ ವ್ಯಂಜನಗಳನ್ನು ಹಾಕಿಕೊಂಡು ಊಟಮಾಡುತ್ತ ಆ ಊಟದ ರುಚಿಯನ್ನು ಬಲ್ಲವರು ಹೇಗೆ ಆ ರುಚಿಯನ್ನು ಆ ರುಚಿಯ ಸುಖವನ್ನು ಅನುಭಾವಿಸುತ್ತಾರೊ ಹಾಗೆಯೇ ವಿದ್ವಾಂಸರು ಭಾವ, ಅಭಿನಯ ಇವುಗಳಿಂದ ಕೂಡಿದ ಸ್ಥಾಯೀಭಾವಗಳನ್ನು ಮನಸ್ಸಿನಲ್ಲಿ ಆಸ್ವಾದಿಸಿ ಸುಖಪಡುವುದರಿಂದ ಅವುಗಳೇ ನಾಟ್ಯರಸವಾಗಿವೆ. ವಿಭಾವ, ಅನುಭಾವ,

ಸಂಚಾರೀಭಾವಗಳಿಂದ ಪುಷ್ಟಿಗೊಂಡು ಪ್ರಕರ್ಷಸ್ಥಿತಿಗೇರಿದ ಸ್ಥಾಯೀಭಾವವೇ ರಸವಾಗಿದೆ. ಶ್ರೀಶಂಕುಕನ' ಚಿತ್ರತುರಗನ್ಯಾಯ ಇದು 'ಕುದುರೆ' ಎಂದು ಸದ್ಯಕ್ಕೆ ಒಪ್ಪಿಕೊಳ್ಳುವ ಮನಸ್ಥಿತಿಯಂತೆ ನಾಟಕದ ಪಾತ್ರಗಳನ್ನು ಪ್ರೇಕ್ಷಕ ಅಥವಾ ಸಹೃದಯ ಸ್ವೀಕರಿಸಿ ಆಸ್ವಾದಿಸುತ್ತಾನೆ.

ಅಭಿನವಗುಪ್ತ ತನ್ನ 'ಅಭಿನವ ಭಾರತೀಯಲ್ಲಿ ಭಟಲೊಲ್ಲಟ, ಶ್ರೀಶಂಕುಕ, ಭಟ್ಟನಾಯಕರ ಅಭಿಪ್ರಾಯಗಳನ್ನು ಚರ್ಚಿಸಿದ್ದಾನೆ. ಅವುಗಳ ಮುಂದುವರೆದ ವಿವೇಚನೆಯನ್ನು ರಸಸೂತ್ರಕ್ಕೆ ನೀಡಿದ್ದಾನೆ. 'ಲೋಕಕ್ಕೂ ಕಲಾಲೋಕಕ್ಕೂ ವ್ಯತ್ಯಾಸವಿದೆ ಲೋಕದ ಕ್ರಿಯೆಗಳಿಗೆ ವ್ಯಕ್ತಿ ನೇರವಾಗಿ ಪ್ರತಿಕ್ರಿಯಿಸುತ್ತಾನೆ. ಆದರೆ ಕಲಾಲೋಕದಲ್ಲಿ ವೈಯ ಕಳೆದುಕೊಂಡು 'ತಟಸ್ಥ ತಲ್ಲೀನ'ವಾಗಿರುತ್ತಾನೆ. ಈ ಸ್ಥಿತಿಯಲ್ಲಿನ ಅವನ ಮಾನಸಿಕ ಸ್ಥಿತಿ ಬಹಳ ಮುಖ್ಯವಾಗಿರುತ್ತದೆ. ಈ ಸಂದರ್ಭದಲ್ಲಿ ಪ್ರೇಕ್ಷಕ ಸಪ್ತವಿಘ್ನಗಳಿಂದ ಹೊರತಾದಾಗ ಕಲೆಯಲ್ಲಿನ ರಸವನ್ನು ಆಸ್ವಾದಿಸುತ್ತಾನೆ. ಪ್ರೇಕ್ಷಕನಾದವನು ಅಭಿನಯಿಸಲ್ಪಡುವ ವಿಭಾವವನ್ನು (ನಾಟಕ) ತಟಸ್ಥವಾಗಿ ಕುಳಿತು ಸಾಮಾಜಿಕನಲ್ಲಿ ವ್ಯಭಿಚಾರೀಭಾವಗಳೊಂದಿಗೆ ಸಂಯೋಗವನ್ನು ಹೊಂದಿ ರಸನಿಷ್ಪನ್ನವಾಗುತ್ತದೆ. ಅಂಥ ರಸಸ್ವಾದನೆಯನ್ನು ಸಾಮಾಜಿಕವಾದ ಸಹೃದಯ ಅನುಭವಿಸುತ್ತಾನೆ.

ರಸಸೂತ್ರದ ಬೆಳವಣಿಗೆ ಒಂದು ಹಂತದಲ್ಲಿ ಭಾರತೀಯ ಕಾವ್ಯಮೀಮಾಂಸೆಯ ಬೆಳವಣಿಗೆಯೂ ಆಗಿದೆ. ಈ ಮೇಲಿನ ಎಲ್ಲಾ ಲಾಕ್ಷಣಿಕರ ವಿಚಾರಗಳನ್ನು ನೋಡಿದಾಗ ರಸ ಆಸ್ವಾದಿತವಾಗುವಂತಹದ್ದು; ರಸಾತ್ಮಕವಾದದ್ದೇ ನಿಜವಾದ ಕಾವ್ಯ ರಸವಿಲ್ಲದ ಕಾವ್ಯ ಹಿಡಿಸಲಾರದು ಬದುಕೂ ಸಹ ಸಹ್ಯವಾಗಲು ಕಾವ್ಯ ನಾಟಕಾದಿಗಳಿಂದ ಮನಃಸಂತೋಷವಾಗಬೇಕು ಎಂಬುದೇ ರಸ್ತತತ್ವದ ಮುಖ್ಯ ತಿರುಳು ಮತ್ತು ಪ್ರಮುಖ ಅಂಶವಾಗಿದೆ. ಒಂದು ಕೃತಿ ಪಠ್ಯರೂಪದಲ್ಲಲ್ಲದೆ ಭಾವ ಹಾಗೂ ರಸರೂಪದಲ್ಲಿ ಹೇಗೆ ಪುನರುತ್ಪತ್ತಿ ಗೊಳ್ಳುತ್ತದೆನ್ನುವುದಕ್ಕೆ ಇದು ಉತ್ತಮ ನಿದರ್ಶನವಾಗಿದೆ.

ಕಾವ್ಯದಲ್ಲಿ ವ್ಯಕ್ತಿ ನೆಲೆಯಿದ್ದು ಅದನ್ನು ಮೀರುವ ಮತ್ತು ಸಮಾಜದ ಸಂದರ್ಭದಲ್ಲಿ ಮರುಹುಟ್ಟು ಪಡೆಯುವ ಪ್ರಕ್ರಿಯೆಯೇ 'ಸಾಮಾಜಿಕ ಕ್ರಿಯೆ' ಹಿಂದಿನಿಂದ ಬಂದದ್ದನ್ನು ಬಾಯಿಪಾಠ ಒಪ್ಪಿಸುವುದು ಕವಿ, ಲಿಪಿಕಾರರ ಕೆಲಸವಲ್ಲ. ಕಾಲದಿಂದ ಕಲಿತು ಹೊಸ ಪಾಠಗಳನ್ನು ರೂಪಿಸುವುದು ಕವಿ ಕ್ರಿಯೆಯ ಲಿಪಿಕಾರರ ಗುಣದ ಒಂದು ಸ್ವಭಾವ. ಕವಿಯಾಗಲೀ, ಲಿಪಿಕಾರನಾಗಲೀ ತನ್ನ ಸೃಜನಶೀಲತೆಯ ದರ್ಶನಾತ್ಮಕತೆ ಮತ್ತು ಕಲ್ಪನೆಗಳ ಮೂಲಕ ಆಕೃತಿಯೊಂದನ್ನು ಮರು ನಿರ್ಮಿಸುತ್ತಾನೆ. ಇದಕ್ಕೆ ಕವಿರಾಜಮಾರ್ಗದಿಂದ ಹಿಡಿದು ಇವತ್ತಿನವರೆಗಿನ ಕನ್ನಡ ಸಾಹಿತ್ಯದಲ್ಲಿ ನಿದರ್ಶನಗಳು ಸಿಗುತ್ತವೆ. ಹೊಸತಾಗಿ ವಿರಚಿಸಿದೆ ಕನ್ನಡದೊಳು ಎನ್ನುವ ಮಾತುಗಳು ತುಂಬ ಸಶಕ್ತವಾದ ಉವಾಚಗಳು.[೧೪] ಕವಿ, ಲಿಪಿಕಾರ ತನ್ನ ಬದುಕಿನಲ್ಲಿ ಪಡೆದ ತಿಳುವಳಿಕೆ, ಅನುಭವ, ಓದಿನಿಂದ ಪಡೆದ ಜ್ಞಾನವನ್ನು ತನ್ನ ಕೃತಿಯಲ್ಲಿ ವ್ಯಕ್ತಪಡಿಸುತ್ತಾ ಬಂದಿದ್ದಾರೆ.

ಮೂಲ ಹಸ್ತಪ್ರತಿಗಳು ಬಸದಿಗಳಲ್ಲಿ ರಚನೆಗೊಳುತ್ತಿದ್ದುದರ ಕೆಲವು ನಿದರ್ಶನಗಳು ಇಂಥ ಹಸ್ತಪ್ರತಿಗಳನ್ನು ಮರುಪ್ರತಿ ಮಾಡುವ ಕಾರ್ಯವೂ, ಬಸದಿಗಳಲ್ಲಿ ಕಾಲಾಂತರದಿಂದಲೂ ನಡೆದುಬಂದಿದೆಯೆಂಬುದನ್ನು ಹಸ್ತಪ್ರತಿಗಳಲ್ಲಿನ ಕೆಲವು ಪ್ರಶಸ್ತಿ ಬರಹಗಳು ಸ್ಪಷ್ಟಪಡಿಸುತ್ತವೆ. ......

ಮಲೆಯೂರ ಆದಿ ಪರಮೇಶ್ವರರ ಪಾದಸನ್ನಿಧಿಯಲ್ಲಿ..... ಬರೆದ [ಹಂ]ತ ವಿಜಯ ಕುಮಾರಿಯ ಚರಿತ.....[೧೫] ಕವಿ ಭಾಸ್ಕರನು ಜೀವಂದರ ಚರಿತ್ರೆಯನ್ನು ಬಸದಿಯಲ್ಲಿ ರಚಿಸಿದನು.

ಮೇಚಿವ ಪೆನುಗೊಂಡೆಯ ಸುಶಾಂತೀ
ಶ್ವರನ ಜಿನವಾಸದಲಿ ಜೀವಂ
ಧರನ ಚರಿತೆಯ ರಚಿಸಿದನು ಜರ್ಾಣ್ಮೆಯಲಿ ಭಾಸ್ಕರನು.

ಶಾಂತಕೀರ್ತಿ ಮುನಿಯ "ಚತುರ್ವಿಂಶತಿ ತೀರ್ಥಂಕರ ಕಿರಿದಾದ ಪಂಚಕಲ್ಯಾಣ ಕಥೆ' ಎಂಬ ಸಾಂಗತ್ಯ ಕೃತಿಯ ರಚನೆಯಾದುದು ಕೂಡ ಜಿನಾಲಯದಲ್ಲಿ

ವರ ಮಾರ್ಗ್ಗಶಿರ ಶುದ್ಧ ಚತುರ್ದಸಿ ಗುರುವಾರ
ನಿರುಪವು ತುಳುವ ದೇಶದೊಳು
ವರವೇಣು ಪುರದಾದಿನಾಥ ಸಂನಿಧಿಯೊಳು
ಪರಿಪೂರ್ಣವಾಯ್ತೀ ಕೃತಿಯು

ಹೊಸ ಹಸ್ತಪ್ರತಿಗಳನ್ನು ವೈಭವಪೂರ್ಣವಾಗಿ ಉತ್ಸವಿಸುತ್ತ ತಂದು ಜಿನಾಲಯದಲ್ಲಿ ಪಠಿಸುವುದರಿಂದ ಅದು ಧರ್ಮದ ತತ್ವ ಸಿದ್ಧಾಂತವನ್ನು ರಕ್ಷಿಸಿದಂತಹ ಪುಣ್ಯಕಾರ್ಯವೆಂದು ಬ್ರಹ್ಮಕವಿಯು ತನ್ನ ವಜ್ರಕುಮಾರ ಚರಿತೆಯಲ್ಲಿ ಹೇಳಿದ್ದಾನೆ.

ವಸುಗೆವರೆ ಛತ್ರಚಾಮರ
ಶಶಿಮುಖಿಯರು ಪಾಡಿ ಕಳಶಕಂನಡಿ ಸಹಿತಂ
ಹೊಸಕೃತಿಯನೊಯ್ದು ಶ್ರೀ ಜಿನ
ವಸತಿಯೊಳೋದಲ್ಕೆ ಪುಣ್ಯಮದಕ್ಕುಂ

ವೀರಶೈವರಲ್ಲಿ ಶರಣರ ವಚನಗಳ ಕಟ್ಟಗಳನ್ನೇ ದೇವರೆಂದು ಪೂಜಿಸುತ್ತಾ ಬಂದಂತಹ 'ಕೊಡೆಕಲ್ಲು ಬಸವಣ್ಣ'ನ ಪರಂಪರೆಯನ್ನು ಕಾಣಬಹುದು. ಮುಖ್ಯವಾಗಿ ಕಾಲಜ್ಞಾನದ ವಿಚಾರಗಳನ್ನು ಒಳಗೊಂಡ ವಚನಗಳ ಹಸ್ತಪ್ರತಿ ಕಟ್ಟುಗಳನ್ನು ದೇವಾಲಯದಲ್ಲಿ ದೇವರ ಸಾನ್ನಿಧ್ಯದಲ್ಲಿ ಅಲ್ಲದೇ ಗರ್ಭಗುಡಿಯಲ್ಲಿ ದೇವರ ಬದಲು ಪೀಠದ ಮೇಲೆ ಹಸ್ತಪ್ರತಿಗಳ ಕಟ್ಟಗಳನ್ನು ಇಟ್ಟು ಮೇಲೆ ವಸ್ತ್ರವನ್ನು ಹೊದಿಸಿ ನಿತ್ಯವೂ ಪೂಜಿಸುವ ಕ್ರಮ ಈಗಲೂ ನಡೆಯುತ್ತಿದೆ.

....॥ಶ್ರೀರಸ್ತು॥ ಜಿಲ್ಲಾ ಧಾರವಾಡ ಕಸಬ ಮಂಗಳವಾರ ಪೀಟ(=ಪೇಟೆ)ವಿರಕ್ತ ಮಠದಲ್ಲಿ ಬರಸಿದ್ದು ಪ್ರಸಿದ್ಧವೂ[೬] ....ಜಂಬುಕಂಡಿಯ ಬದಿಯ ತೇರದಳವೆಂಬ ಗಾಳಿಪೇಟೆಯಲ್ಲಿ ವಿರಕ್ತ ಮಠದಲ್ಲಿ..... ಬರದ ಪುಸ್ತಕವು ॥ಶ್ರೀ॥[೧೭]

ಜೈನ, ಶೈವ, ವೀರಶೈವ, ವೈದಿಕ ಹೀಗೆ ಎಲ್ಲಾ ಧರ್ಮಿಯರು ತಮ್ಮ ಧರ್ಮದ ತತ್ವಸಿದ್ಧಾಂತಗಳ ಕೃತಿಯನ್ನು ಮತ್ತು ಲೌಕಿಕ ಕೃತಿಗಳನ್ನು ಪುನರುತ್ಪತ್ತಿಯ ಆಶಯದ ನೆಲೆಯಲ್ಲಿ ಹಸ್ತಪ್ರತಿಗಳನ್ನು ಸಂಗ್ರಹ,

ಸಂರಕ್ಷಣೆ, ಸಂವರ್ಧನೆಗೊಳಿಸುತ್ತಾ ಬಂದಿದ್ದಾರೆ. ಬರೀ ಅಲೌಕಿಕ ಗ್ರಂಥಗಳು ಮಾತ್ರವಲ್ಲದೇ ಲೌಕಿಕದಂತಹ ಕೃತಿಗಳನ್ನು ಪುನರುತ್ಪತ್ತಿಗೊಳಿಸುತ್ತ ಲೋಕ ಕಲ್ಯಾಣದ ಜ್ಞಾನರಕ್ಷಣೆಯನ್ನು ಮಾಡುತ್ತಾ ಬಂದಿದ್ದಾರೆ.

ಪ್ರಾಚೀನ ಕನ್ನಡ ಸಾಹಿತ್ಯವೆಂದು ನಾವು ತಿಳಿದಿರುವುದು ಭಾಗ ದೊರೆಯುವುದು ಪ್ರಮುಖವಾಗಿ ತಾಳೆಗರಿಗಳಲ್ಲಿ ಮತ್ತು ಹಳೆಯ ಕಾಗದ ಪ್ರತಿಗಳಲ್ಲಿ. ಇದರ ಸಂಗ್ರಹ ಸಂಪಾದನೆ ಮತ್ತು ಪ್ರಕಟಣೆ ನಡೆದದ್ದು ೧೯ನೆಯ ಶತಮಾನದ ಮಧ್ಯಭಾಗದಿಂದ ಎಂಬುದು ಗಮನಾರ್ಹ. ಆ ಕಾಲದ ಸಾಂಸ್ಕೃತಿಕ ಸಂದರ್ಭ ಅವರ ಮನೋಭಾವನೆ ಮನೋಧರ್ಮವು ಗ್ರಂಥಗಳ ಪುನರುತ್ಪತ್ತಿ ಮತ್ತು ಹೊಸತನವನ್ನು ಪಡೆದಿರುವ ಸಾಧ್ಯತೆಯಿದೆ.

ಭಾರತೀಯ ವಿದ್ಯಾವಂತ ಬುದ್ಧಿಜೀವಿಗಳು ಆ ಯುಗದಲ್ಲಿ ತಮ್ಮ ಕೀಳರಿಮೆಯನ್ನು ನಿವಾರಿಸಿಕೊಳ್ಳು ತಮ್ಮ ಭೂತದ ಮೊರೆಹೊಕ್ಕರು. ಇದಕ್ಕೆ ಮಾಕ್ಸ್‌ಮುಲ್ಲರನಂತಹ ಓರಿಯಂಟಲಿಸ್ಟ್ ವಿದ್ವಾಂಸರು ಸಂಸ್ಕೃತ ಪಠ್ಯಗಳ ಮೂಲಕ ಕಟ್ಟಿಕೊಟ್ಟು ಒಂದು ಫ್ಯಾನ್ ಇಂಡಿಯನ್ ಪರಿಕಲ್ಪನೆ ತುಂಬಾಪ್ರೇರಣೆ ನೀಡಿತು. ಇದು ಬ್ರಿಟಿಷ್ ಭಾರತದ ಶಿಕ್ಷಿತ ವೈದಿಕರಿಗೆ ಮೂಲ ಪ್ರೇರಣೆಯಾಯಿತು. ವೈದಿಕಯುಗದ ಸಾಹಿತ್ಯ ಅವಶೇಷಗಳ ಜ್ಞಾನ, ಇಂಗ್ಲೀಷ್, ಶಿಕ್ಷಣ ಇರದಿದ್ದರೆ ಅಂಥ ಜ್ಞಾನ ಉಪೇಕ್ಷೆಗೆ ಒಳಪಡುತ್ತಿತ್ತು. ಈ ಸಂಗತಿಗಳು ಒಂದು ಭಾವನಾತ್ಮಕ ಸಂಬಂಧದೊಳಗಡೆ ಹಳೆಯ ಪಠ್ಯಗಳನ್ನು ಮರುಸಂಯೋಜಿಸಿ ಕೊಟ್ಟವು.

ಕನ್ನಡ ಗ್ರಂಥಗಳು ಅದು ಶಿಷ್ಟಕಾವ್ಯವಿರಬಹುದು ಜನಪದ ಕಾವ್ಯವಾಗಿರಬಹುದು ಸೃಜನಶೀಲ ನೆಲೆಯಲ್ಲಿ ರಚಿತಗೊಂಡವು. ವಚನಕಾರರ ವಚನ ಸಾಹಿತ್ಯ ದಾಸರ ಕೀರ್ತನ ಸಾಹಿತ್ಯವೂ ಸಾಂಸ್ಕೃತಿಕ ಪಠ್ಯಗಳಾಗಿ ಜೀವಂತ ಪಡೆದಿವೆ. ಶ್ರೇಷ್ಠ ಧಾರ್ಮಿಕ ಕಾವ್ಯ ರಸಾತ್ಮಕ ಕಾವ್ಯ ಅತ್ಯುತ್ತಮಕಾವ್ಯ ಎನ್ನುವ ಮಾನದಂಡಗಳ ಮೂಲಕ ಧಾನ, ಧರ್ಮ ಮತ್ತು ಧರ್ಮ ಪ್ರಸಾರದ ನೆಲೆಯಲ್ಲಿ ಕೆಲವು ಸಾಂಸ್ಕೃತಿಕ ಮತ್ತು ರಾಜಕಾರಣದ ಪ್ರೇರಣೆಯಿಂದ ಪುನರುತ್ಪತ್ತಿ ಹೊಂದುತ್ತಾ ಬಂದವು.

ಕನ್ನಡ ಪ್ರಜ್ಞೆಯನ್ನು ರೂಪಿಸಿದ ಕನ್ನಡಕ್ಕೊಂದು ಆಸ್ತಿತ್ವವನ್ನು ತಂದುಕೊಟ್ಟ 'ಕವಿರಾಜಮಾರ್ಗ' 'ಕಬ್ಬಿಗರಕಾವ' ಕನ್ನಡ ಭಾಷೆ ಸಂಸ್ಕೃತಿಯೂ ವ್ಯಾಪಕ ಚರ್ಚೆಗೆ ಒಳಗಾಗಬೇಕಿತ್ತು. ಆದರೆ ಆಗಲಿಲ್ಲ. ಕಾರಣ ಧಾರ್ಮಿಕ ಎನ್ನುವ ಮತ್ತು ವೈದಿಕ ಹಾಗೂ ವಸಾಹತುಶಾಹಿ ಪ್ರಣೀತ ರಚನೆಗಳನ್ನು ನಿರ್ದಿಷ್ಟ ಆಕಾರದಲ್ಲಿ ಮುಕ್ಕಾಗದಂತೆ ಇಂದಿಗೂ ಪೋಷಿಸಿಕೊಂಡು ಬಂದ ನೆಲೆಗಳೇ ಇವಕ್ಕೆ ಕಾರಣವಿರಬಹುದು. ಹಲವು ಕಾಲ ಘಟ್ಟಗಳಲ್ಲಿ ಕನ್ನಡ ಭಾಷೆ ಸಾಹಿತ್ಯ ತನ್ನನ್ನು ತಾನು ಪುನರ್‌ರಚಿಸಿಕೊಳ್ಳುತ್ತಾ ಬಂದಿದ್ದರೂ ಕನ್ನಡ ಜಾಯಮಾನಕ್ಕೆ ಹೊರತಾದ ಗ್ರಂಥ ಸಂಪಾದನಾ ವಿಧಾನಗಳು ಅದರಲ್ಲಿನ ಪ್ರತಿಭಟನಾ ಮತ್ತು ಪ್ರತ್ಯೇಕತೆಯ ಧ್ವನಿಗಳು ಅಡಗಿಸಿಕೊಂಡು ಬಂದಿವೆ. ಬಹುಮುಖಿಯಾದ ಸಾಂಸ್ಕೃತಿಕ ಸಂಕಥನಗಳು ದೂರಸರಿದು ಶುದ್ಧ ಪಾವಿತ್ರ್ಯ ಎನಿಸುವ ಕೇಂದ್ರೀಕೃತ ಪ್ರವೃತ್ತಿಗಳು ಶುಷ್ಕ ಸಾಹಿತ್ಯ ಸಂಸ್ಕೃತಿಯೊಂದನ್ನು ಹುಟ್ಟಿಹಾಕಿದವು.

ಧಾರ್ಮಿಕ ಜವಾಬ್ದಾರಿಯೂ ಸಾಮಾಜಿಕ ಕಾಳಜಿಯಷ್ಟೆ ಶ್ರೇಷ್ಠವಾದುದು. ಅದರ ರಕ್ಷಣೆ ಹೊಣೆಗಾರಿಕೆಯನ್ನು ಅಗ್ರಹಾರದ ಜೈನಮುನಿಗಳು ದೇವಾಲಯದ ಮಠಮಾನ್ಯಗಳ ಸ್ವಾಮಿಗಳು ಅದರ ಹೊಣೆಗಾರಿಕೆ ಮತ್ತು ಅಧಿಕಾರವಹಿಸುವಾಗ ಆ ಧರ್ಮದ ತತ್ವ ಸಿದ್ಧಾಂತಗಳನ್ನು ಬೋಧಿಸುವ ಕೃತಿಗಳನ್ನು ಆಶೀರ್ವಾದ ರೂಪದಲ್ಲಿ ಕೊಡುವ ಮೂಲಕ ಅವುಗಳ ಪಾಲನೆ, ಪೋಷಣೆ, ಸಂರಕ್ಷಣೆ, ಉತ್ಪಾದನೆ, ಸಂಗೋಪನೆ ಮಾಡುವುದು ಕರ್ತವ್ಯ ನಿಭಾಯಿಸುತ್ತಿದ್ದರು. ಇದರಿಂದ ಧಾರ್ಮಿಕ ಗ್ರಂಥಗಳು ಹೆಚ್ಚಿನ ಸಂಖ್ಯೆಯಲ್ಲಿ ಪುನರುತ್ಪತ್ತಿ ಹೊಂದಿದವು. ಮುಖ್ಯ ಹಾಗೂ ಜೀರ್ಣಗೊಂಡ ಕೃತಿಗಳ ಪ್ರತಿಕಾರ್ಯ ಸದಾ ನಡೆಯುವ ಮೂಲಕ ಹಸ್ತಪ್ರತಿಯ ಮಹತ್ವದ ಕೃತಿಗಳು ಸಂರಕ್ಷಣೆಗೊಳ್ಳುತ್ತಾ ಬಂದಿವೆ.

ಜನಪದ ಪುರಾಣಗಳು ದುಃಖಾಂತ ನಿರೂಪಣೆಯನ್ನು ಶಿಷ್ಟ ಪುರಾಣಗಳು ಸುಖಾಂತ ನಿರೂಪಣೆ ಹೊಂದಿದ್ದು ಪುರುಷ ನಿರೂಪಣೆಯನ್ನು ಶಿಷ್ಟ ಸಾಹಿತ್ಯ ಕೃತಿಯಲ್ಲಿ ನೋಡಬಹುದು. ಜನಪದ ಪುರಾಣದಲ್ಲಿ ಮಹಿಳಾ ನಿರೂಪಕಿಯರು ಕಂಡುಬರುತ್ತಾರೆ. ನಿರೂಪಣಾ ಮಾದರಿಯಲ್ಲಿ ಕೃತಿಗಳು ಬೇರೆ ಬೇರೆ ರಸದ ಅಂಶಗಳನ್ನು ಹೊಂದುತ್ತಾ ರಚನೆಗೊಳ್ಳುತ್ತವೆ. ಜನಪದ ಮತ್ತು ಶಿಷ್ಟ ಪುರಾಣದಲ್ಲಿ ನಿರೂಪಣ ಭಿನ್ನತೆಯ ಜೊತೆಗೆ ಪುರುಷ-ಸ್ತ್ರೀ ದುಃಖಾಂತ ಸುಖಾಂತದ ಅಂಶಗಳು ಕಂಡು ಬರುತ್ತವೆ. ಒಂದೇ ಕೃತಿ ಎರಡು ಮಾದರಿಯಲ್ಲಿ ನಿರೂಪಿತಗೊಳ್ಳುವ ಮೂಲಕ ಮತ್ತೆ ಮತ್ತೆ ಚಲನಶೀಲತೆಯಿಂದ ಪುನರುತ್ಪತ್ತಿ ಹೊಂದುತ್ತಾ ಹೋಗುತ್ತದೆ. ಹೀಗೆ ಜ್ಞಾನ ಸಂರಕ್ಷಣೆ ಹಾಗೂ ಪ್ರಸಾರದ ವಿಚಾರದಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಮೌಖಿಕ ಕೃತಿಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಶಿಷ್ಟ ಸಾಹಿತ್ಯ ಮನುಷ್ಯನ ಬಾಹ್ಯ ಸೌಂದರ್ಯವನ್ನು ಹೇಳಿದರೆ ಜನಪದ ಸಾಹಿತ್ಯದ ಕೂಡಿಬಾಳುವ ವಿಚಾರಗಳನ್ನು ಬಿಂಬಿಸುವ ಮನುಷ್ಯನ ಅಂತರಾತ್ಮದ ನಿವೇದನೆಯ ಪ್ರತೀಕವಾಗಿ ಕಾಣುತ್ತದೆ.

ವಿಜಯನಗರದಲ್ಲಿ ಅಂದು ನಡೆದ ವೀರಶೈವ ಧರ್ಮದ ಪುನರುಜ್ಜೀವನ ಕಾರ್ಯದಲ್ಲಿ ಪಾಲ್ಗೊಳ್ಳಲೆಂದು ಪ್ರೌಢದೇವರಾಯನ ಆಸ್ಥಾನಕ್ಕೆ ಬಂದು ತನ್ನ ಶಿವಾನುಭವ ವಿದ್ಯೆಯಿಂದಲೂ, ಪ್ರಖರವಾದ ಪಾಂಡಿತ್ಯ ಬಲದಿಂದಲೂ ಪರವಾದಿಗಳನ್ನು ಜಯಿಸಿ ಅಲ್ಲಿಯೆ ನೆಲೆಸಿದಂತೆ ತೋರುತ್ತದೆ. ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಸಾಹಿತ್ಯ ಪುನರುತ್ಪತ್ತಿ ನೆಲೆಯಲ್ಲಿ ವಚನಸಂಕಲನ, ಸ್ಥಲಕಟ್ಟು ನಿಯೋಜನ ಸಿದ್ಧಾಂತ ಪ್ರತಿಪಾದನ, ಸೂತ್ರರಚನೆ, ವ್ಯಾಖ್ಯಾನ ಟೀಕೆಟಿಪ್ಪಣೆಗಳ ನಿರ್ಮಾಣ ಮಾಡಲಾಯಿತು. ಹೀಗಾಗಿ ವೀರಶೈವ ಧರ್ಮದ ಕೃತಿಗಳ ಸರ್ವರೀತಿಯ ಅಭಿವೃದ್ಧಿ ಕಾರ್ಯ ನಡೆಯಿತು. ಮಹಾಲಿಂಗದೇವ ಪರಮವೀರಶೈವಾಗ-ಮಾಚಾರ್ಯರಂ ಸಕಲ ಪ್ರಸಾದ ಪಂಚಾಕ್ಷರಿ ಮಂತ್ರಸಿದ್ಧರುಂ; ನಿತ್ಯ ಪರಿಪೂರ್ಣ ಸಚ್ಚಿದಾನಂದ ನಿರಂಜನ ಪರಂಜೋತಿ ಸ್ವರೂಪರುಮಪ್ಪ ಪರಮ ಗುರುಮೂರ್ತಿ ಜಗದಾರಾಧ್ಯರೂಮಪ್ಪ ಮಹಾಲಿಂಗದೇವರ ಅನಾದಿ ಸಂಸಿದ್ಧ ಗುರುಕುಲದನ್ವಯವೆಂತೆಂದಡೆ. ಮಹಾಲಿಂಗದೇವ ಏಕೋತ್ತರ ಷಟ್‌ಸ್ಥಲ ವಚನ ಸಂಕಲನ ಮಾಡಿದರೆ. ಜಕ್ಕಣಾರ್ಯ ಅಲ್ಲಿನ ಹಾಡುಗಳನ್ನೆಷ್ಟೇ ಪ್ರತ್ಯೇಕವಾಗಿಸಿ ನೂರೊಂದು ಸ್ಥಲವಾಗಿ ರಚಿಸಿದ್ದಾನೆ. ಶ್ರೀ ಗಿರೀಂದ್ರ ಆ ನೂರೊಂದು ಸ್ಥಲಕ್ಕೆ ವ್ಯಾಖ್ಯಾನ ಮಾಡಿದ್ದಾನೆ. ಕಲ್ಲುಮಠದ ಪ್ರಭುದೇವ-

ವಚನ ಸಂಕಲನ ವ್ಯಾಖ್ಯಾನಕಾರನೂ ಆಗಿದ್ದನು. ಹೀಗಾಗಿ ವಚನಕಾರರ ವಚನಗಳು ಧಾರ್ಮಿಕತೆಯ ಮನೋಭಾವನೆಯ ಜೊತೆಗೆ ಸಾಮಾಜಿಕವಾಗಿ ಗ್ರಂಥಗಳು ಪುನರುತ್ಪತ್ತಿ ಹೊಂದುತ್ತಾ ಬಂದಿವೆ. ಇಂಥ ಪುನರುತ್ಪತ್ತಿಯ ಆಶಯಗಳನ್ನು ಕನ್ನಡ ಸಾಹಿತ್ಯವಲ್ಲದೆ ಜಗತ್ತಿನ ಎಲ್ಲ ಭಾಷಾ ಸಾಹಿತ್ಯದಲ್ಲಿಯೂ ನೋಡಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಅಮರೇಶ ನುಗಡೋಣಿ(ಸಂ); ಕನ್ನಡ ಅಧ್ಯಯನ: ಸಂಪಾದಕ ಮಾತು, ಸಂ.೧೪, ಸಂ.೧;೨೦೦೮
೨. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು; ಪು.೩೩, ೨೦೦೬
೩. ಅದೇ, ಪು.೨೧, ೨೦೦೬
೪. OML, Vol.III, ಕ್ರ.ಸಂ.೪೧೯
೫. KRI, Vol.I, ಕ್ರ.ಸಂ.೨
೬. OML, Vol.V, ಗ್ರ.ಸಂ.೯೪೬
೭. ಉಧೃತ: ಹಿರೇಮಠ ಬಿ.ಕೆ., ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ; ಪು.೧೪೧, ೧೪೨, ೧೯೯೪
೮. ವೀರೇಶ ಬಡಿಗೇರ, ಹಲಗೆ ಬಳಪ, ಪು.೬೮, ೨೦೦೫
೯. ಅದೇ, ಪು.೩೪, ೨೦೦೫
೧೦. ಅದೇ, ಪು.೩೫, ೨೦೦೫
೧೧. ಕನ್ನಡ ಅಧ್ಯಯನ, ಸಂ.೧೪, ಸಂ.೧೦, ಸಂಪಾದನೆ. ನುಗಡೋಣಿ ಮುನ್ನೂರು ರಾಮಾಯಣಗಳು, ಅನು. ಪ್ರೊ.ಮಹಾಬಲೇಶ್ವರರಾವ್
೧೨. ಭೂಸನೂರಮಠ ಸಂ.ಶಿ(ಸಂ), ಪ್ರಭುದೇವರ ಶೂನ್ಯಸಂಪಾದನೆ. ಪ್ರಕಾಶಕರ ಮಾತು
೧೩. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು; ಪು.೬೩, ೨೦೦೬
೧೪. ಅದೇ, ಪು.೧೫, ೨೦೦೬
೧೫. OML, Vol.II, ಗ್ರ.ಸಂ.೩೫೪
೧೬. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಸೂಚಿ, ಸಂ.೩ ಕ್ರ.ಸಂ.೧೦೨೬
೧೭. ಅದೇ, ಸಂ.೫, ಕ್ರ.ಸಂ.೧೯೦



## ಅಧ್ಯಾಯ ಎಂಟು

# ಸಂರಕ್ಷಣೆ ಹಾಗೂ ವಿವಿಧ ಬರಹ ಮಾಧ್ಯಮಗಳು

ಮನುಷ್ಯ ತನ್ನ ಅಭಿವ್ಯಕ್ತಿಗಾಗಿ ಮೊದಲು ಕಂಡುಕೊಂಡಿದ್ದು ಚಿತ್ರ ಸಂಕೇತ ಅಭಿನಯ. ನಂತರ ಮಾತು ಅದರ ಮುಂದುವರೆದ ರೂಪವಾಗಿ ಲಿಪಿಯನ್ನು ಬಳಸತೊಡಗಿದ ಲಿಪಿ ಬರಹ ರೂಪಕ್ಕೆ ತಿರುಗಿದಾಗ ಅನೇಕ ಮಾಧ್ಯಗಳನ್ನು ಬರಹಕ್ಕಾಗಿ ಬಳಸಿಕೊಳ್ಳುತ್ತಾ ಬಂದನು. ಅದೇ ರೀತಿ ಕಾಲದಿಂದ ಕಾಲಕ್ಕೆ ಜ್ಞಾನದ ಪರಿಕರಿಗಳೂ ಅದರ ಸಂರಕ್ಷಣೆಯ ವಿಧಿವಿಧಾನಗಳೂ ಬದಲಾಗುತ್ತಾ ಬಂದವು. ಬರಹದ ಅಧಿಕೃತೆಯ ನೆಲೆಯಲ್ಲಿ ಜ್ಞಾನವನ್ನು ಒಂದು ಮೂರ್ತರೂಪದಲ್ಲಿ ಹಿಡಿದಿಡುವ ಸಾಮಗ್ರಿಗಳನ್ನು ಮನುಷ್ಯ ಕಂಡುಕೊಂಡನು. ಮಣ್ಣು ಮರಳು, ಲೋಹ ಕಟ್ಟಿಗೆ, ಕಬ್ಬಿಣ, ಶಿಲ್ಪ–ಶಾಸನ, ತಾಳೆಗರಿ–ಕಾಗದ ಇಂದು ಕಂಪ್ಯೂಟರ್ ಮಾಧ್ಯಮಗಳನ್ನು ಬರಹಕ್ಕೆ ಬಳಸಿಕೊಳ್ಳುತ್ತ ಬಂದ ಹಸ್ತಪ್ರತಿಗಳು, ಬಖೈರು, ಕೈಪಿಯತ್ತು, ನಾಮೆ, ಕಡತ, ತಾಮ್ರಪತ್ರ, ಬಿದಿರು, ಕಾಗದ, ಕೋರಿ ಕಾಗದದಂತವು ಜ್ಞಾನವನ್ನು ಮೂರ್ತ ರೂಪದಲ್ಲಿ ಹಿಡಿದಿಡುವ ಮತ್ತು ಸಂರಕ್ಷಣೆ ಮಾಡಲು ಸಹಕಾರಿಯಾಗಿ ಸಾಗಿಬಂದವು.

ಕಲ್ಲಿನ ಮೇಲೆ ಕೆತ್ತಿದ ಬರಹವನ್ನು ಶಾಸನವೆಂದೂ ತಾಳೆಗರಿ, ಕಾಗದ ಮತ್ತು ಕೋರಿಕಾಗದ ಮೇಲೆ ಬರೆದದ್ದನ್ನು ಗ್ರಂಥ ಅಥವಾ ಹೊತ್ತಿಗೆ ಎಂದು ಕರೆಯಲಾಗಿದೆ. ಮೂಲತಃ ಇವುಗಳೆಲ್ಲ ಬರಹ ಸಾಮಗ್ರಿಗಳೇ ಆಗಿದ್ದರೂ ಲೇಖನದ ಉದ್ದೇಶ ಮತ್ತು ಲೇಖನ ಸಾಮಗ್ರಿಯ ಭಿನ್ನತೆಗಳು ಈ ವ್ಯತ್ಯಾಸಗಳನ್ನುಂಟು ಮಾಡಿವೆ. ಡಾ.ಎಂ.ಎಂ. ಕಲಬುರ್ಗಿಯವರು ತಮ್ಮ ಹಸ್ತಪ್ರತಿಗಳು ಅದರ ವಿವಿಧ ಮುಖಗಳು ಎಂಬ ಲೇಖನದಲ್ಲಿ ಇನ್ನುಳಿದ ಬರಹದ ದಾಖಲೆಗಳಿಂದ ಹಸ್ತಪ್ರತಿಗಳನ್ನು ಬಿಡಿಸಿ ತೋರಿಸುವ ಮೊದಲ ಪ್ರಯತ್ನ ಮಾಡಿದರು. ಹಸ್ತಪ್ರತಿಯೆಂದರೇನು? ಎಂಬ ಪ್ರಶ್ನೆಯನ್ನೆತ್ತಿ ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ಭೌತಿಕ ಮತ್ತು ಸಾಂಸ್ಕೃತಿಕ ಜ್ಞಾನ ಸಂಪತ್ತು. ಒಂದು ಕಾಲಕ್ಕೆ ಶ್ರುತಿ ಪಾತಳಿಯಿಂದ ಲಿಪಿ ಮಾಧ್ಯಮದ ಮೂಲಕ ಕೃತಿ ಪಾತಳಿಗೆ ಇಳಿದು ಬಂದಿತು. ಮುಂದೆ ಈ ಕೃತಿಸಾಹಿತ್ಯ ಅಲ್ಪಕಾಲದಲ್ಲಿ ಅಳಿದುಹೋಗುವ, ಬಹುಕಾಲ ಉಳಿದು ನಿಲ್ಲುವ ಮಾರ್ಗದಲ್ಲಿಯೇ ಶಿಲೆ, ಸುಟ್ಟ ಮಣ್ಣು, ಲೋಹಫಲಕಗಳಂಥ ಹಾಗೂ ಭಾರವಾದ ವಸ್ತುವಲ್ಲದ ವಸ್ತ್ರಪಟ, ವೃಕ್ಷಪತ್ರ, ಕಾಗದಗಳಂಥ ಹಗುರು ವಸ್ತುಗಳ ಮೇಲಿನ ಕೈಬರಹಗಳು ಮಾತ್ರ ಹಸ್ತಪ್ರತಿಗಳ ವರ್ಗದಲ್ಲಿ ಸೇರುತ್ತವೆ ಎಂದು ಹೇಳುತ್ತಾರೆ.[೧]

ಹಸ್ತಪ್ರತಿಗಳೆಂದೂ ಗುರುತಿಸುವಲ್ಲಿ ಕೈಯಿಂದ ಬರೆಯಲಾದವು(Hand Transcription) ಎಂಬುದನ್ನು ಎಸ್.ಎಂ. ಕತ್ರೆಯವರು ಹೇಳುತ್ತಾರೆ. ಪ್ರಾಚೀನ ಎಲ್ಲ ಬರವಣಿಗೆಗಳನ್ನು ಸಾಮಾನ್ಯವಾಗಿ ಹಸ್ತಕೌಶಲದಿಂದಲೇ ಕೆತ್ತಿ, ಗೀರಿ, ಲೇಪಿಸಿ ಬರೆದುದು ಕಂಡುಬರುತ್ತಿರುತ್ತದೆ. ಓಲೆಗರಿ ಕಾಗದಗಳ ಮೇಲೆ ಬರೆಯಲಾದವುಗಳನ್ನು ಮಾತ್ರ ಹಸ್ತಪ್ರತಿಗಳಂದೇಕೆ ಗುರುತಿಸಬೇಕು? ಲೋಹ ಮತ್ತು ಲೋಹೇತರ ಸಾಮಗ್ರಿಯ ಮೇಲೆ ಕೈಯಿಂದ ಬರೆದ ಎಲ್ಲವನ್ನು ಹಸ್ತಪ್ರತಿಗಳೆಂದೇಕೆ ಗುರುತಿಸಿಲ್ಲವೆಂದು ಹೇಳುತ್ತಾರೆ.

ಯಾವ ಸಾಮಗ್ರಿಯ ಮೇಲೆ ಅಕ್ಷರಗಳನ್ನು ಮೂಡಿಸಲಾಗುತ್ತಿತ್ತೋ ಅದನ್ನು ಆಧಾರ ಸಾಮಗ್ರಿ ಎಂದು ಕರೆಯಲಾಗುತ್ತದೆ. ಇದು ಬರವಣಿಗೆಗೆ ಯೋಗ್ಯವೂ ಸಮತಲವೂ ಆಗಿದ್ದು, ಹೆಚ್ಚುಕಾಲ ಬಾಳಿಕೆ ಬರುವಂತಹದಾಗಿರಬೇಕು. ಬರವಣಿಗೆಯ ಸಾಮಗ್ರಿಯಲ್ಲಿ ಎರಡು ವಿಧಗಳಿವೆ. ೧) ಲೋಹ ಸಾಮಗ್ರಿಗಳು ಕಬ್ಬಿಣ, ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಂಚು. ೨) ಲೋಹೇತರ ಸಾಮಗ್ರಿಗಳು: ತಾಳೆಗರಿ, ಭೂರ್ಜಪತ್ರ, ಮಣ್ಣಿನಿಂದ ತಯಾರಿಸಲಾದ ವಸ್ತುಗಳು, ಚರ್ಮ, ಮರ, ಕಾಗದ ಮುಂತಾದವುಗಳು. ಆಧಾರ, ಆಧೇಯ, ಲೇಪನ ನೆಲೆಯಲ್ಲಿ ಬರಹ ಸಾಮಗ್ರಿಗಳು ವಿಂಗಡಣೆ ಮಾಡುವುದನ್ನು ಕಾಣಬಹುದು. ಯಾವುದರ ಸಹಾಯದಿಂದ ಹಸ್ತಪ್ರತಿಗಳ ಮೇಲೆ ಬರೆಯುವುದಕ್ಕೆ ಸಾಧ್ಯವೋ ಅವುಗಳಿಗೆ ಆಧೇಯ ಸಾಮಗ್ರಿ ಎಂದು ಕರೆಯುವರು. ಉದಾ: ಕಬ್ಬಿಣ, ಕಂಠ, ಗಲಗು ನವಿಲು ಗರಿ, ಕುಂಚ, ಬಿದಿರು. ಬರಹದ ಸ್ಪುಟತ್ವಕ್ಕಾಗಿ ಬಳಸುವ ಸಾಮಗ್ರಿಯನ್ನು ಲೇಪನ ಸಾಮಗ್ರಿ ಎಂದು ಕರೆಯಲಾಗುತ್ತದೆ. ಉದಾ: ಮಸಿ, ವರ್ಣ, ಬಳಪ, ಕಪ್ಪು, ಕಾಡಿಗೆ.

ಹಸ್ತಪ್ರತಿಗಳ ಮೂಲಕ ಇದುವರೆಗೂ ಕನ್ನಡ ಸಾಹಿತ್ಯ ಸಂಸ್ಕೃತಿ ಧಾರ್ಮಿಕ ಸಾಮಾಜಿಕದಂತಹ ಅಂಶಗಳು ಉಳಿದುಬಂದಿವೆ. ಭಾರತದಲ್ಲಿ ದೊರೆಯುವ ಬರವಣಿಗೆ ಭಿನ್ನ ಭಿನ್ನ ಸಾಮಗ್ರಿಯ ಚರಿತ್ರೆ ಕುತೂಹಲವಾದುದು. ಅಲಭ್ಯದ ಕಾರಣಕ್ಕಾಗಿಯೋ, ಲೇಖನ ಸುಲಭವಾಗಲಿಲ್ಲವೆಂದೋ ತಾಳಿಕೆ-ಬಾಳಿಕೆಯ ದೃಷ್ಟಿಯಿಂದಲೋ ಯೋಗ್ಯವಾದ ಹೊಸ ಹೊಸ ಲೇಖನ ಸಾಮಗ್ರಿಗಳನ್ನು ಹುಡುಕಿಕೊಂಡು ಆವಿಷ್ಕರಿಸಿರುವ ಸಾಧ್ಯತೆಯಿದೆ. ಶಾಸನ ಹಸ್ತಪ್ರತಿಗಳಿಂದ ಹಿಡಿದು ಈಗಿನ ಕಂಪ್ಯೂಟರನಂತಹ ಒಂದು ದೊಡ್ಡ ಬದಲಾವಣೆಯ ಚರಿತ್ರೆಯನ್ನು ಕಾಣಬಹುದಾಗಿದೆ. ಹಸ್ತಪ್ರತಿ ಕಾಗದ ಭೂರ್ಜ್ವಪತ್ರದಂತಹ ಮಹತ್ವದ ಲೇಖನ ಸಾಮಗ್ರಿಯಲ್ಲಿ ಗ್ರಂಥಗಳ ರೂಪದಲ್ಲಿ ಜ್ಞಾನವನ್ನು ಸಂರಕ್ಷಿಸುತ್ತಾ ಬಂದಿದ್ದಾರೆ. ಮೊದಲು ಶಿಲೆ, ಸುಡಾಣಿ, ಮರದ ಫಲಕ, ವಸ್ತ್ರ, ಹಸ್ತಪ್ರತಿ, ಕಾಗದ, ಕೋರಿಕಾಗದ ಈ ಬರಹ ಸಾಮಗ್ರಿಯಲ್ಲಿ ತಾಳೆಗರಿ ಹಸ್ತಪ್ರತಿ ಹೆಚ್ಚಿನ ಕಾಲದವರೆಗೆ ಮತ್ತು ಹೆಚ್ಚು ಪ್ರಭಾವಶಾಲಿಯಾಗಿ ಕೆಲಸ ಮಾಡಿದೆ. ಕರ್ನಾಟಕದ ಹಸ್ತಪ್ರತಿಗಳ ಚರಿತ್ರೆಯಲ್ಲಿ ಇದು ಬರಹ ಸಾಮಗ್ರಿಯಲ್ಲಿ ಸಿಂಹಪಾಲನ್ನು ಪಡೆದುಕೊಂಡಿದೆ.

**೮.೧. ತಾಳೆಗರಿ**

"ಭಾರತ ಮತ್ತು ಅದರ ಪ್ರಭಾವಕ್ಕೊಳಗಾದ ಆಗ್ನೆಯ ಏಶಿಯಾ ರಾಷ್ಟ್ರಗಳಲ್ಲಿ ಮೊದಲಿನಿಂದಲೂ ತಾಳೆಗರಿ ಅತ್ಯಂತ ಜನಪ್ರಿಯವಾದ ಬರಹ ಸಾಮಗ್ರಿಯೆನಿಸಿದೆ. ಕ್ರಿ.ಶ. ೭ನೆಯ ಶತಮಾನದಲ್ಲಿ ಭಾರತಕ್ಕೆ

ಭೇಟಿ ನೀಡಿದ ಚೀನಿ ಯಾತ್ರಿಕ ಹುಯೆನ್‌ತ್ಸಾಂಗ್ ಹಸ್ತಪ್ರತಿಗಳ ವ್ಯಾಪಕವಾದ ಬಳಕೆಯ ಬಗ್ಗೆ ಉಲ್ಲೇಖಿಸುತ್ತಾನೆ. ದಕ್ಷಿಣ ಭಾರತದ ಕೊಂಕಣಪುರದ ಬಳಿ ತಾಳೆಗರಿಗಳ ಒಂದು ಕಾಡೇ ಇತ್ತು. ಅಲ್ಲದೇ 'ಒಂದು ಬೌದ್ಧ ಸ್ತೂಪದ ಸುತ್ತಲೂ ಅದು ಆವರಿಸಿಕೊಂಡಿತ್ತು ಎಂದಿದ್ದಾನೆ. ಹೂಯೆನ್‌ತ್ಸಾಂಗನ ಹೇಳಿಕೆಯಲ್ಲಿ ಸತ್ಯಾಂಶ ಇಲ್ಲದಿಲ್ಲ. ಬೌದ್ಧಮಠಗಳು ಪುಸ್ತಕಗಳನ್ನು ಹೊರತರುವ ಕೇಂದ್ರಗಳಾಗಿದ್ದವು. ಹಾಗಾಗಿ ಸುತ್ತಮುತ್ತಲಿನಲ್ಲಿ ಸಾಕಷ್ಟು ಬರವಣಿಗೆ ಸಾಮಗ್ರಿಗಳನ್ನೊದಗಿಸುವ ಗಿಡಗಳನ್ನು ಬೆಳೆಯಿಸಿದ್ದರೆ ಆಶ್ಚರ್ಯವೇನಿಲ್ಲ. ಪ್ರಾಚೀನ ಈಜಿಪ್ತಿನಲ್ಲಿ ಸಹ ಪೆಪಿರಸ್ ತೋಟಗಳನ್ನು ಬೆಳೆಸುವುದು ರೂಢಿಯಲ್ಲಿತ್ತು".[೨]

ಅತ್ಯಂತ ಪ್ರಾಚೀನ ತಾಳೆಗರಿಯ ನಮೂನೆಗಳು ಭಾರತದಿಂದ ಹೊರಗಡೆ, ಅಂದರೆ ಭಾರತಕ್ಕಿಂತ ಇನ್ನೂ ಉತ್ತಮ ವಾಯುಗುಣ ಪರಿಸ್ಥಿತಿಯುಳ್ಳ ಮಧ್ಯ ಏಶಿಯಾ(ಕ್ರಿ.ಶ. ೨ನೆಯ ಶತಮಾನ) ಹಾಗೂ ಜಪಾನುಗಳಲ್ಲಿ ದೊರೆಯಲು ಇದೂ ಒಂದು ಕಾರಣ. ಪ್ರಾಚೀನ ಹಸ್ತಪ್ರತಿಗಳನ್ನು ನಿರಂತರವಾಗಿ ಪ್ರತಿ ಮಾಡುವುದರಿಂದ ಹಾಗೂ ಲಿಪಿಕಾರ ಮತ್ತು ಆಶ್ರಯದಾತರ ನಿರಂತರ ಪ್ರಯತ್ನಗಳಿಂದಾಗಿ ಹಸ್ತಪ್ರತಿಗಳು ಹಾಳಾಗದೆ ಉಳಿದುಕೊಂಡು ಬಂದಿವೆ. 'ಬೌದ್ಧರು ಮತ್ತು ಜೈನರು ಕ್ರಿಪೂ.೬ನೆಯ ಶತಮಾನದ ವೇಳೆಗೆ ತಮ್ಮ ಧರ್ಮಗ್ರಂಥಗಳನ್ನು ತಾಳೆಗರಿಯ ಮೇಲೆ ಬರೆಯುವುದನ್ನು ರೂಢಿ ಮಾಡಿಕೊಂಡಿದ್ದರು. ಹಿಂದೂ ಬ್ರಾಹ್ಮಣ ಪುರೋಹಿತ ವರ್ಗದವರು ಜಾತಿ ಪದ್ಧತಿಯಲ್ಲಿ ಜ್ಞಾನ ಭಂಡಾರದ ತಮ್ಮ ಏಕಸ್ವಾಮ್ಯಕ್ಕೆ ದಕ್ಕೆ ಬರುತ್ತದೆಂಬ ಭಯವಿದ್ದರೂ ತಮ್ಮ ಧರ್ಮಗ್ರಂಥಗಳನ್ನು ದಾಖಲಿಸಬೇಕಾಯಿತು. ಏಕೆಂದರೆ ಅಪಾರವಾಗಿ ಹೊರಬಂದ ಟೀಕೆಗಳು ವ್ಯಾಖ್ಯಾನಗಳು ಮನುಷ್ಯನ ಜ್ಞಾಪಕಶಕ್ತಿಯ ನೆಲೆಕಟ್ಟನ್ನು ಮೀರಿ ಬೆಳೆದು ನಿಂತಿದ್ದವು. ಕ್ರೈಸ್ತ ಪಂಚಾಂಗದ ಪ್ರಕಾರ ಮೊದಲ ಸಹಸ್ರ ವರ್ಷಗಳಲ್ಲಿ ಆಗ್ನೇಯ ಏಶಿಯಾದಾದ್ಯಂತ ಒಂದು ರೀತಿಯ ಹೊರಗಿನ ಸಾಂಸ್ಕೃತಿಕ ಪ್ರಭಾವ ಬೀಳತೊಡಗಿತು".[೩]

ಮೂರು ಬಗೆಯ ತಾಳೆಗರಿಗಳ ಬಳಕೆ ಭಾರತದಲ್ಲಿ ಕಂಡುಬರುತ್ತದೆ.

೧. ತಾಲಿಪಟ್ ತಾಳೆಗರಿ(Corypha Umbra Celifear)

೨. ಪಾಲ್ಮಿರಾ ತಾಳೆಗರಿ(Borassus Flabellifer)

೩. ಆಗ್ನೇಯ ಏಶಿಯಾದಲ್ಲಿ ವಿಶೇಷವಾಗಿದ್ದ ಲಾಂಟಾರ್ ತಾಳೆಗರಿ(Corypha ubon)

"ತಾಳೆಗರಿಗಳು ಮಧ್ಯದಲ್ಲಿ ಅಗಲವಾಗಿ ಕೊನೆಯಲ್ಲಿ ಚೂಪಾಗಿ ಇರುತ್ತವೆ. ಪಾಲಿಪಟ್ ಎಲೆಗಳು ಉದ್ದವಾಗಿದ್ದು, ಅಗಲವಾಗಿದ್ದು ಮಧ್ಯದಲ್ಲಿ ಅಡ್ಡಡ್ಡವಾಗಿ ಒಂದು ಗೆರೆ ಹರಿದಿರುತ್ತದೆ. ಪಾಲ್ಮಿರಾ ಎಲೆ ಬಹಳ ಹೆಚ್ಚೆಂದರೆ ಒಂದೂವರೆ ಅಂಗುಲಗಳಷ್ಟು ಅಗಲವಾಗಿದ್ದು ಒಂದು ರೀತಿಯ ಸ್ವಲ್ಪ ಉಬ್ಬು ಮೇಲ್ಮೆಯನ್ನು ಹೊಂದಿರುತ್ತದೆ. ಲಾಂಟಾರ್ ಎಲೆಗಳು ಇನ್ನೂ ಶ್ರೇಷ್ಠ ಮಟ್ಟದ್ದೆಂದು ತೋರುತ್ತದೆ".[೪]

ಬರೆಯಲು ಯೋಗ್ಯವಾಗುವಂತೆ ತಾಳೆಗರಿಗಳನ್ನು ಸಂಸ್ಕರಿಸುವುದು ಒಂದು ವಿಶೇಷ ಪರಿಣತಿಯಾಗಿತ್ತು. ಕಾರಣ ಬರೆಹ ಹಾಗೂ ಅದರ ಸಂವಹನ ಎಷ್ಟು ಮುಖ್ಯವಾಗಿತ್ತೋ ಅದನ್ನು ಗರ್ಭೀಕರಿಸುವ ಮಾಧ್ಯಮದ ಉತ್ತಮಿಕೆ ಹಾಗೂ ಸಂರಕ್ಷಣೆಯ ಹೊಣೆ ಅದಕ್ಕಿಂತಲೂ ಮಿಗಿಲಾಗಿತ್ತು. ಕಾರಣ ಬರಹದ

ಪೂರ್ವದಲ್ಲಿಯೇ ಬರಹ ಮಾಧ್ಯಮವನ್ನು ಹೆಚ್ಚು ಬಾಳಿಕೆ ಬರುವಂತೆ ಮುತುವರ್ಜಿಯಿಂದ ತಯಾರಿಸಲಾಗುತ್ತಿತ್ತು. ಪ್ರತಿಯೊಂದು ಎಲೆಯನ್ನು ಮಧ್ಯದ ಕಾಂಡದಿಂದ ಕಿತ್ತು, ಸರಿಯಾದ ಆಕಾರಕ್ಕೆ ಕತ್ತರಿಸಿ, ನೆನೆಹಾಕಿ, ಕುದಿಸಬೇಕಾಗುತ್ತದೆ. (ಹಾಲು ಅಥವಾ ನೀರಿನಲ್ಲಿ) ಹೀಗೆ ಕುದಿಸಿದ ಗರಿಗಳನ್ನು ಮತ್ತೆ ಮತ್ತೆ ಒಣಗಿಸಿ ಕಡೆಯಲ್ಲಿ ನಯವಾಗುವಂತೆ ಕವಡೆ ಚಿಪ್ಪಿನಿಂದಲೋ ಅಥವಾ ನುಣುಪಾದ ಕಲ್ಲಿನಿಂದಲೊ ಉಜ್ಜಬೇಕು. ಹಸ್ತಪ್ರತಿಯ ಪ್ರತಿಯೊಂದು ಹಾಳೆಯನ್ನು ಎರಡು ಮರದ ಕಟ್ಟಗಳ ನಡುವೆ ಸೇರಿಸಿ ಒಂದು ಕಡೆ ಅಥವಾ ಎರಡು ಕಡೆ ದಾರದಿಂದ ಪೋಣಿಸಿ ಅನಂತರ ಅದೇ ದಾರವನ್ನು ಇಡೀ ಗ್ರಂಥದ ಸುತ್ತಲೂ ಸುತ್ತುತ್ತಿದ್ದರು. ಈ ಕಟ್ಟುಗಳನ್ನು ಬರವಣಿಗೆ ಬೇಕಾದಾಗ ಬಳಸಲಾಗುತ್ತಿತ್ತು. ಅಲ್ಲದೇ ಹಸ್ತಪ್ರತಿಗಳನ್ನು ಹೊಗೆಯಗಿಂಡಿಯಲ್ಲಿ ಇಡುತ್ತಿದ್ದರು. ಇದರಿಂದ ಹಸ್ತಪ್ರತಿಗಳನ್ನು ಸಂರಕ್ಷಿಸುವ ಕಾರ್ಯ ನಡೆಯುತ್ತಿತ್ತು.

"ಕುಂಭಕೋಣಂಕ್ಕೆ ಸೇರಿದ ಅರುಣಾಚಲಂ ಎಂಬ ಕವಿಯು 'ತಾಳ ವಿಲಾಸ' ಎಂಬ ತಮಿಳು ಪದ್ಯ ಗ್ರಂಥವನ್ನೇ ರಚಿಸಿದ್ದು ತಿಳಿಯುತ್ತದೆ. ಇದರಲ್ಲಿ ಅವನು ವರ್ಣಿಸುವ ಒಂದಾಗಿದೆ. ತಮಿಳು ನಾಡೇ ತಾಳವೃಕ್ಷಗಳಿಗೆ ತೊಟ್ಟಿಲು ಎನ್ನುವ ಈ ಕವಿಯ ಅಭಿಮಾನವು ಮೆಚ್ಚುವಂತಹದೆ. ಆದರೆ ತಾಳೆವೃಕ್ಷದ ಭೌಗೋಳಿಕ ವ್ಯಾಪ್ತಿ "ದಕ್ಷಿಣ ಭಾರತದ ಕಡಲು ತೀರಗಳಿಂದ ಹಿಡಿದು ಪಶ್ಚಿಮದಲ್ಲಿ ಗುಜರಾತ್ ಮೂಲಕ ಪಂಜಾಬ್‌ವರೆಗೂ ಹರಡಿ ಪಶ್ಚಿಮದಲ್ಲಿ ಬಂಗಾಳದವರೆಗೂ ವಿಸ್ತರಿಸಿದೆ. ಈ ಎಲ್ಲ ಪ್ರದೇಶಗಳಲ್ಲಿಯೂ ಒಂದೇ ಸಲ ಹಬ್ಬಿಕೊಂಡಿತು". "ತಾಳೆಯೋಲೆ ದಕ್ಷಿಣ ಭಾರತದಲ್ಲಿಯೂ ಆಗ್ನೇಯ ಪ್ರಾಂತಗಳಲ್ಲಿಯೂ ಬಹುಕಾಲದಿಂದಲೂ ಬರಹದ ಪತ್ರವಾಗಿ ಖ್ಯಾತಿ ಪಡೆದಿದೆ"[೫] ಹೀಗಾಗಿ ತಾಳೆಗರಿ ಭಾರತದ ತುಂಬೆಲ್ಲಾ ಬರಹ ಸಾಮಗ್ರಿಯಾಗಿ ಜ್ಞಾನದ ಸಂರಕ್ಷಣೆ ಸಂವರ್ಧನೆಯಲ್ಲಿ ಪ್ರಮುಖ ಪಾತ್ರವಹಿಸಿದೆ.

ಕನ್ನಡ ನಾಡು ಕೂಡ ತಾಳೆಮರಗಳ ಬೆಳವಣಿಗೆಯಲ್ಲಿ ಅಷ್ಟೇ ಸಮೃದ್ಧಿಯ ತಾಣವಾಗಿತ್ತು. ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ವನ, ಉದ್ಯಾನಗಳ ವರ್ಣನೆಯಲ್ಲಿ ತಾಳೆಗರಿಯ ವೃಕ್ಷಗಳ ಉಲ್ಲೇಖ ಮಾಡಿದ್ದು ಗಮನಾರ್ಹ. ತಾಳ ಶ್ರೀತಾಳ ಎಂಬ ಎರಡು ರೀತಿಯ ಪ್ರಕಾರಗಳನ್ನು ನಮ್ಮ ಕವಿಗಳು ಹೇಳಿದ್ದಾರೆ.

"ತಾಳ ತರುವಿತತಿಯೊಳ್ ಬೇ। ತಾಳಂಗಳ್ ಮೊಱೆತ್ತುದು" ತಾಳವನಂಗಳುಮಂ ಹಿಂ। ತಾಳ ಕುಜಂಗಳುಮನೊಡನೆ ಕಿಱ್ತುಡೆ[೬] "ದನುಜರ್ ತಾಳುಂ ತಟ್ಟುಂ ಗೆಡೆದರ್। ತಾಳಕಳೆವರರಿದೇವನುದಾತ್ತನೊ ಹನುಮಂ"[೭] 'ತಾಳಮರಕ್ಕೆ ಕೈಯ ನೀಡಿ ಮೇಲೆ ಗೋಣು ನೊಂದುದಯ್ಯ...'[೮] 'ಗಗನ ಪೀವರ ತಾಳಪತ್ರಾವಳಿಯೊ ಹೊಸದಾಯ್ತು'[೯] '...... ಮನಸಿಜ ವಿಜಯಪ್ರಶಸ್ತಿ ಲೇಖನೋಚಿತಚ್ಛದ ಶ್ರೀ ತಾಳಿಕಮಮಪ್ಪ ವೇಳಾವನ ಆದಿಪುರಾಣಂ'[೧೦]

ಈ ತಾಳೆವೃಕ್ಷದ ಗರಿಗಳು ನಿತ್ಯದ ಬದುಕಿನ ವ್ಯವಹಾರಕ್ಕೂ ಸಾಹಿತ್ಯ ಕೃತಿಗಳಿಗೂ ಇನ್ನಿತರ ಅನ್ಯಜ್ಞಾನಶಿಸ್ತುಗಳಿಗೂ ಮಾತೃಕೆಗಳಾಗಿ ಶತಮಾನದ ಉದ್ದಕ್ಕೂ ಬಳಕೆಯಲ್ಲಿದ್ದ ಸಂಗತಿ ಸ್ಪಷ್ಟವಾಗಿ ತಿಳಿದುಬರುತ್ತದೆ. ಅಲ್ಲದೇ ಕಾಗದದ ಬಳಕೆಯ ಸಂದರ್ಭದಲ್ಲಿಯೂ ತಾಳೆಗರಿಗಳು ಪ್ರಮುಖ ಲೇಖನ ಸಾಮಗ್ರಿಯಾಗಿ ಪ್ರಚಾರದಲ್ಲಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ.

"೧೯ನೆಯ ಶತಮಾನದಲ್ಲಿ ಕೂಡ ತಾಳಪತ್ರಗಳ ಮೇಲೆ ಬರೆಯುವುದು ನಿಂತುಹೋಗಿರಲಿಲ್ಲ. ಕ್ರಿ.ಶ.೧೮೨೨ರಲ್ಲಿ ಶ್ರೀ ರಾಮಾಚಾರ್ಯನಿಂದ 'ಕರ್ನಾಟಕ ಕಾದಂಬರಿಯ ಓಲೆಯ ಪ್ರತಿ ಲಿಖಿತವಾದಂತೆ ತಿಳಿದುಬರುತ್ತದೆ. ಅಚ್ಚಾದ ಗ್ರಂಥಗಳನ್ನು ಕೂಡ ಓಲೆಗಳ ಮೇಲೆ ಬರೆದಿರುವುದು ಕಂಡುಬರುತ್ತದೆ. ಶ್ರೀಮತ್ ಚನ್ನಪುರಿ(ಮದ್ರಾಸು) ಹಿಂದೂ ಭಾಷಾ ಸಂಜೀವಿನಿ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾದ ಕನ್ನಡ ಜೈಮಿನಿ ಭಾರತದ ಒಂದು ಪ್ರತಿಯನ್ನು ತಾಳಪತ್ರಗಳ ಮೇಲೆ ಎರಡು ಸಂಪುಟಗಳಲ್ಲಿ ಲಿಖಿಸಿದೆ" ಎಂದು ಡಿ.ಎಲ್.ಎನ್.ರವರು ಹೇಳುತ್ತಾರೆ."[೧೧] ಹೀಗಾಗಿ ಕಾಗದ ಬಳಕೆಯ ನಂತರವೂ ೧೯ನೆಯ ಶತಮಾನದವರೆಗೆ ಹಸ್ತಪ್ರತಿಗಳನ್ನು ಬರವಣಿಗೆಗಾಗಿ ಬಳಸುತ್ತಿದ್ದರು ಎಂದು ತಿಳಿಯುತ್ತದೆ. ಇಂಥಹ ತಾಳೆಗರಿಗಳ ತಯಾರಿಕೆಗಾಗಿಯೇ ಓಲೆಯವರೆನ್ನುವ ಜನವರ್ಗವಿರುತ್ತಿತ್ತು.

ಬರಹಕ್ಕೆ ಓಲೆಗಳನ್ನು ಹದಗೊಳಿಸುವುದು ಇವರ ಕಾರ್ಯವಾಗಿತ್ತು. ಮಂಗರಾಜ ನಿಘಂಟಿನಲ್ಲಿ ಇವರನ್ನು 'ಪತ್ರಿಕ' ಎಂದು ಕರೆದು 'ಓಲೆಗಳಂ ಮಾಪ್ಪಿವಂ' ಎಂಬ ವಿವರಣೆ ನೀಡಲಾಗಿದೆ. ಓಲೆ, ಅಳಕ, ಸಂಪುಟ, ಪೊತ್ತಗೆ, ಕವಳಿಗೆ, ಪುಸ್ತಕ ಮುಂತಾಗಿ ಈ ವೃತ್ತಿಯನ್ನು ಸೂಚಿಸುವ ಪದ ಪ್ರಯೋಗಗಳು ಕನ್ನಡ ಕಾವ್ಯಾದಿಗಳಲ್ಲಿ ಕಂಡುಬರುತ್ತದೆ. ಓಲೆಗಳನ್ನು ಮರಗಳಿಂದ ಸಂಗ್ರಹಿಸುತ್ತಿದ್ದ ಅವುಗಳನ್ನು ಹದಗೊಳಿಸಿ 'ಅಳಕ' 'ಅಲೇಖ'ವಾಗಿಸುತ್ತಿದ್ದ, ಕಟ್ಟು ಕಟ್ಟಿ ಸಂಪುಟವಾಗಿಸುತ್ತಿದ್ದ. ವೃತ್ತಿ ವಿಧಾನದ ವಿವಿಧ ಹಂತಗಳು ನಿರೂಪಿತವಾದುದಿಲ್ಲ. ದಕ್ಷಿಣ ಭಾರತದ, ಕರ್ನಾಟಕ, ಕೇರಳ, ತಮಿಳುನಾಡುಗಳಲ್ಲಿ ವಿಶೇಷವಾಗಿ ಬೆಳೆಯುತ್ತಿದ್ದ ಶ್ರೀತಾಳೆ, ತಾಳೆ ವೃಕ್ಷಗಳನ್ನು ಆಶ್ರಯಿಸಿ ಓಲೆಯವರು ವೃತ್ತಿ ಮಾಡುತ್ತಿದ್ದರು. ಓಲೆಕಾರರ ಮನೆತನಗಳು ಹುಟ್ಟಿಕೊಂಡು ಮುಂದೆ ವಾಲಿಕಾರರೆಂದು ಕರೆದಿರಬೇಕೆಂದು ತಿಳಿಯುತ್ತದೆ. ಇವರು ಓಲೆಗಳ ತಯಾರಿಕೆಯನ್ನು ತಮ್ಮ ಕುಲಕಸುಬನ್ನಾಗಿ ವಂಶ ಪಾರಂಪರ್ಯವಾಗಿಯೇ ಮುಂದುವರೆಸಿಕೊಂಡು ಬಂದಿರಬೇಕಾಗಿದೆ.

ತಾಳೆವೃಕ್ಷದಿಂದ ತಾಳೆ ಎಲೆಗಳನ್ನು ವರ್ಷದ ನಿಗದಿತ ಸಮಯದಲ್ಲಿ ಸಂಗ್ರಹಿಸುತ್ತಲಿರಬಹುದು. ಮಳೆಗಾಲವು ಹಸ್ತಪ್ರತಿಗಳ ಸಂಗ್ರಹಕ್ಕೂ ಹಾಗೂ ಹದಗೊಳಿಸಲು ಸಕಾಲವಾಗಿರಲಿಲ್ಲವೆಂದು ಕಾಣುತ್ತದೆ. ಬೇಸಿಗೆ ಮತ್ತು ಚಳಿಗಾಲದಲ್ಲಿ ಸಂಗ್ರಹ ಸಂರಕ್ಷಣೆಯ ದೃಷ್ಟಿಯಿಂದ ಪ್ರಮುಖವಾಗಿವೆ. ಮಳೆಗಾಲಕ್ಕಿಂತ ಬೇಸಿಗೆಯ ಒಣ ಹವೆ ಇನ್ನೂ ಉತ್ತಮವಾಗಿತ್ತು. ಕಾರಣ ಈ ಕಾಲದಲ್ಲಿ ಹಸ್ತಪ್ರತಿಗಳ ತಯಾರಿಸಿದರೆ ಗರಿಗಳಿಗೆ ಬೂಷ್ಟ್ ಹತ್ತುವ ಹುಳು ಹಿಡಿಯುವ ಸಂಭವವಿರುವುದಿಲ್ಲ. ಅಲ್ಲದೇ ಗರಿಗಳನ್ನು ಅವು ಹೊಡೆ ಬಿಚ್ಚುವ ಮೊದಲೆ ಸಂಗ್ರಹಿಸಬೇಕಾಗಿತ್ತು. ಇದರಿಂದ ಮಳೆ ಆಗುವ ಮಳೆಗಾಲ ಇಬ್ಬನಿ ಬೀಳುವ ಚಳಿಗಾಲ ಹಸ್ತಪ್ರತಿಗಳ ತಯಾರಿಕೆಗೆ ಸಕಾಲವಾಗಿರಲಿಲ್ಲ.

ಹಸ್ತಪ್ರತಿ ತಯಾರಿಸುವ ವಿಧಾನ ಕುರಿತು ಬಿ.ಭಟ್ಟಾಚಾರ್ಯ ಅವರು 'ಗಿಡದಿಂದ ಎಲೆಯ ಮೋತೆ ಹೊರ ಹೊರಟು ಇನ್ನೇನು ಬಿಚ್ಚಿ ಹರಡುತ್ತವೆ ಎನ್ನುವಷ್ಟರಲ್ಲಿ ಅವುಗಳನ್ನು ಗಿಡದಿಂದ ಕತ್ತರಿಸಿ ತಂದು, ಕೊನೆಯ ಪಕ್ಷ ಏಳುದಿನಗಳವರೆಗಾದರೂ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಅವುಗಳನ್ನು ಮೂರು ತಿಂಗಳವರೆಗಾದರೂ ನೆಲದಲ್ಲಿ ಹೂತು ನಂತರ ತೆಗೆದು ಶುದ್ಧಗೊಳಿಸಿ, ಬೇಕಾದ ಅಳತೆಗೆ ಕತ್ತರಿಸಿ ಅಡಿಗೆ ಮನೆಯ ಅಟ್ಟಗಳಲ್ಲಿಡುತ್ತಿದ್ದರು. ಅವುಗಳು ಅಡುಗೆಮನೆಯ ಹೊಗೆಯಿಂದ ಹದಗೊಳ್ಳುತ್ತಿದ್ದವು. ಹೀಗೆ

ಹದಗೊಂಡುವನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು"[೧೨] ಹೀಗೆ ತಯಾರಿಸಿ ಬರಹಕ್ಕೆ ಸಿದ್ಧಗೊಳಿಸಿ ಹೊಗೆಯ ಬಡಿಸುವುದರಿಂದ ಹಸ್ತಪ್ರತಿಗಳನ್ನು ಬರಹ ಪೂರ್ವದಲ್ಲಿಯೇ ಕ್ರಿಮಿಕೀಟಗಳಿಂದ, ಗುಣಮಟ್ಟದಿಂದ ಸಂರಕ್ಷಿಸುವ ಪದ್ಧತಿ ನಮ್ಮ ಪ್ರಾಚೀನರು ಪಾಲಿಸಿಕೊಂಡು ಬರುತ್ತಿದ್ದರು.

ಡಾ. ಬಿಮಲ್‌ಕುಮಾರ ದತ್ತ ಅವರು ಹಸ್ತಪ್ರತಿಗಳ ತಯಾರಿ ಕುರಿತು "ಗರಿಗಳನ್ನು ಬಿಸಿಲಿನಲ್ಲಿ ಒಣಗಿಸಬೇಕು. ಅನಂತರ ಬಿಸಿನೀರಿನಲ್ಲಿ ಕುದಿಸಿ ಒಣಗಿಸಬೇಕು. ಅವು ಚೆನ್ನಾಗಿ ಒಣಗಿದ ನಂತರ ಗಾರೆಯ ಕಲ್ಲಿನಿಂದಲೋ ಶಂಖದಿಂದಲೋ ಉಜ್ಜಿ ನುಣುಪು ಮಾಡಬೇಕು. ಅನಂತರ ಅವನ್ನು ಬರಹದ ಅಳತೆಗೆ ತಕ್ಕಂತೆ ಕತ್ತರಿಸಬೇಕು" ಎನ್ನುತ್ತಾರೆ.[೧೩]

'ಡಿ.ಎಲ್.ಎನ್‌ರವರು ತಾಳೆಯ ಗರಿಗಳನ್ನು ಹಸಿದಾಗಿರುವಾಗ ಕುದಿಯುವ ನೀರಿನಲ್ಲಿ ಬೇಯಿಸಿ ನೆರಳಿನಲ್ಲಿ ಒಣಗಿಸಿ ನುಣಪಾದ ಗಾರೆಯ ಕಲ್ಲಿನಿಂದ ಉಜ್ಜಿ ಮೃದುವಾಗಿ ಮಾಡುತ್ತಾರೆ. ಅದರ ಎರಡು ಪಕ್ಕಗಳು ಸಮತಲವಾಗುತ್ತವೆ; ಬರಹಕ್ಕೆ ಯೋಗ್ಯವಾಗುತ್ತವೆ" ಎನ್ನುತ್ತಾರೆ.[೧೪]

ತಾಳೆಯ ಮರದ ಗರಿಗಳನ್ನು ಸರಿಯಾದ ಆಕಾರ ಹಾಗೂ ಅಳತೆಗೆ ತಕ್ಕಂತೆ ಕತ್ತರಿಸಿ ಒಣಗಿಸಲಾಗುತ್ತದೆ. ಅರೆ ಒಣಗಿದ ಗರಿಗಳನ್ನು ಮಣ್ಣಿನ ರಾಡಿಯಲ್ಲಿ ಹೂಳಿಡಲಾಗುತ್ತದೆ. ನಾಲ್ಕು ಅಥವಾ ಐದು ದಿನಗಳ ನಂತರ ಅವುಗಳನ್ನು ಮಣ್ಣಿನ ರಾಡಿಯಿಂದ ತೆಗೆದು ತೊಳೆಯಲಾಗುತ್ತದೆ. ನಂತರ ನೆರಳಿನಲ್ಲಿ ಗಾಳಿಗೆ ಇಟ್ಟು ಒಣಗಿಸಲಾಗುತ್ತದೆ. ಗರಿಗಳಿಗೆ ಹುಳು ಹತ್ತದ ಹಾಗೆ ಭತ್ತದ ಹುಲ್ಲಿನಲ್ಲಿಡಲಾಗುತ್ತದೆ. ನಂತರ ಬರಹಕ್ಕೆ ಗರಿಗಳು ಸಿದ್ಧವಾಗುತ್ತವೆ.

"ಗರಿಗಳನ್ನು ಪರಿಷ್ಕರಿಸಲು ಅಳತೆಗೆ ತಕ್ಕ ಹಾಗೆ ಕತ್ತರಿಸಿದ ಗರಿಗಳನ್ನು ಕುದಿಯುವ ನೀರಿನಲ್ಲಿ ಅದ್ದಿ ತೆಗೆದು ನಂತರ ಗರಿಯ ಕಠಿಣವಾದ ಮೇಲ್ಮೈಯನ್ನು ಚೂಪಾದ ಆಯುಧದಿಂದ ನುಣುಪುಗೊಳಿಸಲಾಗುತ್ತದೆ. ಅದಕ್ಕೆ ಎಣ್ಣೆ, ಅರಿಸಿಣ ಪುಡಿಯಿಂದ ಉಜ್ಜಲಾಗುತ್ತದೆ. ಹೀಗೆ ಪರಿಷ್ಕರಗೊಂಡ ಗರಿಗಳ ಮೇಲೆ ಕಂಠದಿಂದ ಕೊರೆದು ಅದರ ಮೇಲೆ ಇಜ್ಜಲು ಅಥವಾ ತೆಂಗಿನ ಕರಟವನ್ನು ಸುಟ್ಟು ಮಾಡಿದ ಕರಿಯ ಬಣ್ಣವನ್ನು ಹಚ್ಚಲಾಗುತ್ತದೆ. ಅದರಿಂದ ಅಕ್ಷರಗಳು ಸ್ಫುಟವಾಗಿ ಕಾಣುತ್ತವೆ."[೧೫]

> "ತಾಡಪತ್ರಂ ದೃಢಂ ಸೌಮ್ಯಂ ಋಜುಸಾಗ್ರಂ ದ್ವಿಧಾಕೃತಂ
> ಮೃದುಲಂ ಯತ್ಪ್ರಶಸ್ತಂ ತತ್‌ಶ್ರೇಷ್ಠಮತಂ ಲೇಖಾ ವಿಲೇಖನೇ॥
> ಕರ್ಕಶಂ ಕಲ್ಮಷಂ ವಕ್ರಂ ಹೀನಾಗ್ರಂ ಸ್ಫುಟಿತಂ ಯುಗಂ
> ತಾಲಪತ್ರಂನ ತತ್‌ಶ್ರೇಷ್ಠಂ ಮತಂ ಲೇಖನಾ ವಿಲೇಖನೇ॥[೧೬]

**೮.೧.೧. ಆಯ್ಕೆಯ ರೀತಿಗಳು**

ಬರವಣಿಗೆಗೆ ಅಣಿಗೊಳಿಸುವ ಗರಿಗಳು, ಅಳಕ ಇವುಗಳನ್ನು ಜೋಡಿಸಿ ಕಟ್ಟಿದ ಕಟ್ಟು ಸಂಪುಟ ಸಿದ್ಧಪಡಿಸಲು ಓಲೆಗಳನ್ನು ಆಯ್ಕೆಮಾಡುವಲ್ಲಿ ಒಲೆಯವರು ವಹಿಸುವ ಜಾಗರೂಕತೆಯ ಕುರಿತು ಹೇಳಲಾಗಿದೆ.

"ಬರೆಬರೆದೋಲೆಗಳಂ ಕಿಡಿಸುವಂತು ತಾಜೊಳೆ ಪಗೆಯೇ ತಾಳೆವೋಲೆಗಳಜೀವವೇ ಲಿಪಿಭೇದವ"

ಹಸ್ತಪ್ರತಿಗಳು ಇಹ-ಪರ ಜೀವನದ ಉತ್ಕರ್ಷೆಗೆ ಅಗತ್ಯ ಎಂಬುದನ್ನು ಮನಗಂಡು ಕನ್ನಡಿಗರು ಅವುಗಳ ಪೋಷಣೆಯ ಕಾರ್ಯವನ್ನು ತಯಾರಿಕೆ ಹಂತದಲ್ಲೇ ಕೈಗೊಂಡರು. ಸಾಮಾಜಿಕ ಧಾರ್ಮಿಕ ಕರ್ತವ್ಯವೆಂದು ಭಾವಿಸಲಾಗಿತ್ತು. ಪ್ರಮುಖ ರಾಜ ಮನೆತನಗಳಾದ ಶಾತವಾಹನ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮೈಸೂರು ಮುಂತಾದ ಅರಸು ಮನೆತನದವರು ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ ಧರ್ಮಗಳಿಗೆ ಆಶ್ರಯವನ್ನು ನೀಡುವ ಮೂಲಕ ಹಸ್ತಪ್ರತಿಗಳ ಸಂರಕ್ಷಣೆ, ಸಂವರ್ಧನೆ ಸಂಗೋಪನೆಕೊಂಡವು.

ಇಂಥ ಸಂರಕ್ಷಿತ ಹಾಗೂ ಸಂವರ್ಧಿತ ಹಸ್ತಪ್ರತಿಗಳ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಪ್ರಯತ್ನಗಳು ವ್ಯವಸ್ಥಿತವಾಗಿ ಪ್ರಾರಂಭವಾದವು. ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರಣಗಳಿಂದಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಅಭ್ಯಾಸ ಮಾಡಲು ತೊಡಗಿದ ಕ್ರೈಸ್ತ ಪಾದ್ರಿಗಳು ತಮ್ಮ ಹಿಡಿತವನ್ನು ಬಲಪಡಿಸುವ ಪ್ರಯತ್ನವನ್ನು ಮಾಡಿದುದರ ಫಲವಾಗಿ ದೇಶೀ ಭಾಷೆಗಳ ಪ್ರಾಚೀನ ಹಸ್ತಪ್ರತಿಗಳ ಸಾಹಿತ್ಯ ಸಂಪತ್ತು ಬೆಳಕಿಗೆ ಬರತೊಡಗಿತು. ಇದರಿಂದ ಕನ್ನಡ ಸಾಹಿತ್ಯವನ್ನು ಕಟ್ಟಿಕೊಳ್ಳುವಲ್ಲಿ ಸಹಾಯಕವಾಯಿತು. ಅಲ್ಲದೇ ದೇಶಿ ವಿದ್ವಾಂಸರಾದ ಆರ್. ನರಸಿಂಹಚಾರ್ಯ ಪ.ಗು.ಹಳಕಟ್ಟಿ, ಉತ್ತಂಗಿ ಚೆನ್ನಪ್ಪನಂತವರು ಪ್ರಾಚೀನ ಹಸ್ತಪ್ರತಿಗಳನ್ನೇ ಮೂಲ ಆಕರವಾಗಿ ಬಳಸಿಕೊಂಡು ಕೃತಿ ರಚನೆ ಮಾಡಿದರು. ಆರ್. ನರಸಿಂಹಚಾರ್ಯರವರು ಕರ್ಣಾಟಕ ಕವಿಚರಿತೆ(೧೯೦೭, ೧೯೧೯, ೧೯೨೯) ಮೂರು ಸಂಪುಟದಲ್ಲಿ ಹೊರತಂದರು. ಫ.ಗು.ಹಳಕಟ್ಟಿಯವರು ವಚನಗಳನ್ನು ಸಂಕಲಿಸಿ ರೂಪುಗೊಂಡ ವಚನಶಾಸ್ತ್ರ ಸಾರ ಕೃತಿಗಳು ಹಸ್ತಪ್ರತಿಗಳನ್ನು ಮೂಲಾಧಾರವಾಗಿ ಇಟ್ಟುಕೊಂಡು ರಚನೆಗೊಂಡಿವೆ.

ಹಸ್ತಪ್ರತಿಗಳ ಬರವಣಿಗೆ ಪೂರ್ವರೂಪಗಳಾದ ಸಿದ್ಧಪಡಿಸುವಲ್ಲಿ ನಂತರ ಬರೆಯುವಲ್ಲಿ ಓದುವಲ್ಲಿ ಕಟ್ಟುಗಳನ್ನು ಮಾಡಿ ಕಟ್ಟಿಡುವಲ್ಲಿ ಸಂಭವಿಸಬಹುದಾದ ಸಮಸ್ಯೆಗಳು ಬಹಳಷ್ಟು ಹಸ್ತಪ್ರತಿಗಳು ಸಿದ್ಧವಾದ ಮೇಲೂ ಅವುಗಳನ್ನು ರಕ್ಷಿಸಿಕೊಳ್ಳುವಲ್ಲಿ ಹಲವು ವಿಧಾನಗಳನ್ನು ಕಾಣಬಹುದು. ಲಿಪಿಕಾರರು ತಮ್ಮ ತಪ್ಪಿನಿಂದಾಗುವ ದೋಷಗಳನ್ನು ತಿದ್ದಿಕೊಂಡು ಓದುವಲ್ಲಿ ಹಸ್ತಪ್ರತಿಯ ಜ್ಞಾನವನ್ನು ಸಂರಕ್ಷಿಸಿಕೊಳ್ಳುವ ಕಳಕಳಿಯನ್ನು ಕಾಣಬಹುದು.

"ಬರೆಯ ತೊಡಗಿದೆ ತಪ್ಪು ಬಂದರೆ
ಬರೆದ ದೋಷವದಾರ್ಗೆ ಕಂಠ ಕೊ
ಬರೆದ ಬೆರಳಿಗೂ ಕೇಳ್ವ ಕರ್ಣಕೊನೋಳ್ವ ನಯನ ಕೊ
ಶರೀರದೊಳಗೊಂದಿರ್ಗ ಜೀವಾತ್ಮಂ ಗೋಭಾವಿಸವಾ॥"[೧೯]

ಎಂದು ಪ್ರತಿಕಾರ ವೆಂಕಟಪ್ಪ ಹಸ್ತಪ್ರತಿಗಳ ಬರಹ ಹಾಗೂ ರಕ್ಷಣೆ ತುಂಬಾ ಶ್ರಮದಾಯಕವಾದುದು ಎಂದು ಹೇಳಿದ್ದಾನೆ.

"ತಪ್ಪಂ ಬರೆದವ ಕಡು ಜಡ
ನಪ್ಪಾತಂ ಬರೆದನೆಂದು ಬಯ್ಯಲ್ ಬೇಡಿಂ
ತಪ್ಪಕ್ಕು ಶುದ್ಧ ಮಕ್ಕುಂ
ತಪ್ಪುಳ್ಳಚಿ ತಿದ್ದಿ ಕೊಂಬುದತ್ತಮ ಪುರುಷರ್॥"[೨೦]

ಪುಸ್ತಕಂ ವನಿತ್ತಾವಿತಂ ಪರಹಸ್ತಗತಂ
ಪುನರಾಯಾತಂ ಜೀರ್ಣ ಭ್ರಷ್ಟಖಂಡಶಃ॥
ತೈಲಾದ್ರ ಕ್ಷೇಜ್ಜಲಾದ್ರ ಕ್ಷೇತ್ ರಕ್ಷೇಚ್ಚಿಥಿಲ ಬಂಧನಾತ್
ಮೂರ್ಖ ಹಸ್ತೇನ ದಾತವ್ಯಮೇವಂ ವದಿತಿ ಪುಸ್ತಕಂ॥[೨೧]

ಹಸ್ತಪ್ರತಿಗಳ ಸಂರಕ್ಷಣೆ ಸಂವರ್ಧನೆಯಲ್ಲಿ ಲಿಪಿಕಾರರು ವಹಿಸಿದ್ದ ಕಳಕಳಿ ಕಾಳಜಿ ತಿಳಿಯುತ್ತದೆ.

ಮಕ್ಕಳ, ಅಜ್ಞಾನಿಗಳ ಕೈಗೆ ಸಿಗದಂತೆ ಹಸ್ತಪ್ರತಿಗಳನ್ನು ಸಂರಕ್ಷಿಸುವುದು ಒಂದು ಕಲೆಯಾಗಿತ್ತು. ಮಲೆನಾಡಿನ ಕರಾವಳಿ ಪ್ರದೇಶದಲ್ಲಿ ಬೆತ್ತದ ಬುಟ್ಟಿ ಬಳಕೆಯನ್ನು ಉತ್ತರ ಕರ್ನಾಟಕ ಪ್ರದೇಶಗಳಲ್ಲಿ ಕಟ್ಟಿಗೆಯ ಸಂದೂಕಿನಲ್ಲಿ ಹಸ್ತಪ್ರತಿಗಳನ್ನು ಇಟ್ಟು ಸಂರಕ್ಷಿಸಲಾಗುತ್ತಿತ್ತು. ಎತ್ತರದಲ್ಲಿ ಹಸ್ತಪ್ರತಿಗಳಿದ್ದ ಬೆತ್ತದ ಬುಟ್ಟಿಗಳನ್ನು ಇಡುತ್ತಿದ್ದರು. ಅಲ್ಲದೇ ಹೊಗೆ ಕಿಂಡಿಗಳಲ್ಲಿ ಇಡುತ್ತಿದ್ದರು. ಇದರಿಂದ ಹಸ್ತಪ್ರತಿಗಳು ಕ್ರಿಮಿಕೀಟಗಳಿಂದ ಸಂರಕ್ಷಣೆಗೆ ಒಳಗಾಗುತ್ತಿದ್ದವು. ವರ್ಷದಲ್ಲಿ ಒಂದು ಅಥವಾ ಎರಡು ಬಾರಿ ಮಾತ್ರ ಪೂಜಾ ನಿಮಿತ್ತವಾಗಿ ಹೊರತೆಗೆದು ಉಪಚರಿಸಿ ಮತ್ತೆ ಅಲ್ಲಿಯೇ ಇಡುತ್ತಿದ್ದರು. ಇದು ಕೂಡ ಹಸ್ತಪ್ರತಿಗಳ ಬಾಳಿಕೆಯ ಭಾಗವಾಗಿಯೇ ಬರುವಂಥದ್ದು.

ಎಚ್. ದೇವೀರಪ್ಪನವರು "ಬೇವಿನ ಎಲೆ, ಹೊಂಗೆ ಎಲೆ, ಶ್ರೀಗಂಧದ ಹುಡಿ, ಕರ್ಪೂರದ ಹಳಕುಗಳು, ಅರಿಷಿಣದ ಪುಡಿ, ಗೋದವಚ(ಉಗ್ರಗಂಧ) ಮುಂತಾದವುಗಳನ್ನು ಅನುಕೂಲಕ್ಕೆ ತಕ್ಕಂತೆ ಸದುವು ನೋಡಿ ಹಸ್ತಪ್ರತಿಗಳ ಒಳಗೋ ಪಕ್ಕದಲ್ಲಿಯೇ ಇಟ್ಟು ಕಟ್ಟುತ್ತಿದ್ದರು.... ಆ ಕಟ್ಟುಗಳನ್ನು ಹುಳುಗಳು ಮುಟ್ಟಲಾಗದ ಕೆಂಪುಬಣ್ಣದ ಇಲ್ಲವೆ ಹಳದಿ ಬಣ್ಣದ ಬಟ್ಟೆಗಳಲಿ ಸುತ್ತಿ ಮತ್ತೆ ಮೇಲೆ ದಾರವನ್ನು ಬಿಗಿದಿಡುತ್ತಿದ್ದರು"[೨೨] ಎಂದು ಹೇಳುತ್ತಾರೆ. ಸಂದೂಕ, ಕಪಾಟುಗಳಲ್ಲಿನ ಹಸ್ತಪ್ರತಿಗಳನ್ನು ಸಂರಕ್ಷಿಸಲು ಈ ಸಂರಕ್ಷಣೆ ವಿಧಾನ ತುಂಬಾ ಉಪಯುಕ್ತವಾಗಿದೆ.

### ೮.೨. ಕಾಗದ

ತಾಳೆಗರಿ ಮತ್ತು ಭೂರ್ಜಪತ್ರಗಳ ಬಳಕೆಯಂತೆ ಕಾಗದ ಬಳಕೆ ಭಾರತದಲ್ಲಿ ತಡವಾಗಿ ಬಳಕೆಯಾಯಿತು. ಕಾಗದ ಮುಸ್ಲಿಂ ರಾಷ್ಟ್ರಗಳಿಂದ ಬಂದಿದ್ದರಿಂದ ಭಾರತೀಯರು ಅದನ್ನು ಅಪವಿತವೆಂದು ಭಾವಿಸಿದ್ದರು. ಕ್ರಿ.ಪೂ.೪ನೆಯ ಶತಮಾನದ ಹೊತ್ತಿಗೆ ಭಾರತೀಯರು ಕಾಗದ ತಯಾರಿಕೆಯನ್ನು ಬಲ್ಲವರಾಗಿದ್ದರೆಂದು ಗ್ರೀಕ್ ದೇಶದ ನರ್ಚಸ್ ಹೇಳುತ್ತಾನೆ. ಕಾಗದ ಬಳಕೆ ಕರ್ನಾಟಕದಲ್ಲಿ ಆರಂಭವಾದುದು ಮಹ್ಮದೀಯರ ಆಳ್ವಿಕೆಯ ಕಾಲಾವಧಿಯಲ್ಲಿಯೇ ಎಂಬುದು ತಿಳಿದುಬರುತ್ತದೆ. ಗುಜರಾತಿನಲ್ಲಿ ದೊರಕಿದ ಕಾಗದ

ಹಸ್ತಪ್ರತಿಯೊಂದು ೧೨೨೦ ರಚನೆಗೊಂಡಿದಾಗಿದೆ. ಭಾರತದಲ್ಲಿ ದೊರಕಿದ ಹಸ್ತಪ್ರತಿಗಳಲ್ಲಿ ಇದೇ ಪ್ರಾಚೀನವಾದುದಾಗಿದೆ. ಕರ್ನಾಟಕದಲ್ಲಿ ಕಾಗದವು ೧೪ನೆಯ ಶತಮಾನದ ಹೊತ್ತಿಗೆ ಬಳಕೆಯಲ್ಲಿತ್ತು. 'ಪತ್ತಳಿಕೆ ಎಂಬುದು ಕಾಗದ... ಎಂದು ಅಭಿನವ ಮಂಗರಾಜ ಹೇಳುತ್ತಾನೆ.

"ಕಾಗದವು ಮೃದು ಹಾಗೂ ಕಠಿಣ ಕಾಂಡದ ಮರದ ಎಳೆಗಳು ಕಾಗದ ತಯಾರಿಕೆಯ ಉದ್ಯಮದ ಪ್ರಮುಖ ಸಂಪನ್ಮೂಲಗಳು ಆಗಿವೆ. ಕಟ್ಟಿಗೆಯ ವಂಶವನ್ನು ಆಧರಿಸಿ ಒಂದೂವರೆ ಮಿ.ಮೀ ನಿಂದ ಆರು ಮಿ.ಮೀ ನ ಅಳತೆಯ ಎಳೆಗಳು ಕಾಂಡದಲ್ಲಿರುತ್ತವೆ. ಕಟ್ಟಿಗೆಯನ್ನು ಸಂಸ್ಕರಿಸಿ ಕಾಗದ ತಯಾರಿಕೆಗೆ ಬೇಕಾಗುವ ಕಚ್ಚಾ ಸಾಮಗ್ರಿಯನ್ನು ಸಿದ್ಧಪಡಿಸುವ ಮೊದಲೇ ಕಟ್ಟಿಗೆಯಲ್ಲಿರುವ ಖನಿಜ ವಸ್ತುಗಳು, ಅಂಟು, ರಾಳ ಮೊದಲಾದವನ್ನು ಹೊರ ತೆಗೆಯಲಾಗುತ್ತದೆ. ಆಗ ಉಳಿಯುವ ಮೂರು ಪ್ರಮುಖ ಘಟಕಗಳು ಸುರಂಧ್ರ ಅರೆ ಸರಂಧ್ರ ಹಾಗೂ ಪಾಲಿಮಾರ್ ಸಂಯುಕ್ತಗಳು ಇವುಗಳಿಂದ ಕಾಗದ ತಯಾರಿಸಲಾಗುತ್ತದೆ."[೨೩]

### ೮.೨.೧. ಕಾಗದ ತಯಾರಿಕೆಯ ತಾಂತ್ರಿಕತೆ

೧. ಕುಸುರಿಸುವಿಕೆ

೨. ಶುದ್ಧೀಕರಣ ಹಾಗೂ ಸಂರಕ್ಷಣೆ

೩. ನಿರ್ವಣೀಕರಣ

೪. ಬಡಿಯುವಿಕೆ

೫. ಹೊಳಪು ಹಾಗೂ ಕಠಿಣಗೊಳಿಸುವಿಕೆ

೬. ಸಂಚಯಕಾರಕ ಮತ್ತು ನಿರೋಧ ಪ್ರಮಾಣ

೭. ಯಾಂತ್ರಿಕ ಪ್ರಕ್ರಿಯೆ

೮. ಕಾಗದ ತಯಾರಿಕೆಯ ಯಂತ್ರಗಳು

೯. ಕಾಗದ ಆಮ್ಲೀಯತೆ

"೧೮೫೦ರಲ್ಲಿ ಕಟ್ಟಿಗೆಯೊಂದಿಗೆ ಕಾಸ್ಟಿಕ್ ಸೋಡಾ (ಸೋಡಿಯಂ ಹೈಡ್ರಾಕ್ಸೈಡ್)ವನ್ನು ಕುದಿಸಿ ತಯಾರಿಸುವ ಸೋಡಾ ಪದ್ಧತಿ ಇಂಗ್ಲೆಂಡಿನಲ್ಲಿ ಅಭಿವೃದ್ಧಿಯಾಯಿತು. ಇಂದೂ ಕಟ್ಟಿಗೆಯ ಚೂರುಗಳನ್ನು ಕ್ಯಾಲ್ಷಿಯಂ ಬೈ ಸಲ್ಫೇಟ್‌ನೊಂದಿಗೆ ಕುದಿಸಿ ತಯಾರಿಸುವ ಸಲ್ಫೇಟ್ ಪದ್ಧತಿಯು ಪ್ರಗತಿ ಕಂಡಿತು. ಸಲ್ಫೇಟ್ ಕುಸುರಿಯಲ್ಲಿನ ಪಾಲಿಮಾರ್ ಸಂಯುಕ್ತಗಳ ಅವಶಿಷ್ಟಗಳು ಕಾಗದವನ್ನು ಹಾಳು ಮಾಡುವ ಪ್ರಮುಖ ಸಲ್ಫೋನಿಕ ಆಮ್ಲಗಳಾಗಿದ್ದು ಅವು ಪಟಿಕ/ಗಟ್ಟಿರಾಳದ ವ್ರಜಸಿರಿ(ಅಂಟು)ನಿಂದ ಕೂಡಿರುವುದರಿಂದ ಸಲ್ಫೇಟ್ ಕಾಗದ ಬೇಗನೆ ಹಾಳಾಗುತ್ತದೆ. ಜರ್ಮನ್ ವಿಜ್ಞಾನಿಗಳು, ಕಟ್ಟಿಗೆಯನ್ನು ಸೋಡಿಯಂ ಸಲ್ಫೇಟಿನೊಂದಿಗೆ ಕುದಿಸಿ ಹೆಚ್ಚು ಮಿತವ್ಯಯ ಮತ್ತು ಹೆಚ್ಚು ಬಾಳಿಕೆಯ ಕ್ರಾಫ್ಟ್ ಕಾಗದವನ್ನು ತಯಾರಿಸಿದರು."[೨೪]

ಹೀಗೆ ಕುಸರಿ ಮಾಡಿದ ಕಾಗದದಲ್ಲಿರುವ ಪಾಲಿಮಾರ್ ಸಂಯುಕ್ತಗಳನ್ನು ಹೊರಹಾಕಬೇಕಾಗುತ್ತದೆ. ಇಲ್ಲದಿದ್ದರೇ ಇವು ಕಾಗದದ ರೋಗನಿರೋಧಕಶಕ್ತಿ ಕಡಿಮೆಯಿರುತ್ತದೆ. ಹಾಗೂ ಎಳೆಗಳ ತುಂಡುಗಳನ್ನು ತೆಗೆಯಲು, ಬೋಧನಾ ನಿರೋಧಕ ಕ್ರಿಯೆಗೆ ಒಳಪಡಿಸುತ್ತಾರೆ. ಆದರೆ ಕೇವಲ ಸ್ವಚ್ಛಗೊಳಿಸುವುದರಿಂದ ಎಳೆಗಳಲ್ಲಿಯ ಕಲೆಗಳು ಹಾಗೆ ಉಳಿಯುವ ಸಂಭವವಿದ್ದು ಕಾಗದ ಗಾಢ ಕಂದು ಬಣ್ಣಕ್ಕೆ ತಿರುಗುವ ಸಾಧ್ಯತೆಯಿರುತ್ತದೆ. ಮೂಲ ಬಣ್ಣವು ಕಂದಾಗಿರುವುದರಿಂದ ಕಾಗದವನ್ನು ಮುದ್ರಣಕ್ಕೆ ಬಳಸದ ಮುನ್ನ ರಾಸಾಯನಿಕ ಕ್ರಿಯೆಗೆ ಒಳಪಡಿಸಿ ಬಳಸುವುದು ಹೆಚ್ಚು ಉಪಯುಕ್ತವಾಗಿದೆ. ಪ್ರಾರಂಭಿಕ ದಿನಗಳಲ್ಲಿ ನಿರ್ವರ್ಣೀಕರಣವನ್ನು ಸ್ವಾಭಾವಿಕವಾಗಿಯೇ ಸೂರ್ಯನ ಬಿಸಿಲಿನಿಂದ ಹಾಗೂ ಗಾಳಿಯಿಂದ ಮಾಡುತ್ತಿದ್ದರು. ಇದು ತೀರಾ ನಿಧಾನ ಪ್ರಕ್ರಿಯೆಯಾಗಿತ್ತು. ಕ್ರಿ.ಶ.೧೭೭೪ರಲ್ಲಿ ಕ್ಲೋರಿನ್ ಆವಿಷ್ಕಾರದಿಂದಾಗಿ ಕ್ಲೋರಿನ್ ನಿರ್ವರ್ಣೀಕರಣ ಹೆಚ್ಚು ಸೂಕ್ತವಾಗಿದೆ. ಆದರೆ ಇಂದಿನ ದಿನಮಾನಗಳಲ್ಲಿ ಕ್ಲೋರಿನೇಟ್‌ಡ್ ಸಂಯುಕ್ತಗಳಿಂದ ನಿರ್ವರ್ಣೀಕರಣ ಮಾಡಲಾಗುತ್ತದೆ.

ಬಡಿಯುವಿಕೆ ಒಳ್ಳೆಯ ಗುಣಮಟ್ಟದ ಕಾಗದ ತಯಾರಿಸಲು ಸಹಾಯಕವಾಗಿದೆ. ಮೂಲತಃ ಚೀನಿಯರು ಹಸಿ ಕುಸುರಿಯನ್ನು ಕಲ್ಲಿನ ಒರಳುಗಳಲ್ಲಿ ಕುಟ್ಟುತ್ತಿದ್ದರು. ಕಲ್ಲಿನ ಗುಂಡಿನಿಂದ ಚೂರುಗಳನ್ನಾಗಿ ಮಾಡುವುದು ಮತ್ತು ಚಿಂದಿಯನ್ನು ಅತಿ ಸಣ್ಣ ತುಣುಕುಗಳನ್ನಾಗಿ ಮಾಡಿ ಅವುಗಳನ್ನು ಸುಣ್ಣದ ನೀರಿನಲ್ಲಿ ನೆನೆಸುವ ವಿಧಾನವಿತ್ತು. ಕ್ರಿ.ಶ.೧೧೫೧ರ ಸುಮಾರಿಗೆ ಜಲಶಕ್ತಿಯ ಸಹಾಯದಿಂದ ರೂಪಿಸಲ್ಪಟ್ಟ ಕುಟ್ಟುವ ಯಂತ್ರ ವೆಲೆನ್ಸಿಯಾದಲ್ಲಿ ಆವಿಷ್ಕಾರಗೊಂಡಿತು. ಈ ಯಂತ್ರದಿಂದ ಗಟ್ಟಿಯಾದ ತಾಳಿಕೆಯುಳ್ಳ ಹಾಗೂ ನಯವಾದ ಒಳ್ಳೆಯ ಗುಣಮಟ್ಟದ ಕಾಗದ ತಯಾರಿಸಲಾಗುತ್ತಿತ್ತು.

"೧೯ನೆಯ ಶತಮಾನದ ವರೆಗೆ ಕಾಗದಗಳಿಗೆ ಹೊಳಪು ಮತ್ತು ಕಠಿಣತೆಗೆ ಬರುವಂತೆ ಮಾಡಲು ಪ್ರಾಣಿಗಳ ಅಂಟನ್ನು ಲೇಪಿಸಲಾಗುತ್ತಿತ್ತು. ಕ್ರಿ.ಶ.೧೮೦೦ಕ್ಕೂ ಮೊದಲು ಕಾಗದ ತಯಾರಕರು ಕಾಗದವನ್ನು ಪ್ರಾಣಿಗಳ ಅಂಟನ್ನು ಲೇಪಿಸಿ ಪಟಿಕದ ದ್ರಾವಣದಲ್ಲಿ ಅದ್ದಿ ಹೊಳಪು ಹಾಗೂ ಕಠಿಣತೆಯು ಬರುವಂತೆ ಮಾಡುತ್ತಿದ್ದರು. ಕಾಗದ ಹೆಚ್ಚು ಆಮ್ಲೀಯತೆ ಹೊಂದಿರುವುದರಿಂದ ಕ್ರಿಮಿಕೀಟಗಳಿಂದ ರಕ್ಷಿಸಲು ಹಾಗೂ ತಾಳಿಕೆಯ ದೃಷ್ಟಿಯಿಂದ ಅಷ್ಟು ಸರಕ್ಷಿತವಾಗಿರಲಿಲ್ಲ. ಕಾಲ ಬದಲಾದಂತೆ ಕಾಗದ ತಯಾರಕರು ತಮ್ಮ ಸ್ವಪ್ರಯತ್ನದಿಂದ Effective Method ಅಂದರೆ ಕಾಗದ ಮಾಡುವ ಮೊದಲು ಪಟಿಕ ಹಾಗೂ ಕರ್ಪೂರರಾಳದ ಮಿಶ್ರಣವನ್ನು ಆರ್ದ್ರ ಎಳೆಗಳ ಕಲೆಗಳಿಗೆ ಸೇರಿಸುವುದು. ಈ ಪದ್ಧತಿಯನ್ನು ಆಂತರಿಕ ನಯ, ಗಟ್ಟಿಗೊಳಿಸುವಿಕೆ ಎನ್ನುತ್ತಾರೆ. ಕರ್ಪೂರ ರಾಳವು ಕಾಗದವನ್ನು ಜಲಪ್ರತಿರೋಧಕವನ್ನಾಗಿಸುತ್ತದೆ. ಪಟಿಕ ಎಳೆಗಳ ಸಂವೃತ್ತ ಸಂಪರ್ಕದಲ್ಲಿರುವ ಕರ್ಪೂರ ಪ್ರಕ್ಷೇಪಗೊಂಡು ಹೊರಬರುವಂತೆ ಮಾಡುತ್ತದೆ. ಇಂದಿನ ದಿನಗಳಲ್ಲಿ ಕರ್ಪೂರ ರಾಳದ ಬದಲಾಗಿ ಕಾಗದ ತಯಾರಿಕೆಯಲ್ಲಿ ಕ್ಷಾರೀಯ ಕೃತಕ, ನಯ, ಕಠಿಣ ಕಾರಕಗಳನ್ನು ಉಪಯೋಗಿಸಲಾಗುತ್ತದೆ."[೨೫]

ಸಂಚಯಕಾರಕ ಮತ್ತು ನಿರೋಧ ಪ್ರಮಾಣವನ್ನು ಒಳಗೊಂಡ ಕಾಗದ ತಯಾರಿಸಬೇಕಾಗುತ್ತದೆ. ಸುಣ್ಣದ ಕಾರ್ಬೋನೇಟನ್ನು ಕ್ಷಾರೀಯ ಕಾಗದಗಳಲ್ಲಿ ವಿಫುಲವಾಗಿ ಬಳಸುತ್ತಿದ್ದರು. ಇದೂ ತೀರಾ

ವೆಚ್ಚದಾಯಕವಾದ ಪದ್ಧತಿಯಾಗಿದೆ. ಪಾಲಿಮಾರ್ ಸಂಚಯಕಾರಕ ಕಾಗದಗಳಿಗೆ ರಾಸಾಯನಿಕ ಬಳಕೆ ಇಲ್ಲದಿರುವುದರಿಂದ ಅದರ ತಾಳಿಕೆಯೂ ಕಡಿಮೆಯಾಗಿದೆ. ಕಾಗದಗಳ ತಯಾರಿಕೆಯಲ್ಲಿ ಬಣ್ಣ ಹಾಕುವುದು ಉತ್ತಮ ಗುಣಮಟ್ಟದ ಕಾಗದ ತಯಾರಿಸಲು ಸಹಾಯಕವಾಗಿದೆ.

ಕಾಗದ ತಯಾರಿಕ ಯಂತ್ರಗಳು. ೧. ಫೋರ್ ಡ್ರೀನಿಯರ್ ಯಂತ್ರ ೨. ಸಿಲಿಂಡರ್ ಯಂತ್ರ ಫೋರ್ ಡ್ರೀನಿಯರ್ ಯಂತ್ರ ಅನಂತ ತಂತಿಯ ಪರದೆಯಿಂದಾದುದು. ಅದರ ಹದಗೊಳಿಸುವ ಒಂದು ತುದಿಯ ಮೇಲೆ ಕುಸುರಿಯ ಮುದ್ದೆ ಹರಿಯುತ್ತಿದ್ದು ಇನ್ನೊಂದು ತುದಿಯಲ್ಲಿ ಆರ್ದ್ರಹಾಳೆಯನ್ನು ಒತ್ತಿ ಒಣಗಿಸಲಾಗುವುದು. ಸಿಲಿಂಡರ್ ಯಂತ್ರದಿಂದ ಕಟ್ಟಡದ ಪೇಪರ್ ಹಾಗೂ ಪೇಪರ್ ಬೋರ್ಡ್ ತಯಾರಿಸುತ್ತಾರೆ. ಪೋರ್ ಡ್ರೀನಿಯರ್ ಯಂತ್ರ ಹೆಚ್ಚು ವೇಗವಾಗಿ ಶಕ್ತಿಯುತವಾದ ಕಾಗದವನ್ನು ತಯಾರಿಸುತ್ತದೆ. ಇವುಗಳು ವಾಣಿಜ್ಯ ದೃಷ್ಟಿಯಿಂದ ಹೆಚ್ಚು ಪ್ರಭಾವಶಾಲಿಯಾಗಿದ್ದು, ಕ್ರಿ.ಶ.೧೮೦೦ ಇಂಥ ಯಂತ್ರಗಳ ಬಳಕೆ ಕಂಡುಬರುತ್ತದೆ. ಕಾಗದದಲ್ಲಿ ಆಮ್ಲೀಯತೆಯನ್ನು ತಗೆಯದಿದ್ದರೆ ಅವುಗಳು ಬೇಗನೆ ನಶಿಸಿಹೋಗುವ ಸಾಧ್ಯತೆಯಿರುವುದರಿಂದ ಕಾಗದದಲ್ಲಿರುವ ಆಮ್ಲೀಯತೆಯನ್ನು ಹೋಗಲಾಡಿಸುವುದು ಅಷ್ಟೇ ಮುಖ್ಯವಾಗಿದೆ. ಇದರಿಂದ ಕಾಗದ ಸಂರಕ್ಷಣೆಗೆ ಒಳಗಾಗುತ್ತದೆ.

ಸುಮಾರು ೧೫೦೦ರಲ್ಲಿದ್ದ ನಂಜುಂಡ ಕವಿಯ 'ರಾಮನಾಥ ಚರಿತೆ'ಯಲ್ಲಿ

> ಕರೆಯಿಸಿ ರಾಯಭಾರಿಗಳನಾ ಸುರಿತಾಳ
> ಬರೆಯಿಸಿ ಕಾಗಜಗಳನು
> ಭರದಿಂದ ಕಂಪಿಲ ನೃಪತಿಯ ಬಳಿಗಾ
> ದರ ಮಿಗೆ ಕಳುಪಿದ ನಂದು[೨೬]

ಗೋವಿಂದ ವೈದ್ಯ(೧೬೪೮)ನ 'ಕಂಠೀರವ ನರಸರಾಜ ವಿಜಯದಲ್ಲಿ 'ಕಾಗಜ್' ಎಂಬ ಪದವನ್ನು ಬಳಸಲಾಗಿದೆ. 'ಪತ್ತಳಿಕೆ', 'ಕಾಗಜ' ಈ ಪದಪ್ರಯೋಗವು ಕನ್ನಡ ಸಂಸ್ಕೃತಿಯಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕನ್ನಡ ನಾಡಿನಲ್ಲಿ ಪತ್ರಲೇಖನಕ್ಕಾಗಿ ಕಾಗದ ಬಳಕೆಯಿತ್ತು. ಸಾಲಿಮಠಗಳಲ್ಲಿ ಕಾಗದವನ್ನು ಕಟ್ಟುಗಳನ್ನು ಮಾಡುವುದನ್ನು ಹೇಳಿ ಕೊಡುತ್ತಿದ್ದರೆಂದೂ ಅವನ್ನು ಮಾಡುತ್ತಿದ್ದ ಉಪಕರಣಗಳು ಈಗಲೂ ಸಾಲಿಮಠಗಳ ಮೂಲೆಗಳಲ್ಲಿ ಯಾರಿಗೂ ಬೇಡವಾಗಿ ಬಿದ್ದಿರುವುವೆಂದೂ ಬಿ.ಎಸ್.ಗದ್ದಿಗಿಮಠ ಅವರು ಹೇಳಿರುವುದು ಗಮನಾರ್ಹ. ಈ ಕೈಗಾರಿಕೆ ಬೆಳೆದ ಮೇಲೆ ಕಾಗದವನ್ನು ಗ್ರಂಥಲೇಖನಕ್ಕೂ ಉಪಯೋಗಿಸುತ್ತಿದ್ದಿರಬೇಕು. ಎಲ್ಲೆಲ್ಲಿ ಮುಸಲ್ಮಾನರ ಆಡಳಿತ ಪ್ರಭಾವವಿದ್ದಿತೋ ಅಲ್ಲೆಲ್ಲಾ ಹಸ್ತಪ್ರತಿಗಳ ಲೇಖನಕ್ಕಾಗಿ ಕಾಗದವನ್ನು ಹೆಚ್ಚಾಗಿ ಬಳಸಿದ್ದು ಕಾಣುತ್ತದೆ. ಇದು ಬರವಣಿಗೆಯ ಹೊಸ ಶೋಧಕ್ಕೆ ಪ್ರೇರಕವಾಗಿದೆ.

### ೮.೩. ಕೋರಿಕಾಗದ

ಕರ್ನಾಟಕದಲ್ಲಿರುವ ಕಾಗದದ ಹಸ್ತಪ್ರತಿಗಳನ್ನು ಕೋರಿಕಾಗದ ಪ್ರತಿ, ಬಿಳಿಯ ಕಾಗದದ ಪ್ರತಿ, ನೀಲಿ ಕಾಗದದ ಪ್ರತಿ ಎಂದು ಮೂರು ರೀತಿಯಲ್ಲಿ ವಿಂಗಡಿಸಬಹುದು. ಪ್ರಾರಂಭದಲ್ಲಿ ರಟ್ಟಿನಂತಹ ದಪ್ಪವಾದ

ಮಾಸಲು ಬಿಳಿಯ ಬಣ್ಣದ ಕಾಗದಗಳು ಬಳಕೆಯಲ್ಲಿದ್ದವು. ಇವುಗಳನ್ನು 'ಕೋರಿ ಕಾಗದ' ಎಂದು ಕರೆಯುತ್ತಿದ್ದರು. ನಮ್ಮಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ಕೋರಿ ಕಾಗದಗಳ ಪ್ರತಿಗಳೇ ವಿಪುಲವಾಗಿ ಬಳಕೆಯಾಗುತ್ತಿದ್ದರೆ ದಕ್ಷಿಣದಲ್ಲಿ ತಾಳೆಯೋಲೆಯ ಬಳಕೆಯ ಪ್ರಧ್ಯಾನ. "ದಾಸರ ದೇವರನಾಮಗಳು, ಕೀರ್ತನೆಗಳು– ಒಟ್ಟು ಈ ಸಾಹಿತ್ಯ ಹೆಚ್ಚಾಗಿ ಕೋರಿಕಾಗದದ ಮೇಲೆ ದೇವನಾಗರಿ ಲಿಪಿಯಲ್ಲೂ ಲಿಖಿತಗೊಂಡಿವೆ. ನಮ್ಮ ಹಸ್ತಪ್ರತಿ ಸಂಪತ್ತನ್ನು ತಾಳೆ ಪ್ರತಿಗಳು, ಕಾಗದ ಪ್ರತಿಗಳು ಎಂದು ಬೆರಳಿಟ್ಟು ವಿಭಾಗಿಸುವಷ್ಟು ಪ್ರಮಾಣದಲ್ಲಿ ಕೋರಿಕಾಗದ ಗ್ರಂಥಗಳು ಹುಟ್ಟಿಕೊಂಡಿವೆ."[೨೭]

'ಕೋರಿ' ಎಂದರೆ ಹರಿದ ಬಟ್ಟೆ. ಹರಿದ ಬಟ್ಟೆಯ ಚೂರುಗಳನ್ನೇ ಕುಟ್ಟಿ ಕುಟ್ಟಿ ಮತ್ತೆ ಕೆಲ ಸಾಮಗ್ರಿಗಳನ್ನು ಬೆರಸಿ ಸಿದ್ಧ ಮಾಡಿಡುವುದರಿಂದ ಇದಕ್ಕೆ ಕೋರಿ ಕಾಗದ ಎಂದು ಹೆಸರು ಬಂದಿದೆ. ಕೋರಿ ಕಾಗದಕ್ಕೆ ಕತ್ತೆ ಕಾಗದ ಎಂದೂ ಕರೆಯುವುದುಂಟು. ಇದನ್ನು ಕೈಯಿಂದ ಮಾಡಿದ್ದು. ಬಹು ಒರಟು, ದಪ್ಪ, ಮಾಸಲು ಬಣ್ಣ. ಇದಕ್ಕೆ ತಾಳಿಕೆಯೂ ತುಂಬಾ ಕಡಿಮೆ, ಹುಳು ಹತ್ತುವ ಸಾಧ್ಯತೆ ಹೆಚ್ಚು. ಆದರೆ ಭಾರತದಲ್ಲಿಯೇ ಕಾರ್ಖಾನೆಗಳಲ್ಲಿ ತಯಾರಿಸುತ್ತಿದ್ದ ನೀಲಿ ಕಾಗದವನ್ನೋ ಮಂದವಾದ ಬಿಳಿ ಕಾಗದವನ್ನೋ ಬಳಸಿ ಮಾಡಿದ ಹಸ್ತಪ್ರತಿಗಳು ಕರ್ನಾಟಕದಲ್ಲೆಲ್ಲಾ ಇವೆ. ಇವಕ್ಕೆ ಹುಳು ಬೀಳುವ ಸಂಭವ ಕಡಿಮೆ. ಆದರೆ ಬಿಳಿಯ ಕಾಗದವು ಬಹುಮಂದವಾಗಿದ್ದು, ಉಪಯೋಗಿಸುತ್ತ ಹೋದಂತೆ ಮುರಿಯುವ ಸಂಭವವಿರುತ್ತದೆ. ನೀಲಿ ಕಾಗದವೇ ಹೆಚ್ಚು ಉಪಯುಕ್ತವೂ ಹೆಚ್ಚು ಕಾಲ ತಾಳಿಕೆ ಬರುವುದೂ ಆಗಿದೆ. ಒಳ್ಳೆಯ ಕಾಗದದ ಮೇಲೆ, ಒಳ್ಳೆಯ ಮಸಿಯಿಂದ ಬರೆದ ಹಸ್ತಪ್ರತಿಯು ಸುಮಾರು ಆರುನೂರು ವರ್ಷಗಳ ತಾಳಿಕೆ ಬರುತ್ತದೆ.

ರೇಸಿಮೆಯ ಕಾಗದ, ತುಂಬ ನುಣುಪಾದ ಹೊಳಪು ಕಾಗದ, ವಿವಿಧ ವರ್ಣದ, ವಿವಿಧ ಗುಣಮಟ್ಟದ ಕಾಗದದ ಪ್ರತಿಗಳು ಆ ಕಾಲದಲ್ಲಿ ಉತ್ಪನ್ನವಾಗುತ್ತಿದ್ದವು. ಮೊಗಲರ ಕಾಲದಲ್ಲಿ ಕಾಶ್ಮೀರ, ಸೆಯಿಲ್‌ಕೋಟ್, ಲಾಹೋರ್, ರಾಜಗೀರ್, ಔರಂಗಾಬಾದ್, ಅಹಮದಾಬಾದ್‌ಗಳಲ್ಲಿ ಈ ಉದ್ಯಮವು ಅಭಿವೃದ್ಧಿಯಲ್ಲಿದ್ದು ದೆಹಲಿಯಲ್ಲಿ ಕಾಗದದ ಉದ್ಯಮವೇ ಪ್ರಧಾನವಾಗಿತ್ತು. "ಷಹಜಾದಪುರದಲ್ಲಿ ತಯಾರಾದ ಅತ್ಯುತ್ತಮ ದರ್ಜೆಯ ಕಾಗದವನ್ನು ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಆದರೆ ದಕ್ಷಿಣ ಭಾರತದಲ್ಲಿ ಇಂತಹ ಒಂದು ಕಾರ್ಖಾನೆಯೂ ಇರಲಿಲ್ಲ. ಉತ್ತರದ ಕಾಗದದ ಉದ್ಯಮಗಳೆಲ್ಲವೂ ಫರಂಗಿಯರ ಕಾಗದ ಕಾರ್ಖಾನೆ ಹುಟ್ಟಿದ ಕೆಲವು ವರ್ಷಗಳಲ್ಲಿಯೇ ನಷ್ಟವನ್ನನುಭವಿಸಿ ನಶಿಸಿಹೋದವು."

### ೮.೪. ಮಂದ ತೊಗಟೆಗಳು/ ಭೂರ್ಜ್ವಪತ್ರ

"ತಾಳೆಗರಿಯಂತೆ ಸ್ವಲ್ಪ ಸಂಸ್ಕರಿಸಿ ಬಳಸಬಹುದಾದ ಮತ್ತೊಂದು ಬರಹದ ಸಾಮಗ್ರಿ ಅಂದರೆ ಮರದ ಒಳತೊಗಟೆ. ಭಾರತದಲ್ಲಿ ಎರಡು ವಿಧದ ತೊಗಟೆಯನ್ನು ಈ ಉದ್ದೇಶಕ್ಕಾಗಿ ಬಳಸುತ್ತಿದ್ದರು. ಭಾರತದ ವಾಯುವ್ಯ ಭಾಗದ ಹಿಮಾಲಯ ಪರ್ವತ ಪ್ರದೇಶದಲ್ಲಿ ದೊರೆಯುವ ಭೂರ್ಜ್ವಪತ್ರ(Betula Utilis) ಮತ್ತು ಈಶಾನ್ಯದಲ್ಲಿ ಲೋಳಿಸರ(Aquiloriagallocha) ಇವುಗಳನ್ನು ಉಪಯೋಗಿಸುತ್ತಿದ್ದರು.

ಭೂರ್ಜ್ವಪತ್ರವನ್ನು ಮೊದಲು ನಮಗೆ ಕ್ರಿ.ಶ. ಶತಕದ ಪ್ರಾರಂಭ ಕಾಲಕ್ಕೆ ಸೇರಿದಂತೆ ದೊರೆಯುತ್ತವೆ. ಈ ಹಾಳೆಗಳನ್ನು ಕತ್ತರಿಸಿ, ನುಣುಪು ಮಾಡಿ ಎಣ್ಣೆ ಸವರುತ್ತಿದ್ದರು. ಹೀಗೆ ದೊರೆತಿರುವುವು ಕೆಲವು ಬೌದ್ಧ ಕೃತಿಗಳ ಪಳೆಯುಳಿಕೆಗಳಿವೆ. ಅಲೆಕ್ಸಾಂಡರ್ ಭಾರತಕ್ಕೆ ದಂಡೆತ್ತಿ ಬರುವ ವೇಳೆಗೇನೇ ಅಂದರೆ ಕ್ರಿಪೂ. ೩೨೬ರಲ್ಲಿ ಭೂರ್ಜ್ವದ ತೊಗಟೆಯನ್ನು ಬಳಸಲಾಗುತ್ತಿತ್ತು. ಅಗಲ ಕಡಿಮೆಯಾಗಿದ್ದು ಉದ್ದುದ್ದವಾಗಿರುವ ಕೆಲವು ಇಂಥ ಹಸ್ತಪ್ರತಿಗಳ ಆಕಾರವನ್ನು ನೋಡಿದರೆ ಇವುಗಳಿಗೂ ಗ್ರೀಕರ ಪೆಪಿರಸ್ ಸುರಳಿಗಳಿಗೂ ಸಂಬಂಧವಿದ್ದಂತೆ ಎಂದು ಆಲೋಚಿಸುವಂತಾಗುತ್ತದೆ. ಆದರೆ ಈಗ ದೊರೆತಿರುವ ಭೂರ್ಜ್ವದ ತೊಗಟೆಯ ಹಸ್ತಪ್ರತಿಗಳಲ್ಲಿ ಬಹುಪಾಲು ತಾಳೆಗರಿಯ ಮಾದರಿಯನ್ನೇ ಹೋಲುತ್ತವೆ."[೨೮]

ಭೂರ್ಜ್ವಪತ್ರಗಳು ಉತ್ತರ ಭಾರತದಲ್ಲಿ ವ್ಯಾಪಕವಾಗಿ ಬಳಕೆಯಾದ ಬರಹ ಸಾಮಗ್ರಿಯಾಗಿದೆ. ಕಾಳಿದಾಸನಂತಹ ಕವಿಗಳು ಇದರ ಉಲ್ಲೇಖವನ್ನು ನೀಡುತ್ತಾನೆ. ಅಲ್ಬರೂನಿಯು ಕೂಡ ಹದಗೊಳಿಸಿ ಬರವಣಿಗೆಗೆ ಅಣಿಗೊಳಿಸುತ್ತಲಿದ್ದ ವಿಧಾನವನ್ನು ವಿವರವಾಗಿಯೇ ಕೊಟ್ಟಿದ್ದಾನೆ. ಭೂರ್ಜ್ವಪತ್ರದ ಅತ್ಯಂತ ಪ್ರಾಚೀನ ಕೃತಿಯು ೨–೩ನೆಯ ಶತಮಾನಕ್ಕೆ ಸೇರಿದ್ದಾಗಿದೆ. ಆದರೆ ದಕ್ಷಿಣ ಭಾರತದಲ್ಲಿ ಹಸ್ತಪ್ರತಿಗಳಾಗಿ ಭೂರ್ಜ್ವಪತ್ರದ ಬಳಕೆ ಕಂಡುಬರಲಿಲ್ಲ.

ಭೂರ್ಜ್ವ ಮರದ ತೊಗಟೆ ಅನೇಕ ಪದರುಗಳ ಸಂಯೋಜನೆಯಾಗಿದ್ದು ಅತೀ ತೆಳುವಾದ 'ಟಿಸ್ಸೂ' ಕಾಗದದಂತಿರುತ್ತದೆ. ಇದು ಸಾಮಾನ್ಯವಾಗಿ ಒಂದು ಬದಿಯಲ್ಲಿ ಅತೀ ಕಂದು ಬಣ್ಣದಿಂದ ಕೂಡಿದ್ದರೆ ಮತ್ತೊಂದು ಬದಿಯಲ್ಲಿ ನಸುಕಂದು ಮಿಶ್ರಿತ ಬಿಳಿ ಬಣ್ಣದಿಂದ ಕೂಡಿರುತ್ತದೆ. ಪದರುಗಳು ಸ್ವಾಭಾವಿಕ ಅಂಟು, ಗಂಟು ಹಾಗೂ ಎಳೆಗಳಿಂದ ಜೋಡಣೆಯಾಗಿರುವ ತೊಗಟೆಯ ಸಂಯುಕ್ತ ಭಾಗಗಳಾಗಿವೆ. ಸ್ವಾಭಾವಿಕವಾಗಿ ಬಿದ್ದು ಹೋಗುವ ಬರ್ಚ್ ಮರವು ಸುಮಾರು ೪೬೦೦ ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಸಾಮಾನ್ಯವಾಗಿ ಈ ಮರವು ಹಿಮಾಲಯ ತಪ್ಪಲಿನಲ್ಲಿ ಬೆಳೆಯುವಂಥದ್ದು. ಈ ಮರವು ತೊಗಟೆಯನ್ನು ಬರವಣಿಗಾಗಿ ಉಪಯೊಗಿಸಲಾಗುತ್ತಿತ್ತು. ಬರ್ಚ್ ತೊಗಟೆಯ ಸಾವಯವಕಾರಕ ದ್ರಾವಣಗಳಲ್ಲಿ ಯಥೇಚ್ಛವಾಗಿ ಕರಗುವ ಸರಂಧ್ರ ಪಾಲಿಮಾರ್ ಸಂಯುಕ್ತ(ದಾರು) ರಾಳ, ಅಂಟು ಮತ್ತು ಇತರ ಸಾಮಗ್ರಿಗಳನ್ನು ಹೊಂದಿದೆ.

ಭೂರ್ಜ್ವಪತ್ರ ಇದು ಭಾರತದಲ್ಲಿ ಬಹುಕಾಲದಿಂದಲೂ ಬರೆಯಲು ಬಳಕೆಯಲ್ಲಿರುವ ಸಾಧನ. ಕಾಳಿದಾಸನ 'ವಿಕ್ರಮೋರ್ವಶೀಯಮ್' ನಾಟಕದ ಎರಡನೆಯ ಅಂಕದಲ್ಲಿ ಭೂರ್ಜ್ವಪತ್ರದ ಮೇಲೆ ಬರೆದ ಸಂಗತಿಯು ಬಂದಿದೆ. ರಾಜನು 'ಭೂರ್ಜಪತ್ರ ಗತ್ಯೋಯಮಕ್ಷರ ವಿನ್ಯಾಸಃ ಎಂದು ವಿದೂಷಕನಿಗೆ ತಿಳಿಸಿದ, ಊರ್ವಶಿಯು ಬರೆದು ಹಾರಿ ಬಿಟ್ಟು ಪ್ರೇಮಪತ್ರವಾದ ಭೂರ್ಜ್ವಪತ್ರ, ಸುಪ್ರಸಿದ್ಧ ಹಿಮಾಲಯ ಪ್ರಾಂತದಲ್ಲಿ ಭೂರ್ಜ್ವ ವೃಕ್ಷವು(Birch and Aloe bark) ವಿಶೇಷವಾಗಿ ಬೆಳೆಯುತ್ತದೆ. ವೃಕ್ಷದ ಒಳ ತೊಗಟೆಯನ್ನು ಹದಮಾಡಿ, ಚತುರಶ್ರಾಕಾರದಲ್ಲಿ ಕತ್ತರಿಸಿ, ಲೇಖನಿಯಿಂದ ಇವುಗಳ ಮೇಲೆ ಮಸಿಯಿಂದ ಬರೆಯುತ್ತಿದ್ದರು. ಇಂಥ ಹಸ್ತಪ್ರತಿಗಳು ಕಾಶ್ಮೀರದಲ್ಲಿ ವಿಶೇಷವಾಗಿ ದೊರಕಿವೆ. ಶಾರದಾ ಲಿಪಿಯಲ್ಲಿ

ಮಹಾಭಾರತದ ಒಂದು ಹಸ್ತಪ್ರತಿಯನ್ನು ಭೂರ್ಜ್ವಪತ್ರದ ಮೇಲೆ ಬರೆದಿದೆ. ಭೂರ್ಜ್ವಪತ್ರದ ಹಸ್ತಪ್ರತಿಗಳಲ್ಲಿ ಬವರ್ ಹಸ್ತಪ್ರತಿಗಳು (Bowermss) ಬಹು ಪ್ರಸಿದ್ಧ. ಇದರಲ್ಲಿ ಭೂರ್ಜ್ವಪತ್ರಗಳನ್ನು ತಾಳಪತ್ರಗಳ ಗಾತ್ರಕ್ಕೆ ಕತ್ತರಿಸಿ ಅವುಗಳ ಮಧ್ಯೆಯೂ ರಂಧ್ರ ಹಾಕಿದ್ದು ದಾರವನ್ನು ಪೋಣಿಸಲು ಅನುಕೂಲ ಮಾಡಿದೆ.

**೮.೫. ಬರೆಯಲು ಬಳಸಿದ ಸಾಧನಗಳು**

ನಮ್ಮ ಪುರಾತನರು, ಬರೆಯಲು ಹಲವು ಬಗೆಯಲ್ಲಿ ಸಾಮಗ್ರಿಗಳನ್ನು ಬಳಸಿದರು. ಕಂಠ, ಕುಂಚ, ಬಳಪ, ಉಳಿ, ಚೌಣ, ಮುಳ್ಳು ಹಂದಿಯ ಮುಳ್ಳು, ಬಿದಿರಿನ ಗಲಗು, ಲೆಕ್ಕಣಿಕೆ, ಮಸಿ ಮತ್ತು ಬಣ್ಣ ಇತ್ಯಾದಿಗಳೇ ಆ ಸಾಧನಗಳಾಗಿದ್ದುವು. ಕವಿಗಳಿಗೆ ಹಲಗೆ, ಬಳಪ, ಕಂಠ, ಪತ್ರಗಳು, ಅವಶ್ಯಬೇಕಾದ ವಸ್ತುಗಳಾಗಿದ್ದವು.

ಕುಂಚ ಪ್ರತಿಗಳಿಗೆ ಬಣ್ಣ ಬಳೆಯಲು ಬಳಸುವ ಗರಿ. ನವಿಲು ಗರಿಯೂ ಬಳಸುತ್ತಿದ್ದರು. ಚಿತ್ರ ಬರೆಯಲು ವಿಶೇಷವಾಗಿ ಬಳಸುತ್ತಿದ್ದರು. ಪಂಪ, ಚಾವುಂಡರಾಯ ಹಾಗೂ ಜನ್ನ ಇವರ ಕೃತಿಗಳಿಂದ ವ್ಯಕ್ತವಾಗುತ್ತದೆ. ಬರೆಯಲೆಂದು ಒಟ್ಟಿಗೆ ಪಲಗೆಯಂ ತರಿಸಿಟ್ಟಮಿಟ್ಟು ಬರೆವನ್ನೆಗಂ(ಪಂಪನ ಆದಿಪುರಾಣ)[೨೯]

ಚೈತ್ಯಾಲಯಮಂ ಮಾಡಿಸುವೆನೆಂದು ಬಟ್ಟಿಗೆವಲಗೆಯಂ ತರಿಸಿ
ತದಾಕಾರಮಂ ಬರೆಯೆ (ಚಾವುಂಡರಾಯನ ಚಾವುಂಡರಾಯ ಪುರಾಣ)[೩೦]
ಗಗನೀ ಚಿತ್ರಿಕೆ ಬಾಲಭಾನುಕರಮಂ ಕಣ್ಣಿಟ್ಟು ತೊಯ್ದಿಟ್ಟಲು
ಟ್ಟಗೆಯಿಂ ಕಜ್ಜಳ ಸಜ್ಜಿತಾಬ್ದ ಫಳಕ ಪ್ರಾಗ್ಭಾಗದೊಳ್ ದಿಟ್ಟಗಂ
ಬಗೆಗಂ ಕೌತುಕಮಪ್ಪಿನಂ ಬರೆವವೊಲ್ಚೆಲ್ವಾದುದಂ ನೋಡಿದಂ
ಜಗದೀಶಂ ನವ ನಾಗಬಂಧಘಟನಾ ಸಾದಾಮಿನೀ ಧಾಮಮಂ॥[೩೧]

ಬಳಪ 'ಸವಣಂ' ಎಂಬುದು ಪೊನ್ನನ ಹೆಸರುಗಳಲ್ಲೊಂದು ಆತನ ಅನುಪಲಬ್ದ ಕಾವ್ಯವೊಂದರ ಪದ್ಯದಲ್ಲಿ ಬಳಪದ ಪ್ರಸ್ತಾಪವಿದೆ.

ಸವಣಂ ಬಳಪಂಗೊಳೆ ಗಾಂ
ಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ದಾ
ನವರಿಪು ಚಕ್ರಂಗೊಳೆ ಕೌ
ರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ॥[೩೨]

ಇದು ಶಬ್ದಮಣಿದರ್ಪಣಂ ಗ್ರಂಥದಲ್ಲಿ ಉಲ್ಲೇಖಿತವಾಗಿದೆ. ಅಲ್ಲದೇ ಕುಮಾರವ್ಯಾಸನ 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ' ಎಂದು ಹೇಳಿದ್ದಾನೆ.

ಕಂಠ ತಾಳವೋಲೆಯ ಮೇಲೆ ಬರೆಯಲು ಬಳಸುವ ಸಾಧನವಾಗಿತ್ತು. ತಾಳೆಗರಿ ಮೇಲೆ ಕಂಠದಿಂದ ಕೊರೆದು ನಂತರ ಅದಕ್ಕೆ ಮಸಿಯನ್ನು ಲೇಪಿಸಲಾಗುತ್ತಿತ್ತು. "ನಾಲ್ದೆಸೆಯೊಳ್ ನಾಲ್ವರು ಕಂಠದೊಳ್ ಬರೆಯೆ ಕಬ್ಬಂ ಬೇಜ್ವೆ" ಎಂದು ಕವಿಕಾಮನು 'ಶೃಂಗಾರ ರತ್ನಾಕರ'ದಲ್ಲಿ ಹೇಳಿಕೊಂಡಿದ್ದಾನೆ.

ಲೆಕ್ಕಣಿಕೆ ರನ್ನನ 'ಗದಾಯುದ್ಧ' ಕಾವ್ಯದಲ್ಲಿ 'ಶರವೊಂದಂ ತೆಗೆದು ನಿಜೋದರದಾ ಲೆಕ್ಕಣಿಕೆ ಮಾಡಿ ಗಜಮದ ಮಸಿಯಂ ತರಿಸಿ ಪತಾಕಾ ಪಟದೊಳ್ ಬರೆದಟ್ಟಿದನ್" ಎಂಬಲ್ಲಿ ಬಂದಿದೆ. ಅಭಿನವ ಮಂಗರಾಜನು ನಿಘಂಟುವಿನಲ್ಲಿ 'ಕಲಾಮುಲೇಖನಿಯಕ್ಕು' ಎಂದು ಲೆಕ್ಕಣಿಕೆಯನ್ನು ವಿವರಿಸಿದ್ದಾನೆ.

**೮.೬. ಮಸಿ**

ಮಸಿಯನ್ನು ಬರವಣಿಗೆ ನಂತರ ಲೇಪಿಸುವ ಕಪ್ಪನಿಡುವ ಕೆಲಸ ಮಾಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ಓಲೆಗಳಿಗೆ ಮಸಿಲೇಪಿಸುವ ಕಾರ್ಯಕ್ಕೆ 'ಕಪ್ಪನಿಡು' ಎಂದು ಹೇಳಲಾಗುತ್ತಿತ್ತು. ಈ ಕಪ್ಪ ನಿಡುವ ಪದ್ಧತಿ ಕುತೂಹಲವಾದದ್ದು. ಒಂದು ಕೃತಿಯ ಸಂರಕ್ಷಣೆಗೆ ಇನ್ನೊಂದು ಕೃತಿಯನ್ನು ಸುಡಿಸಿ ಕಪ್ಪನಿಡುವುತಿದ್ದರು. ಉದಾ: ಚಂದ್ರಪ್ರಭ ಚರಿತೆಯಲ್ಲಿನ ದೊಡ್ಡಯ್ಯನ ಮಾತನ್ನು ಜ್ಞಾಪಿಸಿಕೊಳ್ಳಬಹುದು.

ಬಾಣ ಪೇಜಿದ ಕಾದಂಬರಿ ಕಾವ್ಯವ
ಕ್ಷೋಣಿಯಜಿಕೆಯೊಳು ಸುಡಿಸಿ।
ಮಾಣದೆ ಲೀಲಾವತಿಗೆ ಕಪ್ಪಡಿಸಿದ
ಜಾಣ ನೇಮಿಯ ಬಲಗೊಂಬೆ[೩೩]

ಸಂರಕ್ಷಣೆಯಲ್ಲಿ ವಿವಿಧ ಅಕ್ಷರ ಮಾಧ್ಯಮಗಳು ಪ್ರಾಚೀನರ ಸಾಹಿತ್ಯ. ಸಂಸ್ಕೃತಿಯನ್ನು ತಿಳಿಯಲು ಪ್ರಮುಖ ಆಕರವಾಗಿದೆ. ಜ್ಞಾನವನ್ನು ಬರಹ ರೂಪಕ್ಕೆ ತಂದು ಅವುಗಳನ್ನು ಶಿಲೆ, ತಾಳೆಗರಿ, ಭೂರ್ಜ್ವಪತ್ರ, ಕಡತ, ಬಖೈರು, ನಾಮೆ, ಕಾಗದ, ಕೋರಿಕಾಗದದಂತಹ ಬರಹ ಸಾಮಗ್ರಿಗಳ ಮೇಲೆ ಬರೆಯುವುದನ್ನು ಕಂಡುಕೊಂಡರು. ಇವುಗಳ ಮೇಲೆ ಬರೆಯುವುದಕ್ಕೆ ಕಂಠ, ಕುಂಚ, ನವಿಲುಗರಿ, ಬಳಪ ಮಸಿ ಲೇಪಿಸುವುದನ್ನು ಕಂಡುಕೊಂಡರು. ಮಸಿ ಲೇಪನೆ ಅಕ್ಷರಗಳ ಸ್ಫುಟತೆಯ ಜೊತೆಗೆ ಪ್ರತಿಗಳ ಸಂರಕ್ಷಣೆ ಒಳಪಡಿಸುವ ವೈಜ್ಞಾನಿಕ ಮನೋಭಾವನೆ ವ್ಯಕ್ತವಾಗಿದೆ. ಹಸ್ತಪ್ರತಿಗಳ ಸಂರಕ್ಷಣೆ ಸಂವರ್ಧನೆ ಕುರಿತು ಲಿಪಿಕಾರರು ತುಂಬಾ ಕಾಳಜಿಯಿಂದ ಕಳಕಳಿಯಿಂದ ಕೇಳಿಕೊಂಡಿರುವುದಲ್ಲದೆ ಅವುಗಳನ್ನು ನಾಶಗೊಳಿಸಬಾರದೆಂದು ಶಾಪಾಶಯಗಳನ್ನು ಹಾಕುತ್ತಿದ್ದರು. ನಾಶಪಡಿಸಿದವರು ದುರಂತಕ್ಕೆ ಒಳಗಾಗುವರೆಂಬ ವಿಚಾರವನ್ನು ಹೇಳುವ ಮೂಲಕ ಪ್ರಾಚೀನ ಜ್ಞಾನಸಾಮಗ್ರಿಗಳನ್ನು ಲೇಖನ ಸಾಮಗ್ರಿಯಲ್ಲಿ ದಾಖಲಿಸಿ ಸಂರಕ್ಷಿಸುತ್ತಾ ಬಂದಿದ್ದಾರೆ.

**೮.೭. ಆಧುನಿಕ ಅಕ್ಷರ ಮಾಧ್ಯಮಗಳು**

ಕಾಲಕಾಲಕ್ಕೆ ಅಕ್ಷರ ಮಾಧ್ಯಮಗಳು ಬದಲಾವಣೆ ಹೊಂದುತ್ತಾ ಬಂದಿವೆ. ಆಧುನಿಕ ಸಂದರ್ಭದಲ್ಲಿ ಆವಿಷ್ಕಾರಗೊಂಡ ಕಂಪ್ಯೂಟರ್ ತಂತ್ರಜ್ಞಾನ ಬರವಣಿಗೆಯನ್ನು ಅತಿವೇಗದಲ್ಲಿ ಕಡಿಮೆ ಸಮಯದಲ್ಲಿ ಮಾಹಿತಿಯನ್ನು ಸಂಗ್ರಹಿಸುವ, ಸಂರಕ್ಷಿಸುವ ಸಾಮರ್ಥ್ಯ ಹೊಂದಿವೆ. ಸಾಂಪ್ರದಾಯಿಕ ನೆಲೆಯಲ್ಲಿ ಸಿಗುವ ಬರಹ ಸಾಮಗ್ರಿಗಳು ಜಾಗತೀಕರಣ ಮತ್ತು ತಂತ್ರಜ್ಞಾನ ಬಳಕೆಯಿಂದ ಸಂರಕ್ಷಣೆಗೊಂಡು ಬೆಳವಣಿಗೆಗೊಂಡವು. ಇದರಿಂದ ಜ್ಞಾನ ಸಂರಕ್ಷಣೆಯ ವಿಧಾನದಲ್ಲಿ ಅಭೂತಪೂರ್ವ ಬದಲಾವಣೆ ಕಂಡಿತು.

ಡಿ.ಟಿ.ಪಿ ಮೂಲಕ ಸ್ಕ್ಯಾನಿಂಗ್ ಮೂಲಕ, ಧ್ವನಿ ಸಂಕೇತಗಳ ಮೂಲಕ ಜ್ಞಾನವನ್ನು ಕಂಪ್ಯೂಟರ್‌ನಲ್ಲಿ ಸಂಗ್ರಹಿಸಬಹುದಾಗಿದೆ. ಕಂಪ್ಯೂಟರ್ ತಂತ್ರಜ್ಞಾನ ಎಲ್ಲಾ ರಂಗಗಳಲ್ಲಿಯೂ ಕಾರ್ಯನಿರ್ವಹಿಸುತ್ತಿದ್ದು ಜಗತ್ತಿನ ಯಾವುದೇ ಭಾಗದಿಂದ ಮಾಹಿತಿಯನ್ನು ಕ್ಷಣಾರ್ಧದಲ್ಲಿ ನೀಡುವುದಲ್ಲದೆ ಆ ಮಾಹಿತಿಯನ್ನು ಡೌನ್‌ಲೋಡ್ ಮಾಡಿಕೊಂಡು ಮುದ್ರಣ ರೂಪದಲ್ಲಿ ಪಡೆಯಲು ಬರುತ್ತದೆ. ಆ ಮಾಹಿತಿಗೆ ಹೆಚ್ಚುವರಿಯಾಗಿ ಮಾಹಿತಿಯನ್ನು ಸೇರಿಸಲು ಅವಕಾಶವಿದೆ.

ಮಾನಿಟರ್, ಸಿಸ್ಟಮ್ ಯುನಿಟ್, ಡಿವಿಡಿ/ಸಿಡಿರಾಮ್, ಝಿಪ್ ಡ್ರೈವ್, ಫ್ಲಾಪಿ ಡ್ರೈವ್, ಪವರ್ ಸ್ವಿಚ್, ಮೌಸ್, ಕೀಬೋರ್ಡ್, ಸ್ಕ್ಯಾನರ್, ಡಿಜಿಟಲ್ ಕ್ಯಾಮರಾ, ಮುದ್ರಣಯಂತ್ರ, ಧ್ವನಿವರ್ಧಕಗಳು ಇವುಗಳು ಕಂಪ್ಯೂಟರ್‌ನ ಬಾಹ್ಯ ವಸ್ತುಗಳಾಗಿವೆ. ಮೈಕ್ರೋಸಾಫ್ಟ್ ವಿಂಡೋಸ್ ಅಲ್ಲದೇ ಅನ್ವಯನ ತಂತ್ರಾಂಶ, ವ್ಯವಸ್ಥಾ ತಂತ್ರಾಂಶ, ಕಾರ್ಯಾಚರಣೆ ವ್ಯವಸ್ಥೆ ಕಂಪ್ಯೂಟರ್ ಸಾಫ್ಟ್‌ವೇರ್‌ಗಳು ಕಂಪ್ಯೂಟರ್‌ನ ಕಾರ್ಯದಕ್ಷತೆಯನ್ನು ಹೆಚ್ಚಿಸುತ್ತದೆ.

ಕಂಪ್ಯೂಟರ್ ದತ್ತಾಂಶಗಳನ್ನು ನೀಡುವ ಸಾಧನಗಳಲ್ಲಿ ಸ್ಕ್ಯಾನರ್ ಸಲಕರಣೆಯೂ ಒಂದಾಗಿದೆ. ಇದು ಕಂಪ್ಯೂಟರಿಗೆ ಛಾಯಾಚಿತ್ರದ ಅಥವಾ ಬರವಣಿಗೆ ರೂಪದ ಮಾಹಿತಿಯ ಪ್ರತಿಬಿಂಬವನ್ನು ಕಂಪ್ಯೂಟರಿಗೆ ವರ್ಗಾಯಿಸುವ ಮೂಲಕ ಇದು ಒಂದು ರೀತಿಯಲ್ಲಿ ಜೆರಾಕ್ಸ್ ಯಂತ್ರದಂತೆ ಕಾರ್ಯ ಮಾಡುತ್ತದೆ. ಆದರೆ ಇದೊಂದು ಪ್ರತಿಯನ್ನು ಮುದ್ರಿಸುವ ಬದಲು ಆ ಪ್ರತಿಬಿಂಬವನ್ನು ಸ್ಮರಣೆಯಲ್ಲಿ ಬರಹ ಮಾಹಿತಿಯನ್ನು ಕಂಪ್ಯೂಟರ್‌ನಲ್ಲಿ ಸಂಗ್ರಹಿಸಿಕೊಳ್ಳುತ್ತದೆ. ಬೇಕಾದಾಗ ಆ ಮಾಹಿತಿಯನ್ನು ಮುದ್ರಣ ರೂಪದಲ್ಲಿ ಪಡೆಯಬಹುದು.

ಕಂಪ್ಯೂಟರ್ ತಂತ್ರಜ್ಞಾನ ಆವಿಷ್ಕಾರಗೊಂಡಂತೆ ಕಂಪ್ಯೂಟರ್‌ನ ಮಾಹಿತಿಯನ್ನು ಕಾಪಾಡುವ ಮ್ಯಾಗ್ನೇಟಿಕ್ ಮೀಡಿಯಾಗಳು ರೂಪಗೊಂಡವು. ಫ್ಲಾಪಿಗಳು, ಹಾರ್ಡ್‌ಡಿಸ್ಕ್‌ಗಳು, ಸಿಡಿಗಳು, ಡಿವಿಡಿಗಳು, ಪೆನ್‌ಡ್ರೈವ್‌ಗಳು ಕಂಪ್ಯೂಟರ್‌ನ ಮಾಹಿತಿಯನ್ನು ಹೆಚ್ಚು ಸುರಕ್ಷಿತವಾಗಿ ಸಂಗ್ರಹಿಸುವ, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸುಲಭವಾಗಿ ಬಯ್ಯಲು ಬಳಸಲಾಗಿದೆ. ಇವುಗಳಲ್ಲಿರುವ ಮಾಹಿತಿಯನ್ನು ಮರುಬಳಕೆಗೂ ಬಳಸಲಾಗುತ್ತಿತ್ತು. ಕಂಪ್ಯೂಟರ್‌ನ ಮೈಕ್ರೊಫಿಲ್ಮಿಂಗ್ ತಂತ್ರಜ್ಞಾನದ ಮೂಲಕ ಹಸ್ತಪ್ರತಿಗಳನ್ನು ಫೋಟೋಗ್ರಫಿ ತಂತ್ರಜ್ಞಾನದ ಸದುಪಯೋಗ ಪಡೆದು ಸಂರಕ್ಷಿಸಿಡಲಾಯಿತು.

ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಗ್ರಂಥರೂಪದಲ್ಲಿ ಪಡೆಯುವ ಒಂದು ವಿಧಾನವಾದರೆ, ಈ ಸಂರಕ್ಷಣೆಗೊಂಡ ಮಾಧ್ಯಮಕ್ಕಿಂತ ಸುಲಭವಾಗಿ ಕಡಿಮೆ ವೆಚ್ಚದಲ್ಲಿ ಹೆಚ್ಚು ಪ್ರತಿಗಳನ್ನು ಪಡೆಯುವ ಕಂಪ್ಯೂಟರ್‌ನ ಡಿಜಿಟಲ್ ತಂತ್ರಜ್ಞಾನ ಬಳಸಲಾಯಿತು. ಆಡಿಯೋ ವಿಡಿಯೋ ರೂಪದಲ್ಲಿ ಮಾಹಿತಿಯನ್ನು ಪಡೆಯಲು ಮಾಹಿತಿಯನ್ನು ಸಂಗ್ರಹಿಸಿ ಸಂರಕ್ಷಿಸಲು ಕಂಪ್ಯೂಟರ್ ಡಿಜಿಟಲ್ ತಂತ್ರಜ್ಞಾನ ಬಳಕೆಗೊಂಡಿತು. ಗ್ರಂಥಾಲಯವನ್ನು ಡಿಜಿಟಲೀಕರಣಗೊಳಿಸುವ ಮೂಲಕ ಹೆಚ್ಚು ಓದುಗರಿಗೆ ಮಾಹಿತಿಯನ್ನು ಏಕಕಾಲದಲ್ಲಿ ಜ್ಞಾನವನ್ನು ಉಣಬಡಿಸುವ ಮಾಧ್ಯಮವಾಗಿದೆ. ಹೀಗಾಗಿ ಆಧುನಿಕ ಸಂದರ್ಭದಲ್ಲಿ ಕಡಿಮೆ ಸಮಯದಲ್ಲಿ ಹೆಚ್ಚಿನ

ಜ್ಞಾನವನ್ನು ಪಡೆಯಲು ಕಂಪ್ಯೂಟರ್ ಮತ್ತು ಕಂಪ್ಯೂಟರ್‌ನ ಮುಂದುವರೆದ ತಂತ್ರಜ್ಞಾನದ ಆವಿಷ್ಕಾರಗಳನ್ನು ಮಾಧ್ಯಮಗಳು ಜ್ಞಾನವನ್ನು ಆಧುನಿಕ ಕಾಲಕ್ಕೆ ಅನುಗುಣವಾಗಿ ಸಂಗ್ರಹ, ಸಂರಕ್ಷಣೆ, ಸಂವರ್ಧನೆ, ಪುನರುತ್ಪಾದನೆಯನ್ನು ಶರವೇಗದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ.

**ಅಡಿಟಿಪ್ಪಣಿ**

೧. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೯, ೧೯೯೨

೨. ಆಲ್ಬರ್ಟನ್ ಗೌರ(ಮೂಲ) ಶ್ರೀನಿವಾಸ ಹಾವನೂರ, ಲಕ್ಷ್ಮೀನಾರಾಯಣ(ಅನು) ಪ್ರಾಚೀನ ಲೇಖನ ಸಾಮಗ್ರಿ, ಪು.೯, ೨೦೦೩

೩. ಅದೇ, ಪು.೧೦, ೧೧, ೨೦೦೩

೪. ಅದೇ, ಪು.೧೧, ೧೨, ೨೦೦೩

೫. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೨೦, ೧೯೯೨

೬. ಅದೇ, ಪು.೨೧, ೧೯೯೨

೭. ಅದೇ, ಪು.೨೧, ೧೯೯೨

೮. ಅದೇ, ಪು.೨೧, ೧೯೯೨

೯. ಅದೇ, ಪು.೨೧, ೧೯೯೨

೧೦. ಅದೇ, ಪು.೨೧, ೧೯೯೨

೧೧. ಡಿ.ಎಲ್. ನರಸಿಂಹಚಾರ್ಯ, ಕನ್ನಡ ಗ್ರಂಥ ಸಂಪಾದನೆ, ಪು.೩೯; ೧೯೬೪

೧೨. ಬಿ.ಎಸ್.ಸಣ್ಣಯ್ಯ, ಪ್ರಬುದ್ಧ ಕರ್ನಾಟಕ, ಸಂ.೫೨, ಸಂ.೧ರ ಓಲೆಗ್ರಂಥಗಳು ಎಂಬ ಲೇಖನದ ಪು.೯ರಲ್ಲಿ ಈ ವಿವರ ದೊರೆಯುತ್ತದೆ.

೧೩. ಎಚ್. ದೇವಿರಪ್ಪ, ಕನ್ನಡ ಹಸ್ತಪ್ರತಿಗಳ ಇತಿಹಾಸ, ಪು.೧೪, ೧೯೯೯

೧೪. ಡಿ.ಎಲ್.ನರಸಿಂಹಚಾರ್ಯ, ಕನ್ನಡ ಗ್ರಂಥ ಸಂಪಾದನೆ, ಪು.೩೮; ೧೯೬೪

೧೫. ವೀರೇಶ ಬಡಿಗೇರ(ಸಂ), ಹಸ್ತಪ್ರತಿ ಅಧ್ಯಯನ, ಪು.೪-೫, ೨೦೦೫

೧೬. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೪೪, ೧೯೯೨

೧೭. ಸಿ. ವೀರಣ್ಣ, ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ಪು.೪೫, ೨೦೧೧

೧೮. ಅದೇ, ಪು.೫೦, ೨೦೧೧

೧೯. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೨೩೪, ೧೯೯೨

೨೦. ಅದೇ, ಪು.೨೩೪, ೧೯೯೨

೨೧. ಸೀತಾರಾಮ ಜಾಗೀರ್‌ದಾರ್, ಗ್ರಂಥ ಸಂಪಾದನಶಾಸ್ತ್ರ ಪರಿಚಯ, ಪು.೨೦, ೧೯೭೮

೨೨. ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ಪು.೨೩೫, ೧೯೯೨

೨೩. ವೀರೇಶ ಬಡಿಗೇರ(ಸಂ), ಹಸ್ತಪ್ರತಿ ಅಧ್ಯಯನ, ಪು.೧೦೨, ೨೦೦೫

೨೪. ಅದೇ, ಪು.೧೦೩, ೨೦೦೫

೨೫. ಅದೇ, ಪು.೧೦೪-೧೦೫, ೨೦೦೫

೨೬. ಎಚ್. ದೇವಿರಪ್ಪ, ಕನ್ನಡ ಹಸ್ತಪ್ರತಿಗಳ ಇತಿಹಾಸ, ಪು.೫, ೧೯೯೯

೨೭. ಸೀತಾರಾಮ ಜಾಗೀರ್‌ದಾರ್, ಗ್ರಂಥ ಸಂಪಾದನಾಶಾಸ್ತ್ರ ಪರಿಚಯ, ಪು.೧೪, ೧೯೭೮

೨೮. ಅಲ್ಬರ್ಟನ್ ಗೌರ್(ಮೂಲ) ಶ್ರೀನಿವಾಸ ಹಾವನೂರ, ಲಕ್ಷ್ಮೀನಾರಾಯಣ ಆರೋರಾ(ಅನು), ಪು.೧೪, ೨೦೦೩

೨೯. ಸೀತಾರಾಮ ಜಾಗೀರ್‌ದಾರ್, ಗ್ರಂಥ ಸಂಪಾದನಾಶಾಸ್ತ್ರ ಪರಿಚಯ, ಪು.೧೫, ೧೯೭೮

೩೦. ಅದೇ, ಪು.೧೫, ೧೯೭೮

೩೧. ಅದೇ, ಪು.೧೫, ೧೯೭೮

೩೨. ಅದೇ, ಪು.೧೬, ೧೯೭೮

೩೩. ಅದೇ, ಪು.೧೭, ೧೯೭೮



## ಅಧ್ಯಾಯ ಒಂಭತ್ತು

# ಸಂರಕ್ಷಣೆ ಮತ್ತು ಆಧುನಿಕ ಸಂದರ್ಭ

೯.೧. ಹಸ್ತಪ್ರತಿಗಳ ಭೌತಿಕ ಸಂರಕ್ಷಣೆ

- ೯.೧.೧. ಸಂರಕ್ಷಣಾ ಕ್ರಮಗಳು
- ೯.೧.೧.೧. ಬೆಳಕಿನಿಂದ ರಕ್ಷಿಸುವುದು
- ೯.೧.೧.೨. ಕೀಟಗಳಿಂದ ರಕ್ಷಿಸುವುದು
- ೯.೧.೧.೩. ಧೂಳು ಮತ್ತು ವಾತಾವರಣದ ವೈಪರಿತ್ಯಗಳಿಂದ ರಕ್ಷಿಸುವ ಕ್ರಮಗಳು
- ೯.೧.೧.೪. ರಾಸಾಯನಿಕ ಸಂರಕ್ಷಣಾ ಕ್ರಮಗಳು

೯.೨. ಆಧುನಿಕ ಸಂಗ್ರಹ ಹಾಗೂ ಸಂರಕ್ಷಣಾ ಮಾಧ್ಯಮಗಳು

- ೯.೨.೧. ಮೈಕ್ರೋಫಿಲಿಂಗ್
- ೯.೨.೨. ಕಂಪ್ಯೂಟರ್
- ೯.೨.೨.೧. ಗಣಕೀಕರಣ(ಡಿಜ಼ಿಟಲೀಕರಣ)
- ೯.೨.೨.೧.೧. ತಾತ್ಕಾಲಿಕ ಸ್ಮರಣೆ
- ೯.೨.೨.೧.೨. ಶಾಶ್ವತ ಸ್ಮರಣೆ

೯.೩. ಸಂಗ್ರಹಣಾ ಸಾಧನಗಳು

- ೯.೩.೧. ಡಿ.ವಿ.ಡಿ/ ಸಿ.ಡಿ. ರಾಮ್
- ೯.೩.೨. ಪ್ಲಾಷಿ ಡ್ರೈವ್
- ೯.೩.೩. ಸ್ಕ್ಯಾನರ್
- ೯.೩.೪. ಗಣತಟ್ಟೆ
- ೯.೩.೫. ಸಿ.ಡಿ ರೋಮ್
- ೯.೩.೬. ಕಂಪ್ಯೂಟರ್ ಸಂಗ್ರಹ ವಿಧಾನಗಳ ಗುಣಾವಗುಣಗಳು
- ೯.೩.೭. ಮಿತಿಗಳು

ಹಸ್ತಪ್ರತಿಗಳ ಸಂರಕ್ಷಣೆ ಕಾರ್ಯ ಕಾಲದಿಂದ ಕಾಲಕ್ಕೆ ವಿವಿಧ ರೀತಿಯಿಂದ ನಡೆಯುತ್ತ ಬಂದಿದೆ. ಆಧುನಿಕ ಕಾಲದಲ್ಲಿ ಆವಿಷ್ಕಾರಗೊಂಡ ತಂತ್ರಜ್ಞಾನವನ್ನು ಬಳಸಿಕೊಂಡು ಸಾಂಪ್ರದಾಯಿಕ ಸಂರಕ್ಷಣೆಯ ಕ್ರಮಕ್ಕಿಂತ ಭಿನ್ನವಾಗಿ ಮಾಡಲಾಗುತ್ತಿದೆ. ನಮ್ಮ ಹಿರಿಕರು ಮಾಡುವ ಸಾಂಪ್ರದಾಯಿಕ ಸಂರಕ್ಷಣೆ ಹೆಚ್ಚು ಸ್ಥಳೀಯವಾಗಿದ್ದಂತೆ ಬಹಳ ಶ್ರಮಪೂರಿತವೂ ಆದದ್ದಾಗಿತ್ತು. ಹೀಗಾಗಿ ಇಂದು ತಂತ್ರಜ್ಞಾನ ಬಳಕೆಯ ಮೂಲಕ ಹಸ್ತಪ್ರತಿಗಳ ಸಂರಕ್ಷಣೆ ಮಾಡಲಾಗುತ್ತಿದೆ. ತಂತ್ರಜ್ಞಾನದ ಆವಿಷ್ಕಾರದಿಂದ ಪ್ರಾಚೀನ ಜ್ಞಾನ ಸಾಮಗ್ರಿಗಳಾದ ಹಸ್ತಪ್ರತಿಗಳನ್ನು ಕಂಪ್ಯೂಟರಿನಲ್ಲಿ ಡಿಟಿಪಿ ಮತ್ತು ಸ್ಕ್ಯಾನಿಂಗ್ ಮಾಡುವ ಮೂಲಕ ಸಂರಕ್ಷಿಸಲಾಗುತ್ತಿದೆ. ಹಸ್ತಪ್ರತಿ ಭಂಡಾರದಲ್ಲಿರುವ ಹಸ್ತಪ್ರತಿಗಳ ಉಪಚರಣೆಯಲ್ಲಿ ತಂತ್ರಜ್ಞಾನ ಇಂದು ಅಗತ್ಯವಾಗಿದೆ. ಉದಾ ಹಸ್ತಪ್ರತಿಗಳಲ್ಲಿರುವ ಧೂಳನ್ನು ತೆಗೆಯಲು, ಬೆಳಕಿನ ಪ್ರಮಾಣವನ್ನು ನಿಯಂತ್ರಿಸಲು, ಉಷ್ಣಾಂಶ, ತೇವಾಂಶದಿಂದ ಮತ್ತು ಕ್ರಿಮಿಕೀಟಗಳಿಂದ ಸಂರಕ್ಷಿಸಲು ಆಧುನಿಕ ಸಂರಕ್ಷಣಾ ವಿಧಾನಗಳು ಉಪಕಾರಿಯಾಗಿವೆ.

ಪ್ರಬಲ ಮತ್ತು ಸಮರ್ಥ ಮಾಧ್ಯಮವಾಗಿ ಹೊರಬರುತ್ತಿರುವ ಕಂಪ್ಯೂಟರನ್ನು ಹಸ್ತಪ್ರತಿಗಳಂತಹ ಪಾರಂಪರಿಕ ಜ್ಞಾನಕ್ಷೇತ್ರದಲ್ಲಿ ಸಮಗ್ರವಾಗಿ ಬಳಸಿಕೊಳ್ಳುವ ಇರಾದೆ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ್ದಾಗಿದೆ. ೧೯೯೬ ರಲ್ಲಿ ಮೊಟ್ಟ ಮೊದಲ ಬಾರಿಗೆ ಹಸ್ತಪ್ರತಿಗಳನ್ನು ವೈಜ್ಞಾನಿಕ ಆವಿಷ್ಕಾರಗಳ ಮೂಲಕ ಕಂಪ್ಯೂಟರಗೆ ಅಳವಡಿಸಿದ ಕೀರ್ತಿ ಪ್ರೊ.ವೀರೇಶ ಬಡಿಗೇರ ಅವರಿಗೆ ಸಲ್ಲುತ್ತದೆ. ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಸಾಹಿತ್ಯ ಸಂಪತ್ತಾದ ಹಸ್ತಪ್ರತಿಗಳ ಸಂರಕ್ಷಣೆ ಹಾಗೂ ಸಂಗ್ರಹ ಸಂಸ್ಕರಿಸುವ ಕಾರ್ಯ ನಡೆಯುತ್ತಿರುವುದು ಆಧುನಿಕ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿದೆ.

### ೬.೧. ಹಸ್ತಪ್ರತಿಗಳ ಭೌತಿಕ ಸಂರಕ್ಷಣೆ

ಆಧುನಿಕ ತಂತ್ರಜ್ಞಾನದ ಮೂಲಕ ಹಸ್ತಪ್ರತಿ ಗ್ರಂಥಗಳನ್ನು ಸಂರಕ್ಷಿಸುವಾಗ ಮುಂಜಾಗ್ರತ ಕ್ರಮಗಳನ್ನು ಕೈಗೊಳ್ಳಬೇಕು. ಹೆಚ್ಚು ಜಾಗ್ರತೆಯಿಂದ ಅವುಗಳ ಉಪಯೋಗ ಮಾಡುವ ತರಬೇತಿಯನ್ನು ಹೊಂದಿರಬೇಕಾಗಿರುವುದು ಮುಖ್ಯವಾಗಿದೆ. ಧೂಳು, ಸೂರ್ಯನ ಕಿರಣಗಳಿಂದ ಉಷ್ಣಾಂಶ ತೇವಾಂಶಗಳಿಂದ ಕ್ರಿಮಿಕೀಟಗಳಿಂದ ಮತ್ತು ಕಂಪ್ಯೂಟರ್ ಆವಿಷ್ಕಾರದ ತಂತ್ರಜ್ಞಾನದ ಅಳವಡಿಕೆಯಲ್ಲಿ ಹೆಚ್ಚು ಪರಿಜ್ಞಾನ

ಮಾಡುವದು ಮುಖ್ಯವಾಗಿದೆ. ಹಸ್ತಪ್ರತಿಗಳ ಧೂಳನ್ನು ತೆಗೆಯಲು ಮೆತ್ತನೆಯ, ದಪ್ಪವಾದ ಬ್ರಷ್‌ನ ಬಳಕೆಯು ಸರಳ ವಿಧಾನವಾಗಿದೆ. ಅಲ್ಲದೇ ಕಪಾಟನಲ್ಲಿರುವ ಧೂಳನ್ನು ವ್ಯವಸ್ಥಿತವಾಗಿ ಹಾಗೂ ನಿಯಮಿತವಾಗಿ ತೆಗೆದುಹಾಕಬೇಕು. ವ್ಯಾಕುಮ್‌ಕ್ಲೀನರ್‌ನಂತಹ ಉಪಕರಣದ ಬಳಕೆ ಹೆಚ್ಚು ಸೂಕ್ತವಾದುದು. ಬಟ್ಟೆಯಿಂದ ಧೂಳನ್ನು ಹೊಡೆಯುವ ವಿಧಾನ ಅಷ್ಟೊಂದು ಒಳ್ಳೆಯದಲ್ಲ ಅದು ಹಸ್ತಪ್ರತಿ ಮತ್ತು ಕಾಗದ ಪ್ರತಿಗಳ ತುದಿಗಳಿಗೆ ಹಾನಿ ಮಾಡುವುದಲ್ಲದೆ ಪ್ರತಿಗಳು ಮುರಿಯುವ ಸಂಭವ ಹೆಚ್ಚು. ಗ್ರಂಥಗಳನ್ನು ವಾರದಲ್ಲಿ ಒಂದು ಬಾರಿಯಾದರೂ ಸ್ವಚ್ಛಗೊಳಿಸಬೇಕು.

ಹಸ್ತಪ್ರತಿಗಳು ನೀರು, ಬೆಂಕಿ ಇತ್ಯಾದಿಗಳಿಂದ ಹಾಳಾಗದಂತೆ ದೀರ್ಘ ಕಾಲ, ಸೂಕ್ತ ರೀತಿಯಲ್ಲಿ ಸಂರಕ್ಷಿಸುವುದು ಸವಾಲಿನ ಕೆಲಸವೇ ಸರಿ. ಆಕಸ್ಮಿಕವಾಗಿ ಇಂತಹ ಹಸ್ತಪ್ರತಿಗಳು ನಾಶಗೊಂಡರೆ, ಅವುಗಳ ನಕಲು ಪ್ರತಿಗಳ ಸಹಾಯದಿಂದ ಮೂಲ ಆಕರ ಸಾಹಿತ್ಯ ಅಥವಾ ಅವುಗಳ ಹೂರಣವನ್ನು ಮರುಪಡೆಯಲು ಸಾಧ್ಯವಾಗುವಂತೆ ಹಸ್ತಪ್ರತಿಗಳನ್ನು ವಿವಿಧ ರೂಪಗಳಲ್ಲಿ ಪ್ರತಿಗಳನ್ನಾಗಿ ಅಂದರೆ ಮರುಪಡೆಯಬಹುದಾದ ಮಾಧ್ಯಮಗಳಿಗೆ ಪರಿವರ್ತಿಸಿ ಇಡಲಾಗುತ್ತಿದೆ.

ಹಸ್ತಪ್ರತಿಗಳ ಮೇಲಾಗಿರುವ ಕಲೆಗಳನ್ನು ವೈಜ್ಞಾನಿಕ ವಿಧಾನಗಳಿಂದ ಹೋಗಲಾಡಿಸಿ ಅದನ್ನು ಸಾಧ್ಯವಾದಷ್ಟು ಮಟ್ಟಿಗೆ ಮೂಲಸ್ಥಿತಿಗೆ ಬರುವ ತಂತ್ರಜ್ಞಾನವನ್ನು ಮತ್ತು ರಾಸಾಯನಿಕ ಮೂಲಕ ಸಾಧ್ಯವಾಗುತ್ತದೆ. ಈ ರೀತಿಯ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಹಸ್ತಪ್ರತಿಗಳನ್ನು ಸಂರಕ್ಷಣೆಗೆ ಒಳಪಡಿಸಿದಾಗಲೂ ಅವು ಹೆಚ್ಚು ದಿನಗಳವರೆಗೆ ಉಳಿಯುತ್ತವೆ ಎಂದು ಹೇಳುವಂತಿಲ್ಲ. ತತ್ಕಾಲದಲ್ಲಿ ಮಾತ್ರ ಸಂರಕ್ಷಣೆಗೆ ಒಳಗಾಗಿ ನಂತರ ಮತ್ತೆ ಸೋಂಕಿಗೆ ಒಳಗಾಗುವ ಸಾಧ್ಯತೆ ಇರುವುದರಿಂದ ಕಾಲಕಾಲಕ್ಕೆ ಹಸ್ತಪ್ರತಿಗಳಿಗೆ ಪೂರ್ವೋಚಿತವಾಗಿ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ಯಾವ ಪ್ರಮಾಣದಲ್ಲಿ ರಾಸಾಯನಿಕ ಬಳಸಿದರೆ ಹಸ್ತಪ್ರತಿಗಳ ಸಂರಕ್ಷಣೆ ಸಾಧ್ಯ ಎಂಬುದನ್ನು ಅರಿತಿರಬೇಕಾಗಿರುತ್ತದೆ.

### ೯.೧.೧. ಸಂರಕ್ಷಣಾ ಕ್ರಮಗಳು

#### ೯.೧.೧.೧. ಬೆಳಕಿನಿಂದ ರಕ್ಷಿಸುವುದು

೧. ಕಪಾಟಿನ ಒಳಗಡೆ ಅಳವಡಿಸಿದ ಕೃತಕ ಬೆಳಕಿನ ಟ್ಯೂಬ್‌ಲೈಟ್‌ಗಳು (ಬಲ್ಪ್‌ಗಳು) ನೀಲಲೋಹಿತ ಬೆಳಕಿನಿಂದ ಶಾಖ ಉತ್ಪತ್ತಿಯಾಗಿ ಒಣಹವೆಗೆ ಕಾರಣವಾಗುತ್ತದೆ. ಇದರಿಂದ ಹಸ್ತಪ್ರತಿಗಳು ನಾಶವಾಗುವುದರಿಂದ ಟ್ಯೂಬ್ ಲೈಟ್‌ಗಳ ಬೆಳಕಿನಿಂದ ರಕ್ಷಿಸಲು ಹಸ್ತಪ್ರತಿಗಳ ಮೇಲೆ ತೆಳುವಾದ ಬಟ್ಟೆಯನ್ನು ಹೊದಿಸಬೇಕು. ಇಂತಹ ಕೃತಕ ಬಲ್ಪ್‌ಗಳನ್ನು ತುಂಬಾ ಜಾಗ್ರತೆಯಿಂದ ಬಳಸಬೇಕು.

೨. ೪೦ ಲಕ್ಸ್‌ಗೆ ಮೀರದಂತಹ ಬೆಳಕಿನ ಪ್ರಮಾಣದಲ್ಲಿ ಹಸ್ತಪ್ರತಿಗಳನ್ನು ಇಡುವುದು. ಬೆಳಕನ್ನು ಅಳೆಯುವ ಲಕ್ಸ್ ಮೀಟರ್ ಯಂತ್ರವನ್ನು ಅಳವಡಿಸಬೇಕು. ಬೆಳಕಿನ ಪ್ರಮಾಣ ಹೆಚ್ಚಾಗಿದ್ದರೆ ಡಿಮ್ಮರ್ ಸಹಾಯದ ಮೂಲಕ ಮಂದಗೊಳಿಸಿ ಬೆಳಕಿನ ಪ್ರಮಾಣ ಕಡಿಮೆ ಮಾಡುವುದು

ಹಸ್ತಪ್ರತಿಗೆ ಸಮಾನಾಂತರವಾಗಿ ಲಕ್ಸ್ ಮೀಟರ್‌ನ್ನಿಟ್ಟು ಬೆಳಕಿನ ತೀವ್ರತೆಯನ್ನು ಅಳೆಯಬೇಕು. ಕಡಿಮೆಯೆಂದರೆ ಹಸ್ತಪ್ರತಿಗಳಿಗೆ ಬೇಕಾದ ಪ್ರಮಾಣದಲ್ಲಿ ಬೆಳಕನ್ನು ಒದಗಿಸಬೇಕು.

೩. ಟ್ಯೂಬ್ ಲೈಟುಗಳ ಬೆಳಕಿನಿಂದ ರಕ್ಷಿಸಲು ಜಿಂಕ್ ಆಕ್ಸೈಡ್ ಅಥವಾ ಟೆಟೇನಿಯಂ ಡಿಯೋಕ್ಸೈಡ್‌ಗಳನ್ನು ಗೋಡೆ ಹಾಗೂ ಮೇಲ್ಛಾವಣಿಗಳಿಗೆ ಬಣ್ಣ ಹಚ್ಚುವಾಗ ಉಪಯೋಗಿಸುವುದರಿಂದ ಪ್ಲೋರೆಸೆಂಟ್ ಟ್ಯೂಬ್‌ಗಳಿಂದ ಹೊರಸುಸುವ ಬೆಳಕಿನ ನೇರ ಕಿರಣಗಳಿಂದ ರಕ್ಷಿಸುವುದು.

೪. ಕಿಟಕಿಗಳಿಗೆ ಸೂಕ್ತ ಸಾಧನಗಳನ್ನು ಬಳಸುವುದು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಪ್ರದರ್ಶನಕ್ಕೆ ಒಳಪಡಿಸುವಾಗ ಕೊಠಡಿಯನ್ನು ಬೆಳಕಿನ ಕಡಿಮೆ ಪ್ರಖರತೆ ಇರುವಂತೆ ವ್ಯವಸ್ಥೆಗೊಳಿಸುವುದು.

೫. ಸೂರ್ಯನ ಬೆಳಕು ಒಳಗೆ ಬರದಂತೆ ತೆರೆಗಳನ್ನು (ಪರದೆಗಳನ್ನು) ಕಿಟಕಿ ಮತ್ತು (ಬಾಗಿಲುಗಳಿಗೆ) ಮುಖ್ಯದ್ವಾರಗಳಿಗೆ ಅಳವಡಿಸಿ ಅಥವಾ ಅವುಗಳನ್ನು ಮುಚ್ಚುವುದು[೧]

೬. ಲಕ್ಸ್ ಮೀಟರನ್ನು ಉಪಯೋಗಿಸುವ ವಿಧಾನ ಲಕ್ಸ್ ಮೀಟರನ್ನು ಉಪಯೋಗಿಸುವಾಗ ಮೊದಲು ಸ್ವಿಚ್ ಆನ್ ಮಾಡಿ ಅದರಲ್ಲಿರುವ ತ್ರಾಸನ್ನು ಸರಿಹೊಂದಿಸಿ ಬೆಳಕಿನ ಮೂಲಕ್ಕೆ ಅದರಲ್ಲಿರುವ ಸೆನ್ಸಾರನ್ನು ಅಭಿಮುಖಗೊಳಿಸಬೇಡಿ. ಪ್ರದರ್ಶನಕ್ಕಿಟ್ಟ ವಸ್ತುವಿಗೆ ಸಮಾನಾಂತರವಾಗಿ ಸೆನ್ಸಾರನ್ನಿಡುವುದು ಸರಿಯಾದ ಕ್ರಮವಾಗಿದೆ. ಸೆನ್ಸಾರಿನ ಮೇಲೆ ಬೀಳಬೇಕಾದ ಬೆಳಕನ್ನು ನಿಮ್ಮ ಶರೀರವು ತಡೆಯದಂತೆ ಜಾಗ್ರತೆ ವಹಿಸಿ ರೀಡಿಂಗನ್ನು ದಾಖಲಿಸಿ ಮೀಟರನ್ನು ಸ್ವಿಚ್ ಆಫ್ ಮಾಡಿ.[೨]

೭. ಹಸ್ತಪ್ರತಿಗಳನ್ನು ವೀಕ್ಷಿಸಲು ಸಂದರ್ಶಕರು ಇಲ್ಲದಿದ್ದಾಗ ಇರುವ ಎಲ್ಲಾ ದೀಪಗಳನ್ನು ಆರಿಸಿ ಮತ್ತು ಪ್ರದರ್ಶನಕ್ಕಿಟ್ಟ ಎಲ್ಲಾ ಹಸ್ತಪ್ರತಿಗಳನ್ನು ಬಟ್ಟೆಯಿಂದ ಮುಚ್ಚಿ.

**೯.೧.೧.೨. ಕೀಟಗಳಿಂದ ರಕ್ಷಿಸುವುದು**

೧. ಫ್ಯೂಮಿಗೇಶನ್ ಕೊಠಡಿಯ ಮತ್ತು ಅವಶ್ಯಕ ರಾಸಾಯನಿಕ ವಸ್ತುಗಳ ಸಹಾಯದಿಂದ ಮತ್ತು ಈ ಬಗ್ಗೆ ತರಬೇತಿ ಹೊಂದಿರುವ ಸಿಬ್ಬಂದಿಯ ಸಹಕಾರದಿಂದ ಯಾವುದೇ ಸೋಂಕನ್ನು ಸುಲಭವಾಗಿ ಮತ್ತು ಹೆಚ್ಚು ಪರಿಣಾಮಕಾರಿಯಾಗಿ ತಡೆಗಟ್ಟಬಹುದು. ಈ ರೀತಿ ಮಾಡಿದ ಕ್ರಮ ಕೇವಲ ಸೋಂಕಿನಿಂದ ಮಾತ್ರ ಹಸ್ತಪ್ರತಿಗಳನ್ನು ರಕ್ಷಿಸುತ್ತದೆ. ಅವಶ್ಯಕ ಮುನ್ನೆಚ್ಚರಿಕೆಯ ಕ್ರಮಗಳನ್ನು ಅನುಸರಿಸದಿದ್ದಲ್ಲಿ ಹಸ್ತಪ್ರತಿಗಳಿಗೆ ಮತ್ತೆ ಸೋಂಕು ತಗಲುವ ಸಾಧ್ಯತೆಯಿದೆ.

೨. ಹಸ್ತಪ್ರತಿಗಳ ಭಂಡಾರದಲ್ಲಿ ಕ್ರಿಮಿನಾಶಕ ಕಾಗದಗಳನ್ನಿಡಬೇಕು. ರಾತ್ರಿಯ ಸಮಯದಲ್ಲಿ ತಪ್ಪದೆ ಕಿಟಕಿಗಳನ್ನು ಮುಚ್ಚಬೇಕು. ಕ್ರಿಮಿಕೀಟಗಳು ಒಳ ಬರದಂತೆ ಕಿಟಕಿಗಳಿಗೆ ತಂತಿಯ ಜಾಲವನ್ನು ಹಾಕುವುದು ಹಸ್ತಪ್ರತಿಗಳ ಸಂರಕ್ಷಣೆಯ ದೃಷ್ಟಿಯಿಂದ ಉತ್ತಮವಾದುದು.

೩. ಹಸ್ತಪ್ರತಿಗಳ ಭಂಡಾರದ ಕಟ್ಟಡವನ್ನು ಕಟ್ಟುವ ಸಮಯದಲ್ಲಿ ಗೆದ್ದಲು ನಿವಾರಕ ತಂತ್ರಜ್ಞಾನವನ್ನು ಬಳಸುವುದರಿಂದ ಗೆದ್ದಲುಗಳನ್ನು ನಿವಾರಿಸಬಹುದಾಗಿದೆ. ಹಸ್ತಪ್ರತಿಯ ಭಂಡಾರದಲ್ಲಿ ಹಸ್ತಪ್ರತಿಯನ್ನು ಇಡುವ ಕಪಾಟುಗಳನ್ನು ಗೋಡೆಯಿಂದ ಮತ್ತು ಕಿಟಕಿಗಳಿಂದ ದೂರದಲ್ಲಿ ಇಡಬೇಕು. ಕಪಾಟುಗಳ ಒಳಗೆ ಕಪಾಟಿನ ಮೇಲೆ ಮತ್ತು ಕೆಳಗೆ ಕ್ರಿಮಿನಾಶಕ ಪುಡಿಯನ್ನು ಇಡುವುದರಿಂದ ಕ್ರಿಮಿಕೀಟಗಳಿಂದ ಸಂರಕ್ಷಿಸಬಹುದು.

೪. ಹಸ್ತಪ್ರತಿಗೆ ಯಾವ ಸೋಂಕು ತಗಲಿದಲ್ಲಿ ಹಸ್ತಪ್ರತಿಯ ಪರಿಣಿತರಿಂದ ತಿಳಿದು ಅವರ ಮಾಹಿತಿಯಂತೆ ರಾಸಾಯನಿಕದ ಬಳಕೆಯನ್ನು ಯಾವ ಪ್ರಮಾಣದಲ್ಲಿ ಮಾಡಬೇಕು ಎಂಬುದನ್ನು ತಿಳಿದು ಬಳಸಬೇಕಾಗುತ್ತದೆ. ಇಲ್ಲದಿದ್ದರೆ ಅತಿಯಾದ ರಾಸಾಯನಿಕ ಲೇಪನದಿಂದ ಹಸ್ತಪ್ರತಿಗಳು ನಾಶವಾಗುವ ಸಂಭವವಿದೆ.

### ೯.೧.೧.೩. ಧೂಳು ಮತ್ತು ವಾತಾವರಣದ ವೈಪರಿತ್ಯಗಳಿಂದ ರಕ್ಷಿಸುವ ಕ್ರಮಗಳು

೧. ಹಸ್ತಪ್ರತಿಗಳನ್ನು ಸ್ಟಾರ್ಚ್‌ರಹಿತ ಹತ್ತಿಯ ದಪ್ಪ ಬಟ್ಟೆಯಲ್ಲಿ ಸುತ್ತಿ ಕಟ್ಟಡದ ಒಳಗಿನ ಕೊಠಡಿಯೊಳಗಿಟ್ಟು ತೇವಾಂಶವನ್ನು ಹೀರುವಂತಹ ವಸ್ತುಗಳಾದ ಹತ್ತಿಯ ಪರದೆಗಳನ್ನು ಮತ್ತು ಪೀಠೋಪಕರಣಗಳನ್ನು ಸಂಗ್ರಹದ ಸುತ್ತಲೂ ಜೋಡಿಸುವುದರಿಂದ ಬಹುಮಟ್ಟಿಗೆ ಉಷ್ಣಾಂಶ ಮತ್ತು ಸಂಬಂಧಕ ತೇವಾಂಶವನ್ನು ನಿಯಂತ್ರಣದಲ್ಲಿಡಬಹುದು. ಈ ವಸ್ತುಗಳು (ಕಾಪುತಡೆಗಳು ಬಫರ್) ಹೊರಗಿನಿಂದ ಬರುವ ತೇವಾಂಶವನ್ನು ಹೀರಿ ನಿಧಾನವಾಗಿ ಬಿಡುವುದರಿಂದ ವಾತಾವರಣದಲ್ಲಿ ಉಂಟಾಗಬಹುದಾದ ಏರಿಳಿತವನ್ನು ವೈಪರಿತ್ಯವನ್ನು ತಡೆದು ಹಸ್ತಪ್ರತಿಗಳನ್ನು ಕಾಪಾಡುತ್ತವೆ.[೩]

೨. ಸಂಗ್ರಹಿತ ಹಸ್ತಪ್ರತಿಗಳನ್ನು ಧೂಳು ಮತ್ತು ಮಲೀನತೆಯಿಂದ ಕಾಪಾಡುವುದು.

೩. ಹಸ್ತಪ್ರತಿಗಳ ಸಂಗ್ರಹದ ಕಟ್ಟಡ ಭಂಡಾರದ ಸುತ್ತಮುತ್ತಲಿನಲ್ಲಿ ಗಿಡ ಮರಗಳನ್ನು ನೆಡುವುದು, ಹುಲ್ಲುಗಾವಲು ಪ್ರದೇಶ ನಿರ್ಮಿಸುವುದು.

೪. ಮುಖ್ಯದ್ವಾರದಿಂದ ಹೆಚ್ಚು ಸುರಕ್ಷಿತವಾದ ಕಟ್ಟಡದ ಕೋಣೆಯಲ್ಲಿ ಹಸ್ತಪ್ರತಿಗಳ ಸಂಗ್ರಹ ಮಾಡುವುದು.

೫. ಕಿಟಕಿಯನ್ನು (ಸದಾ ಕಾಲ) ಸಾಧ್ಯವಾದಷ್ಟು ಮುಚ್ಚುವುದು.

೬. ಹಸ್ತಪ್ರತಿ ಸಂಗ್ರಹಣಾ ಕೊಠಡಿ ಪ್ರವೇಶದ ಎಲ್ಲಾ ದ್ವಾರಗಳ ಕೆಳಗೆ ಉತ್ತಮ ಗುಣಮಟ್ಟದ ಕಾಲೊರೆಸುವ ಚಾಪೆಗಳನ್ನು ಹಾಕಿ ಅವುಗಳನ್ನು ದಿನವೂ ಸ್ವಚ್ಛಗೊಳಿಸಬೇಕು.

೭. ಹಸ್ತಪ್ರತಿಗಳನ್ನು ಲೋಹೇತರ ಅಂದರೆ ಕಟ್ಟಿಗೆಯ ಕಪಾಟಿನಲ್ಲಿಟ್ಟು ಮುಚ್ಚಬೇಕು.

೮. ಕಟ್ಟಡದ ಒಳಗಿರುವ ಪೀಠೋಪಕರಣಗಳನ್ನು ಒದ್ದೆಯಾದ ಬಟ್ಟೆಯಿಂದ ಸ್ವಚ್ಛಗೊಳಿಸಬೇಕು. ವ್ಯಾಕ್ಯೂಮ್ ಅನ್ನು ಪೀಠೋಪಕರಣಗಳಿಗೆ ಮಾತ್ರ ಬಳಸಬೇಕು. ಆದರೆ ಹಸ್ತಪ್ರತಿಗಳಿಗೆ ಬಳಸಬಾರದು.

೯. ಹಸ್ತಪ್ರತಿಗಳನ್ನು ಉಪಯೋಗಿಸಲು ಬರುವಂತೆ ಹಸ್ತಪ್ರತಿಗಳ ಮಧ್ಯೆ ಸಾಕಷ್ಟು ತೆರದ ಸ್ಥಳವಿರಬೇಕಾಗುತ್ತದೆ.

೧೦. ನೆಲವನ್ನು ಧೂಳು ಏಳದಂತೆ ನಿಧಾನವಾಗಿ ಕಸ ಪೊರಕೆಯನ್ನು ನೆಲಕ್ಕೆ ಹತ್ತಿಸಿ ಒರಿಸಬೇಕು.

೧೧. ಸಂಚಾರ ವ್ಯವಸ್ಥೆಯಿರುವ ಕಡೆ ಹವಾನಿಯಂತ್ರಣ ಯಂತ್ರವನ್ನು ಅಳವಡಿಸಬಾರದು. ಅತ್ಯಂತ ಕನಿಷ್ಠ ಪ್ರಮಾಣದ ಮಾಲಿನ್ಯವಿರುವ ಕಡೆ ಮಾತ್ರ ಈ ಯಂತ್ರಗಳ ಬಳಕೆ ಸೂಕ್ತವಾಗಿದೆ.

೧೨. ಗಾಳಿಯಲ್ಲಿರುವ ಸಲ್ಫರ್ ಡಯಾಕ್ಸೈಡ್‌ನಂತೆ ವಿಷಕಾರಿ ಅನಿಲಗಳು ಮತ್ತು ಧೂಳನ್ನು ಇಲ್ಲದಂತಾಗಿಸಲು ಸೂಕ್ಷ್ಮ ತುಂತುರ ಯಂತ್ರದಿಂದ ನೀರನ್ನು ಸಿಂಪಡಿಸುವುದರಿಂದ ಗಾಳಿಯಿಂದ ಬರುವ ಅಪಾಯಕಾರಿಯಾದ ವಸ್ತುಗಳಿಂದ ಹಸ್ತಪ್ರತಿಗಳನ್ನು ಸಂರಕ್ಷಿಸಬಹುದು.

೧೩. ಹಸ್ತಪ್ರತಿಗಳನ್ನು ಕೆಂಪು ಹತ್ತಿ ಬಟ್ಟೆಯಿಂದ ಕಟ್ಟಿಡುವುದು ಹಸ್ತಪ್ರತಿಗಳ ಮೇಲೆ ಹೊದಿಸುವುದರಿಂದ ರಕ್ಷಿಸಬಹುದಾಗಿದೆ.

೧೪. ಉಷ್ಣವಲಯದ ದೇಶ ಅಥವಾ ಪ್ರದೇಶಗಳಲ್ಲಿ ಉಷ್ಣಾಂಶ ಮತ್ತು ತೇವಾಂಶ ಪ್ರಮಾಣ ಅಧಿಕವಾಗಿರುತ್ತದೆ. ಹವಾನಿಯಂತ್ರಣದ ಯಂತ್ರಗಳ ಬಳಕೆ ಸದಾ ಕಾಲ ಚಾಲ್ತಿಯಲ್ಲಿರಬೇಕಾಗುತ್ತದೆ. ಸಮರ್ಥವಾಗಿ ಅದರ ಬಳಕೆ ಇಲ್ಲದಿದ್ದರೆ ಹಸ್ತಪ್ರತಿಗಳನ್ನು ಸಂರಕ್ಷಿಸಲು ಸಾಧ್ಯವಾಗುವುದಿಲ್ಲ. ಎಂಬುದನ್ನು ತಿಳಿದಿರಬೇಕಾಗುತ್ತದೆ. ಹಸ್ತಪ್ರತಿಗಳಲ್ಲಿ ವರ್ಣ ಚಿತ್ರಗಳಿದ್ದರೆ ಪುಟಗಳ ಮಧ್ಯೆ ಟಿಶ್ಯೂ ಕಾಗದಗಳನ್ನು ಇಡುವುದರಿಂದ ಪುಟಗಳು ಒಂದಕ್ಕೊಂದು ಉಜ್ಜಿ ವರ್ಣಚಿತ್ರಗಳು ಹಾಳಾಗುವುದು ತಪ್ಪಿಸಬಹುದು. ಟಿಶ್ಯೂ ಕಾಗದ ರೋಗ ನಿರೋಧಕ ಗುಣ ಹೊಂದಿರುವುದರಿಂದ ಹಸ್ತಪ್ರತಿ ರಕ್ಷಣೆಗೆ ಸಹಾಯಕವಾಗಿ ಕೂಡಾ ಬಳಸಬಹುದು.

೧೫. ಉಷ್ಣಾಂಶ ಮತ್ತು ತೇವಾಂಶ ಅಳೆಯಲು ವಿಶೇಷ ಯಂತ್ರಗಳ ಬಳಕೆ ಮಾಡಿ. ತರ್ಮೋ ಹೈಗ್ರೋಗ್ರಾಫನ್ನು ಉಪಯೋಗಿಸುವುದರಿಂದ ಕಟ್ಟಡದ ಒಳಗಾಗುವ ವಾತಾವರಣದ ಏರುಪೇರುಗಳನ್ನು ತಿಳಿದು ಸೂಕ್ತವಾದ ಕ್ರಮಕೈಗೊಳ್ಳಲು ಸಾಧ್ಯವಾಗುತ್ತದೆ. ಹಸ್ತಪ್ರತಿಗಳನ್ನು ಪ್ರದರ್ಶನಕ್ಕೆ ಅಣಿ ಮಾಡಿದರೆ ಸಂದರ್ಶಕರ ಚಲನವಲನಗಳನ್ನು ಗಮನಿಸಿ ಹಸ್ತಪ್ರತಿಗಳಿಗೆ ಯಾವುದೇ ಹಾನಿಯಾಗದಂತೆ ನೋಡಿಕೊಳ್ಳಬೇಕು. ಸಂಗ್ರಹದ ಸುತ್ತಮುತ್ತಲಿನ ಪ್ರದೇಶದಲ್ಲಿ ನೀರು ಸಂಗ್ರಹವಾಗದಂತೆ ಮುಂಜಾಗ್ರತೆ ವಹಿಸಬೇಕಾಗುತ್ತದೆ. ತೇವಾಂಶವನ್ನು ನಿಯಂತ್ರಿಸುವ ಸಿಲಿಕ್ ಜೆಲ್‌ಗಳನ್ನು ಹಸ್ತಪ್ರತಿಗಳ ಕಪಾಟಿನ ಒಳಗಡೆಯಿಡಬೇಕಾಗುತ್ತದೆ. ತೇವಾಂಶ ಪ್ರಮಾಣ ಹೆಚ್ಚಾಗದಂತೆ ಮತ್ತು ಶೇಕಡ ೪೫%ಕ್ಕಿಂತ ಕಡಿಮೆಯಾಗದಂತೆ ನೋಡಿಕೊಳ್ಳಬೇಕು.

೧೬. ಹಸ್ತಪ್ರತಿ ಸಂಗ್ರಹದ ಕೊಠಡಿಗೆ ಉತ್ತಮ ಮಟ್ಟದ ಗಾಳಿ ಬೆಳಕು ಬರುವಂತೆ ಇರಬೇಕಾಗುತ್ತದೆ. ಇಲ್ಲದೆ, ನಿಂತ ಗಾಳಿಯ ವಾತಾವರಣವಿದ್ದರೆ ಬೂಷ್ಟು ಹಿಡಿದು ಕ್ರಿಮಿಕೀಟಗಳು ಹುಟ್ಟುವ ಸಂಭವವಿರುತ್ತದೆ. ಆದ್ದರಿಂದ ಸದಾಕಾಲ ಉತ್ತಮ ಗಾಳಿ, ಬೆಳಕು ಬರುವ ವ್ಯವಸ್ಥೆಯಿರಬೇಕು.

ಗಾಳಿಯಾಡದ ಪ್ರದೇಶವಾಗಿದ್ದರೆ ಮ್ಲಾನಗಾಳಿಯನ್ನು ಹೊರದೂಡುವ 'ಎಗ್ಝಾಸ್ಟ್ ಫ್ಯಾನ್'ಗಳನ್ನು ಉಪಯೋಗಿಸಬೇಕು. ಹಸ್ತಪ್ರತಿಗಳಲ್ಲಿ ತೇವಾಂಶ ಹೆಚ್ಚಾದಲ್ಲಿ ಸೂರ್ಯನ ಬಿಸಿಲಿನಲ್ಲಿ ಒಣಗಿಸದೆ ನೆರಳಿರುವ ಕೊಠಡಿಯಲ್ಲಿ ಒಣ ಹಾಕಿ ನಿಧಾನವಾಗಿ ಚಲಿಸುವ ಫ್ಯಾನಿನ ಗಾಳಿಯಲ್ಲಿ ಮತ್ತು ವರ್ಣಚಿತ್ರಗಳಿಲ್ಲದ ಹಸ್ತಪ್ರತಿಗಳನ್ನು ಮಸಿಯನ್ನು ಆರಿಸುವ ಬ್ಲಾಟರ್ ಕಾಗದಗಳ ಮೂಲಕ ಒಣಗಿಸಬಹುದು.

೧೭. ಆಹಾರ ಪದಾರ್ಥ ತಿಂಡಿ ತಿನಿಸುಗಳನ್ನು ಹಸ್ತಪ್ರತಿಗಳ ಭಂಡಾರದಲ್ಲಿ ಉಪಯೋಗಿಸಬಾರದು. ಇದರಿಂದ ಕ್ರಿಮಿಕೀಟಗಳನ್ನು ನಿಯಂತ್ರಿಸಬಹುದು. ಹಸ್ತಪ್ರತಿಗಳಿಗೆ ಬಟ್ಟೆಯನ್ನು ಆಗಾಗ ಸ್ವಚ್ಛಗೊಳಿಸಬೇಕು. ಹಸ್ತಪ್ರತಿ ಸಂಗ್ರಹದ ಭಂಡಾರವನ್ನು ಆಗಿಂದಾಗ್ಗೆ ಪರಿಶೀಲಿಸಿ, ಮರದ ಹಲಗೆಯಲ್ಲಿ ರಂಧ್ರಗಳಾಗಿದ್ದರೆ ತಕ್ಷಣ ಸಂಬಂಧಪಟ್ಟವರಿಗೆ ತಿಳಿಸಿ ಸಂರಕ್ಷಣಾ ಕ್ರಮಗಳನ್ನು ಅನುಸರಿಸಬೇಕು. ಸೋಂಕು ತಗುಲಿದ ಹಸ್ತಪ್ರತಿಯನ್ನು ಬೇರ್ಪಡಿಸಿ ಅದರ ನಿವಾರಣೆಗೆ ಕ್ರಮಕೈಗೊಳ್ಳಬೇಕು.

### ೯.೧.೧.೪. ರಾಸಾಯನಿಕ ಸಂರಕ್ಷಣಾ ಕ್ರಮಗಳು

ಹಸ್ತಪ್ರತಿಗಳಿಗೆ ನೇರವಾಗಿ ಸೂರ್ಯನ ಕಿರಣಗಳು ಬೀಳದಂತೆ ನೋಡಿಕೊಳ್ಳಬೇಕು. Ultra Violet ಗ್ಲಾಸುಗಳು Ultra Violet ವಿಕಿರಣಗಳನ್ನು ತಡೆಯುವುದರಿಂದ ಅದನ್ನು ಕಿಟಕಿಗಳಿಗೆ ಬಳಸುವುದು ಉತ್ತಮವಾದುದು. ಆದರೆ ಇದು ಬಹಳ ವೆಚ್ಚದಾಯಕವಾದುದು. ಸರಳ ಆದರೆ ಬಹಳ ಪ್ರಯೋಜನಕಾರಿಯಲ್ಲದ ವಿಧಾನವೆಂದರೆ ಎಲ್ಲಾ ಕಿಟಕಿಗಳಿಗೆ ಪರದೆಗಳನ್ನು ಹಾಕುವುದಾಗಿದೆ. ರಟ್ಟು ಕಟ್ಟಿದ ಹಸ್ತಪ್ರತಿ ಗ್ರಂಥಗಳನ್ನು ಒಂದರ ಮೇಲೊಂದು ಇಡುವುದರಿಂದ ಹಸ್ತಪ್ರತಿಗಳು ಹಾಳಾಗುತ್ತವೆ. ಹಸ್ತಪ್ರತಿಗಳು ಕಾಲಾನಂತರದಲ್ಲಿ ಮುರಿಯುವ ಮತ್ತು ಬಣ್ಣವನ್ನು ಕಳೆದುಕೊಳ್ಳುವುದರಿಂದ ಚಿಕಿತ್ಸಾ ಮನೋಭಾವನೆಯಿಂದ ಅದರ ಬಾಳಿಕೆಯನ್ನು ಜಾಸ್ತಿ ಮಾಡುತ್ತದೆ. ೧.ಹಸ್ತಪ್ರತಿಗೆ ದ್ರಾವಣವನ್ನು ಲೇಪಿಸುವುದು, ದ್ರಾವಣದಲ್ಲಿ ಎದ್ದಿ ನೆರಳಿನಲ್ಲಿ ಒಣಗಿಸಬೇಕು. ೨. ಒಣಗಿದ ಮೇಲೆ ನೀರಿನಲ್ಲಿ ಜೆಲಾಟಿನ್ ದ್ರಾವಣದ ಪದರವನ್ನು ಹಾಳೆಗಳಿಗೆ ಕೊಡಬೇಕು ಮತ್ತು ಪುನಃ ನೇತುಹಾಕಿ ಒಣಗಿಸಬೇಕು. ಕಾಗದ ಪ್ರತಿಗಳು ದುರ್ಬಲಗೊಂಡಿದ್ದರೆ ಎರಡು ಜಲ್ಲಿ ಕಾಗದ ಪೊರೆ ಕಾಗದದ ನಡುವೆ ದುರ್ಬಲವಾಗಿರುವ ಹಾಳೆಯನ್ನು ಇಟ್ಟು ಅವುಗಳನ್ನು ಸೆಲ್ಯೂಲೋಸ್ ಎಸಿಟೇಟನ್ನು ಅಂಟನ್ನಾಗಿ ಉಪಯೋಗಿಸಿ ಅದನ್ನು ಸೀಲಿಂಗ್ ಮಾಡುವುದನ್ನು ಕಾರ್ಯವಿಧಾನವು ಒಳಗೊಂಡಿರುತ್ತದೆ.[೪]

ನಿರಾಮ್ಲೀಕರಣ (Deacidification) ಮತ್ತು ಸೈಜಿಂಗ್ ಮಾಡಲು ಉಪಯೋಗಿಸುವ ರಾಸಾಯನಿಕ ವಸ್ತುಗಳು ಕೆಳಕಂಡಂತಿವೆ. ೧. ಬೆರಿಯಂ ಹೈಡ್ರಾಕ್ಸೈಡ್ ೨. ಮೆಥೆನಾಲ್ ೩.ಜಿಲಾಟೀನ್ ಕಾಗದ ಹಸ್ತಪ್ರತಿಗಳಿಗೆ ಬಳಸುವ ವಿಧಾನ ೧೦೦ ಪ್ರತಿಗಳಿಗೆ ೫೦೦ ಮೀಲಿ ಮೆಥೆನಾಲ್ ೫ ಗ್ರಾಂ ಬೆರಿಯಂ

ಹೈಡ್ರಾಕ್ಸೈಡ್ ಮತ್ತು ೦.೭೫ ಗ್ರಾಂ ಜಿಲಾಟೀನ್ ಮಿಶ್ರಣಬೇಕಾಗುತ್ತದೆ. ಕಾಗದ ಹಸ್ತಪ್ರತಿಗಳನ್ನು ನಿರಾಮ್ಲೀಕರಣದಿಂದ ಸಂರಕ್ಷಿಸಿಡಬಹುದು.

### ೯.೨. ಆಧುನಿಕ ಸಂಗ್ರಹ ಹಾಗೂ ಸಂರಕ್ಷಣಾ ಮಾಧ್ಯಮಗಳು

### ೯.೨.೧. ಮೈಕ್ರೋಫಿಲ್ಮಿಂಗ್

ಆಧುನಿಕ ತಂತ್ರಜ್ಞಾನದಲ್ಲಿ ಮೈಕ್ರೊಫಿಲ್ಮ್ ತಂತ್ರಜ್ಞಾನವು ಅತ್ಯುತ್ತಮ ಕೊಡುಗೆಯನ್ನು ನೀಡಿತು. ಫೋಟೋಗ್ರಫಿ ತಂತ್ರಜ್ಞಾನದ ಸದುಪಯೋಗ ಪಡೆದು, ಹಸ್ತಪ್ರತಿಗಳನ್ನು ಮೈಕ್ರೋಫಿಲ್ಮ್‌ಗಳನ್ನಾಗಿ ಪರಿವರ್ತಿಸಿ ಸಂರಕ್ಷಿಸುವುದು ಆ ಕಾಲದ ಮಹತ್ವದ ತಂತ್ರಜ್ಞಾನವಾಗಿತ್ತು. ಅಗತ್ಯವಿದ್ದಾಗ, ಮೈಕ್ರೋಫಿಲ್ಮ್‌ನ್ನು ಬಳಸಿ, ಹಸ್ತಪ್ರತಿಯ ಮರುಮುದ್ರಣವನ್ನು ಪಡೆಯಬಹುದಾಗಿತ್ತು. ಮೈಕ್ರೋಫಿಲ್ಮ್ ರೀಡರ್‌ಗಳನ್ನು ಬಳಸಿ ಅವುಗಳನ್ನು ಓದಬಹುದಾಗಿತ್ತು. ನೂರಾರು ಪುಟಗಳನ್ನು ಒಂದೇ ಪ್ಲಾಸ್ಟಿಕ್ ಶೀಟ್ ಮೇಲೆ ಮುದ್ರಿಸುವ ಮೈಕ್ರೊಫಿಷ್ ಮತ್ತು ಮೈಕ್ರೋಫಿಲ್ಮ್ ಎನ್ನುವ ತಂತ್ರಜ್ಞಾನ ಕೆಲವಾರು ದಶಕಗಳಿಂದ ಲಭ್ಯವಿದೆ. ಈ ಮೈಕ್ರೋಫಿಲ್ಮ್ ಅಥವಾ ಮೈಕ್ರೋಫಿಷ್ ತಂತ್ರಜ್ಞಾನದ ಬದಲಾಗಿ ಹೊಸ ತಂತ್ರಜ್ಞಾನವನ್ನು ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ಬಳಸಲಾಗುತ್ತಿದೆ. ಅದೇ ಕಂಪ್ಯೂಟರ್ ಡಿಜಿಟಲ್ ತಂತ್ರಜ್ಞಾನ ವಿದ್ಯುನ್ಮಾನ ತಂತ್ರಜ್ಞಾನದ ಮಹತ್ವದ ಆವಿಷ್ಕಾರವಾಗಿರುವ ಕಂಪ್ಯೂಟರ್ ಸ್ಮರಣಾ (ಕಂಪ್ಯೂಟರ್ ಮೆಮೊರಿ) ಕಾರ್ಯತಂತ್ರಗಳು ಮಾನವ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಸಹ ಕ್ರಾಂತಿಯನ್ನು ಉಂಟುಮಾಡಿವೆ. ಹಸ್ತಪ್ರತಿಗಳ ಸಂಗ್ರಹಣೆ ಮತ್ತು ಸಂರಕ್ಷಣೆಯಲ್ಲಿಯೂ ಸಹ ಈ ಡಿಜಿಟಲ್ ತಂತ್ರಜ್ಞಾನ ಎಂದು ಕರೆಯಲಾಗುವ ವಿದ್ಯುನ್ಮಾನ ಸ್ಮರಣಾ ತಂತ್ರಜ್ಞಾನವನ್ನು ಅತ್ಯುತ್ತಮವಾಗಿ ಬಳಸಿಕೊಳ್ಳಲಾಗುತ್ತಿದೆ. ಸಾಹಿತ್ಯ ಅಥವಾ ಇತರೆ ಜ್ಞಾನಶಕ್ತಿಗೆ ಸೇರಿದ, ಬರಹರೂಪದ ಗ್ರಂಥಗಳ ಗ್ರಂಥರೂಪಗಳ ಮಾಹಿತಿಯನ್ನು ಇಂದು ಡಿಜಿಟಲೀಕರಣಗೊಳಿಸಲಾಗುತ್ತದೆ. ಅಲ್ಲದೇ (ಆಡಿಯೋ ವಿಡಿಯೋ) ಚಿತ್ರರೂಪದ ಧ್ವನಿರೂಪ ಚಲನಚಿತ್ರರೂಪದ ಮಾಹಿತಿಗಳು ಡಿಜಟಲೀಕರಣಗೊಂಡಿವೆ.

### ೯.೨.೨. ಕಂಪ್ಯೂಟರ್

ಮತ್ತೊಬ್ಬರ ಕೈಬರಹಗಳನ್ನು ಕಷ್ಟಪಟ್ಟು ಓದಬೇಕಾದ ಪರಿಸ್ಥಿತಿಯನ್ನು ಕನ್ನಡದ ತಂತ್ರಾಂಶಗಳು ಇಂದು ಹೋಗಲಾಡಿಸುತ್ತಿವೆ. ನೇರವಾಗಿ ಗಣಕಪರದೆಯ ಮೇಲೆ ಲೇಖನವನ್ನು ಬರೆಯುವ ಅವಕಾಶಗಳು ನಮ್ಮವಾಗುತ್ತಿವೆ. ಕೈಗೆ ಮಸಿ ಅಂಟದ ಅಕ್ಷರಗಳು ಚಿತ್‌ಕಾಟ್ ಆಗದ, ತಪು ತಪ್ಪಾಗಿ ಓದುವ ಹಲವಾರು ನ್ಯೂನತೆಗಳನ್ನು ಕನ್ನಡ ಸಾಫ್ಟ್‌ವೇರ್‌ಗಳು ಕಡಿಮೆಗೊಳಿಸುತ್ತಿವೆ.[೫] ಅಕ್ಷರವು ಅಕ್ಷರ ಎನ್ನುವ ಪಾರಂಪರಿಕ ನಂಬಿಕೆಯನ್ನೇ ಕಂಪ್ಯೂಟರ್ ಕ್ರಾಂತಿ ಹುಸಿಯಾಗಿಸುತ್ತಿದೆ. ಲಿಪಿ ಅಥವಾ ಬರವಣಿಗೆಯನ್ನು ಪವಿತ್ರ ಮತ್ತು ಶಾಶ್ವತವೆಂದು ನಂಬಿಕೊಂಡು ಬಂದ ಪರಂಪರೆಯಲ್ಲಿ ಅಕ್ಷರ ಅಮೂಲ್ಯವಾದದ್ದಾಗಿತ್ತು. ಅದಕ್ಕೊಂದು ಸೊಗಸು ಇತ್ತು. ಇಂಥ ಸೊಗಸುಗಾರ ಲಿಪಿಕಾರರ ಪರಂಪರೆಯೇ ಕನ್ನಡಕ್ಕಿದೆ ಎಂಬುದು ಗಮನಾರ್ಹ.[೬] ಕಡಿಮೆ ಶ್ರಮದ ಮೂಲಕ ಅಕ್ಷರದ ಪಾವಿತ್ರತೆಯನ್ನು ಮೀರಿ ಹೊಸದಾಗಿ ಸಂಸ್ಕರಿಸುವ ಮತ್ತು ಮೂಲ

ಪ್ರತಿಯ ರೂಪವನ್ನು ಯಥಾವತ್ತಾಗಿ ಸ್ಕ್ಯಾನಿಂಗ್ ಮಾಡುವ ಮೂಲಕ ಜ್ಞಾನ ಸಂರಕ್ಷಣೆ, ಸಂವರ್ಧನೆ ಕಾರ್ಯ ನಡೆಯುತ್ತಿದೆ.

ಹಸ್ತಪ್ರತಿಗಳ ಇಂಥ ಒಂದು ಸುದೀರ್ಘ ಸಾಂಸ್ಕೃತಿಕ ಪರಂಪರೆ ಮುಗಿದೇ ಹೋಯಿತು ಎನ್ನುವ ಆತಂಕದಲ್ಲಿರುವಾಗಲೇ ಕನ್ನಡದಲ್ಲಿ ಕಂಪ್ಯೂಟರ್ ಮೂಲಕ ತೆರೆದುಕೊಂಡ ಹೊಸ ಸಾಧ್ಯತೆಗಳು ಹೊಸ ಭಾವನೆಗಳನ್ನು ಜಾಗೃತಗೊಳಿಸಿವೆ. ಕಂಪ್ಯೂಟರ್ ತೆರೆದಿಟ್ಟಿರುವ ಗುಣಾತ್ಮಕ ಸಾಧ್ಯತೆಗಳಿಂದ ವಿವಿಧ ರೀತಿಯ ಭಾಷೆ, ಸಾಹಿತ್ಯದ ಸಂಸ್ಕರಣ ಕೆಲಸವನ್ನು ನಿಭಾಯಿಸಬಹುದಾಗಿದೆ. ನಮ್ಮ ಹಸ್ತಪ್ರತಿ ಭಂಡಾರಗಳಲ್ಲಿರುವ ಸಾವಿರಾರು ಹಸ್ತಪ್ರತಿಗಳನ್ನು ಅದರಲ್ಲಿರುವ ಸಾವಿರಾರು ಉದ್ದದ ಸಾಲುಗಳನ್ನು ಸಂಗ್ರಹಿಸಿ ಅದನ್ನು ಅತಿವೇಗವಾಗಿ ಪಸರಿಸುವ ಶಕ್ತಿ ಕಂಪ್ಯೂಟರಿಗಿದೆ.[೭]

ಒಂದು ಹಸ್ತಪ್ರತಿಯೊಳಗಿರುವ ಪಠ್ಯವನ್ನು ಮೂರು ರೀತಿಯಲ್ಲಿ ಕಂಪ್ಯೂಟರಿಗೆ ಅಳವಡಿಸಬಹುದು.

೧. ಡಿ.ಟಿ.ಪಿ ಸಾಫ್ಟ್‌ವೇರ್ ಬಳಸಿ ಅಥವಾ ಪದ ಸಂಸ್ಕಾರಕಗಳ ಮೂಲಕ ಕೀ ಇನ್ ಮಾಡುವುದು.

೨. ಸ್ಕ್ಯಾನರ್ ಮೂಲಕ ಸ್ಕ್ಯಾನ್ ಮಾಡಿ ಓಸಿಆರ್ ಮೂಲಕ ಸ್ಕ್ಯಾನಾದ ಪಠ್ಯವನ್ನು ಸಂಕಲಿಸುವುದು.

೩. ಮೈಕ್ರೋಫೋನ್ ಮೂಲಕ ಓದಿ ಸ್ಪೀಚ್ ಟು ಟೆಕ್ಸ್ಟ್ (ಮಾತಿನಿಂದ ಬರಹಕ್ಕೆ) ಸಾಫ್ಟ್‌ವೇರ್ ಮೂಲಕ ಪಠ್ಯವಾಗಿ ಪರಿವರ್ತಿಸಿಕೊಳ್ಳಬಹುದು.[೮]

ಕನ್ನಡ ಹಸ್ತಪ್ರತಿಗಳ ಸಂರಕ್ಷಣಾ ವಿಷಯದಲ್ಲಿ ಸ್ಕ್ಯಾನಿಂಗ್, ಮಾನಿಟರಿ ರೀಡಿಂಗ್, ಟೈಪಿಂಗ್, ಓ.ಸಿ.ಆರ್ ಇಂಟರ್‌ನೆಟ್‌ನಂತಹ ಅವಕಾಶಗಳು ಮಹತ್ವದ ದಾರಿಗಳನ್ನೇ ತೆರೆದಿಟ್ಟಿವೆ. ಗ್ರಾಫಿಕ್ ಸಾಫ್ಟ್‌ವೇರ್‌ನ ಸಹಾಯದಿಂದ ಕಂಪ್ಯೂಟರಿನಲ್ಲಿ ಹಸ್ತಪ್ರತಿಗಳನ್ನು ಸ್ಕ್ಯಾನಿಂಗ್ ಮಾಡಿ ಪುನರ್ ಮುದ್ರಿಸಬಹುದಾಗಿದೆ. ಗ್ರಾಫಿಕ್ ಸಾಫ್ಟ್‌ವೇರಿನ ಸಹಾಯದಿಂದ ಕಂಪ್ಯೂಟರಿನಲ್ಲಿ ಹಸ್ತಪ್ರತಿಗಳನ್ನು ಸ್ಕ್ಯಾನಿಂಗ್ ಮಾಡುವಲ್ಲಿ ೧ ಗ್ರಾಫಿಕ್ ಮೋಡ್ ಇದನ್ನು ಹೆಚ್ಚಾಗಿ ರೇಖಾಚಿತ್ರಗಳ ರಚನೆಗೆ ಬಳಸಬಹುದಾಗಿದೆ. ೨. ಟೆಕ್ನಿಕ್ ಮೋಡ್, ಇದನ್ನು ಅಕ್ಷರ ಸಂಸ್ಕರಣೆಗೆ ಬರವಣಿಗೆಗೆ ಬಳಸುತ್ತಾರೆ.[೯] ಸಂಗ್ರಹಿಸಿದ ಹಸ್ತಪ್ರತಿಗಳು ತೃಟಿತಗೊಂಡಿದ್ದರೆ, ಮುರಿದು ಹೋಗಿದ್ದರೆ ಅಕ್ಷರಗಳು ಸ್ಫುಟವಾಗಿರದಿದ್ದರೆ ಅವುಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಿ ದುರಸ್ತಿಕಾರ್ಯ ಮಾಡಬಹುದು. ಇದು ಕಂಪ್ಯೂಟರ್ ತಂತ್ರಾಂಶದಿಂದ ಸಾಧ್ಯವಾಗುತ್ತದೆ. ಹಸ್ತಪ್ರತಿಗಳಲ್ಲಿನ ಕಲೆಗಳನ್ನು ತೆಗೆದು ಬರೀ ಅಕ್ಷರಗಳು ಮಾತ್ರ ಉಳಿಸಿಕೊಂಡು ಸ್ಫುಟವಾಗಿ ಕಾಣಿಸಲು ಇಮೇಜ್ ಮಾಡಿಡುವ ಮೂಲಕ ಸಂಸ್ಕರಣೆ ಮಾಡಬಹುದಾಗಿದೆ. ಅಕ್ಷರಗಳ ಶೈಲಿಯನ್ನು ಬದಲಿಸುವ ತಂತ್ರಜ್ಞಾನ, ಕಂಪ್ಯೂಟರ್‌ನಲ್ಲಿ ಇವೆ. ಉದಾ ಬರಹ, ನುಡಿ. ನುಡಿಯಲ್ಲಿಯೇ ನುಡಿ ೧, ೨, ೩, ೪, ೫, ೬, ೭, ೮, ೯, ೧೦ ಇತ್ಯಾದಿ ಅಕ್ಷರ ಸ್ಟೈಲಿಸ್ ಇರುತ್ತದೆ. ಇದರಿಂದ ಹಸ್ತಪ್ರತಿಯ ಬರಹವನ್ನು ನಮಗೆ ಬೇಕಾದ ರೀತಿಯಲ್ಲಿ ಬದಲಾಯಿಸಿ ಸಂಸ್ಕರಣೆಗೊಳಿಸುವಂತ ಕಂಪ್ಯೂಟರ್ ತಂತ್ರಜ್ಞಾನವಿದೆ. ಹೀಗೆ ಸಂಸ್ಕರಣಗೊಂಡ ವಿಷಯವನ್ನು ಪುನರ್‌ಮುದ್ರಿಸಲು ಕಡಿಮೆ ಸಮಯದಲ್ಲಿ ಆ ಕೃತಿಯ ಮೂಲಾಂಶವನ್ನು ತಿಳಿಯಲು ನಮಗೆ ಬೇಕಾದ ಮಾಹಿತಿಯನ್ನು ಟೈಪ್ ಮಾಡಿ Search ಮಾಡುವ ಮೂಲಕ ಕ್ಷಣಾರ್ಧದಲ್ಲಿ

ಪಡೆಯಬಹುದಾಗಿದೆ. ಓ.ಸಿ.ಆರ್. ಸ್ಕ್ಯಾನ್ ಮಾಡಿದ ಹಸ್ತಪ್ರತಿಗಳನ್ನು ಸಂಕಲಿಸುವ ದೃಷ್ಟಿಯಿಂದ ಈ ಸಾಫ್ಟ್‌ವೇರ್ ಬಹುಪಯೋಗಿಯಾದದ್ದು ಓ.ಸಿ.ಆರ್ ಸಹಾಯದಿಂದ ಒಂದು ಹಸ್ತಪ್ರತಿಯಲ್ಲಿನ ಬರಹವನ್ನು ನಮಗೆ ಬೇಕಾದ ಹಾಗೆ ಬದಲಾಯಿಸಲು ಸಾಧ್ಯವಾಗುವಂತಾಗಿದೆ. ಪ್ಯಾರಾ ಮಾಡುವುದು, ಅಕ್ಷರಗಳನ್ನು ಬೋಲ್ಡ್ ಮಾಡುವುದು, ತಲೆಬರಹ ಕೊಡುವುದು, ಪಠ್ಯವನ್ನು ಹಿಗ್ಗಿಸುವ ಕುಗ್ಗಿಸುವಂತಹ ಸೌಲಭ್ಯಾಕಾಂಕ್ಷೆಗಳು ಇದರಿಂದ ಪ್ರಾಪ್ತವಾಗಿವೆ.[೧೦]

ಇಂದು ಪಾರಂಪರಿಕ ಸಂರಕ್ಷಣಾ ಕ್ರಮಗಳು ಹಸ್ತಪ್ರತಿಗಳನ್ನು ರಕ್ಷಿಸುವಲ್ಲಿ ಸೋತಿವೆ. ಇದ್ದರೂ ಹೆಚ್ಚು ಶ್ರಮ, ವೇಳೆ, ವೆಚ್ಚವನ್ನು ಬಯಸುತ್ತವೆ. ಕಂಪ್ಯೂಟರ್ ಮೂಲಕ ಇಂದು ಹೆಚ್ಚು ಶ್ರಮವಿಲ್ಲದೆ ಕಡಿಮೆ ಖರ್ಚಿನಲ್ಲಿ ಕಡಿಮೆ ಜಾಗದಲ್ಲಿ ಹೆಚ್ಚು ಮಾಹಿತಿಯನ್ನು ಸಂಗ್ರಹಿಸಿಡಬಹುದಾಗಿದೆ.[೧೧] ೨೧ನೆಯ ಶತಮಾನದಲ್ಲಿ ಕಂಪ್ಯೂಟರ್ ತಂತ್ರಜ್ಞಾನದ ದಾಪುಗಾಲನ್ನು ನೋಡ್ತಾ ಇದೀವಿ. ಸಂಗ್ರಹ ಮಾಡುವ ವಿಧಾನದಲ್ಲಿ ಕಂಪ್ಯೂಟರ್ ನೆರವಿನಿಂದ ಡಿಜಿಟೈಸ್ ಮಾಡಿ ಕ್ಷಣ ಮಾತ್ರದಲ್ಲಿ ಜಗತ್ತಿನ ಯಾವ ಮೂಲೆಗಾದರೂ ರವಾನಿಸಬಹುದು. ಆದರೆ ಹೀಗೆ ಸಂಸ್ಕರಣಗೊಂಡ ಮಾಹಿತಿಯೂ ಯಾವ ಕ್ಷಣದಲ್ಲಾದರೂ ವೈರಸ್‌ನಿಂದ ನಾಶವಾಗುವ ಸಾಧ್ಯತೆಯಿದೆ. ಬುದ್ಧಿಶಾಲಿಗಳು ಜನಪದರು, ಪಾಮರರೆಲ್ಲರು ಜ್ಞಾನವು ಅವರ ಜೀವಿತ ನಂತರ ಹೇಗೆ ನಾಶವಾಗುವದೋ ಹಾಗೇ ಕಂಪ್ಯೂಟರ್ ತಂತ್ರಜ್ಞಾನವು ದೋಷಕಂಡು ಬಂದರೆ ನಾಶವಾಗುವ ಸಾಧ್ಯತೆಯಿದೆ. ಆಧುನಿಕ ಸಂರಕ್ಷಣೆಯಲ್ಲಿ ಜ್ಞಾನ ಸಂರಕ್ಷಣೆಯನ್ನು ಕ್ಷಣಾರ್ಧದಲ್ಲಿ ಸಂಸ್ಕರಣಗೊಳಿಸುವ ಹಾಗೇ ನಾಶಗೊಳಗಾಗುವ ಲಕ್ಷಣಗಳು ಸಂರಕ್ಷಣೆಗೆ ಪೂರಕ ಮತ್ತು ಮಾರಕವಾಗಿವೆ.

ಯಾವ ಮಾಧ್ಯಮದಲ್ಲಿ ಬರಹ ಸಂಗ್ರಹ ಆಗಿರುತ್ತದೋ ಆ ಮಾಧ್ಯಮದ ಸ್ಥಿರತೆ ಮತ್ತು ಬರಹದ ಪ್ರಸಾರ ಇವೆರಡರ ನಡುವೆ ಒಂದು ವಿಲೋಮ ಸಂಬಂಧವಿದೆ. ಒಂದು ಇದಕ್ಕೆ ಕಾರಣ ಏನೆಂದರೆ, ಹೆಚ್ಚು ಸ್ಥಿರವಾದ ಮಾಧ್ಯಮ ಇದ್ದಷ್ಟು ಈ ಬರಹದ ತಾಳಿಕೆ ಹೆಚ್ಚು ಇರುತ್ತದೆ. ಅದರ ಪ್ರಸಾರ ಕಡಿಮೆ ಇರುತ್ತದೆ. ಇದಕ್ಕೆ ಒಳ್ಳೆಯ ಉದಾಹರಣೆಯೆಂದರೆ ಶಾಸನಗಳು. ಶಾಸನ ಬಹಳ ದೀರ್ಘಕಾಲ ಬರಹವನ್ನು ಉಳಿಸಿಕೊಳ್ಳಬಹುದು. ಆದರೆ ಅದರ ಪ್ರಸಾರ ಎಲ್ಲೋ ಒಂದು ಕಡೆ ಮಾತ್ರ ಸ್ಥಿರವಾಗಿರುತ್ತದೆ. ಓದಬೇಕಾದರೆ ಶಾಸನ ಇರುವ ಸ್ಥಳಕ್ಕೆ ಹೋಗಬೇಕಾಗುತ್ತದೆ. ಇಲ್ಲವೇ ಈಗಿನ ಕಾಲದಲ್ಲಿ ನಾವು ಮಾಡ್ತಾ ಇರೋ ಹಾಗೆ ಪ್ರತಿಗಳನ್ನು ತೆಗೆದುಕೊಳ್ಳುವುದು ಮತ್ತೆ ಮುದ್ರಿಸುವುದು ತಂತ್ರಜ್ಞಾನಕ್ಕೆ ಅದನ್ನು ಪರಿವರ್ತಿಸಿಕೊಳ್ಳುವುದು ಸಾಮಾನ್ಯವಾಗಿದೆ. ಭೂರ್ಜ್ವಪತ್ರ, ತಾಳೆಗರಿಗಳ ಗ್ರಂಥಗಳು ಹೆಚ್ಚು ಪ್ರಸಾರಗೊಂಡರು ಬಾಳಿಕೆಯ ದೃಷ್ಟಿಯಿಂದ ಶಾಸನದಷ್ಟು ಗಟ್ಟಿಯಲ್ಲ. ನಂತರ ಬಂದ ವಿದ್ಯುನ್ಮಾನ ತಂತ್ರಜ್ಞಾನಗಳ ಏಕಕಾಲದಲ್ಲಿ ಹಾಗೂಕ್ಷಣಾರ್ಧದಲ್ಲಿ ಜಗತ್ತಿನ ಯಾವ ಮೂಲೆಯಲ್ಲಿರುವ ಮಾಹಿತಿಯನ್ನು ಪಡೆಯಬಹುದು. ಆದರೆ ಸುರಕ್ಷತೆ ದೃಷ್ಟಿಯಿಂದ ಅಷ್ಟು ಖಚಿತತೆ ಇಲ್ಲವಾಗಿದೆ. ಆದರು ಹೊಸ ಹೊಸ ತಂತ್ರಜ್ಞಾನದ ಆವಿಷ್ಕಾರದಿಂದ ಕಂಪ್ಯೂಟರಿನಲ್ಲಿ ಹಸ್ತಪ್ರತಿಗಳ ಮಾಹಿತಿಯನ್ನು ಸಂರಕ್ಷಿಸಬಹುದಾಗಿದೆ.

ಸಂಸ್ಕರಣ (Process) ಕಂಪ್ಯೂಟರ್ ಪಡೆದಂತಹ ದತ್ತಾಂಶಗಳ ಮೇಲೆ ನಿರ್ದೇಶಗಳ ಮೂಲಕ ಕಾರ್ಯವಿಧಿಯನ್ನು ಕೈಗೊಳ್ಳುವುದೇ ಸಂಸ್ಕರಣ ನೀಡುವ ಫಲಿತಾಂಶವೇ ನಿರ್ಗಮವಾಗಿದೆ. ಕಂಪ್ಯೂಟರಿಗೆ ದತ್ತಾಂಶಗಳನ್ನು ನೀಡುವ ಹಲವಾರು ಸಾಧನಗಳಲ್ಲಿ ಸ್ಕ್ಯಾನರ್ ಸಲಕರಣೆಯೂ ಒಂದು. ಇದು ಕಂಪ್ಯೂಟರಿಗೆ ಛಾಯಾಚಿತ್ರದ (Photograph) ಅಥವಾ ಬರವಣಿಗೆ ರೂಪದ ಮಾಹಿತಿಯ ಪ್ರತಿಬಿಂಬವನ್ನು (Image) ಕಂಪ್ಯೂಟರಿಗೆ ವರ್ಗಾಯಿಸುವ ಒಂದು ಸಾಧನ. ಇದು ಒಂದು ರೀತಿಯಲ್ಲಿ ಜೆರಾಕ್ಸ್‌ಯಂತ್ರ (Photocopy machine) ದಂತೆ ಕಾರ್ಯ ಮಾಡುತ್ತದೆ. ಆದರೆ ಇದೊಂದು ಪ್ರತಿಯನ್ನು ಮುದ್ರಿಸುವ ಬದಲು ಆ ಪ್ರತಿಬಿಂಬವನ್ನು ಸ್ಮರಣೆಯಲ್ಲಿ ಸಂಗ್ರಹಿಸಿಕೊಳ್ಳುತ್ತದೆ. ಬೇಕಾದಾಗ ಮುದ್ರಿಸುತ್ತದೆ. ದೃಷ್ಟಿ ವಿಚ್ಛೇದಕಗಳು ಬರೆದ ಮಾಹಿತಿ, ಅಲೇಖ, ಚಿತ್ರ, ನಕ್ಷೆ, ಛಾಯಾಚಿತ್ರ ಮುಂತಾದವುಗಳನ್ನು ದತ್ತಾಂಶಗಳಂತೆ ಸ್ವೀಕರಿಸಿ ಸ್ಮರಣಾಂಗಕ್ಕೆ ಕಳಿಸುತ್ತದೆ.

ಕಂಪ್ಯೂಟರಿನಲ್ಲಿ ಮಲ್ಟಿಮೀಡಿಯಾ ತಂತ್ರಜ್ಞಾನ ಅಳವಡಿಸುವುದರಿಂದ ನಮಗೆ ಬೇಕಾದ ಮಾಹಿತಿಯನ್ನು ಪಡೆಯಬಹುದು. ಸಿಡಿಯನ್ನು ವಿಶ್ವಕೋಶದ ಸಿಡಿ ಹಾಕಿಕೊಂಡು ನಮಗೆ ಬೇಕಾಗುವ ಪುಟಗಳ ವಿವರಣೆಗಳನ್ನು ಅಲ್ಲದೇ ಹತ್ತಾರು ಚಿತ್ರಗಳನ್ನು ಆಡಿಯೋ ವೀಡಿಯೋ ದೃಶ್ಯದ ಧ್ವನಿಯ ಕ್ಲಿಪಿಂಗ್ಸ್‌ಗಳನ್ನು ಲಿಖಿತ ಮಾಹಿತಿಯನ್ನು (Print) ಮೂಲಕ ಕಾಗದದ ಮೇಲೆ ಮುದ್ರಿಸಿ ಜ್ಞಾನವನ್ನು ಪಡೆಯಬಹುದಾಗಿದೆ. ಉದಾ ಸಿ.ಡಿ.ರಾಮ್ ನಿಘಂಟು ಮೂಲಕ ಬಳಸಿ ಕ್ಷಣದಲ್ಲಿ ನಿಮಗೆ ಬೇಕಾದ ಪದದ ಅರ್ಥವನ್ನು ಅದನ್ನು ಉಚ್ಛರಿಸುವ ರೀತಿಯನ್ನು ತಿಳಿಯಬಹುದು. ಇದಕ್ಕಾಗಿಯೇ ಮಲ್ಟಿಮೀಡಿಯಾ ಆಧಾರಿತ ಭಾಷೆಯನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಬೇಕಾಗುತ್ತದೆ. ಪದಗಳನ್ನು ಗಟ್ಟಿಯಾಗಿ ಪುನರಾವರ್ತಿಸಲು ಅವಕಾಶವಿದ್ದು ನಾವು ಮಾಡುವ ಉಚ್ಚಾರಕ್ಕೆ ಯಾವ ಸ್ಪಷ್ಟ ಮತ್ತು ಸರಿಯಾದದ್ದು ಕಂಪ್ಯೂಟರಿನಲ್ಲಿ ನೀಡಿದ ಉಚ್ಛಾರದ ತುಲನೆ ಮೂಲಕ ಸರಿಯಾದ ಧ್ವನಿ ಸಂವೇದನೆಯನ್ನು ಸಂರಕ್ಷಿಸಿಕೊಳ್ಳುತ್ತದೆ. ಹಾಗಾಗೀ ಮೌಖಿಕವಾಗಿ ನೀಡುವ ಜ್ಞಾನವನ್ನು ಸಂರಕ್ಷಿಸಿಕೊಳ್ಳುವ ಕಂಪ್ಯೂಟರ್‌ನ ಮಲ್ಟಿಮೀಡಿಯಾ ತಂತ್ರಾಂಶವಾಗಿದೆ.

ಹೊಸ ಭಾಷೆಯನ್ನು ಕಲಿಯಬೇಕಾದಲ್ಲಿ ಮಲ್ಟಿಮೀಡಿಯಾ ಆಧಾರಿತ ಭಾಷೆ ಕಲಿಸುವ ಸಾಫ್ಟ್‌ವೇರ್ ದೊರೆಯುತ್ತದೆ. ಅಲ್ಲದೇ ಹೊಸ ಭಾಷೆಯೊಂದರ ಉಚ್ಛಾರ, ವ್ಯಾಕರಣ ಅನುವಾದ ಸ್ಪೆಲ್ಲಿಂಗ್ ನೀವು ಆ ಪದಗಳನ್ನು ಸ್ಪಷ್ಟವಾಗಿ ಪುನರಾವರ್ತಿಸಲು ಅವಕಾಶ ಹೊಂದಿರುತ್ತದೆ. ನೀವು ನೀಡಿದ ಉಚ್ಚಾರ ಕಂಪ್ಯೂಟರಿನಲ್ಲಿ ದಾಖಲಾಗಿರುವ ಉಚ್ಛಾರಕ್ಕೆ ಎಷ್ಟು ಹತ್ತಿರವಾಗಿದೆ. ಎಂದು ಕೂಡಾ ಹೋಲಿಸಿ ಹೇಳುತ್ತದೆ. ನಮ್ಮ ಉಚ್ಛಾರವನ್ನು ತಿದ್ದಿಕೊಳ್ಳಲು ಸಹಕಾರಿಯಾಗಿದೆ. 'ಮೈ ಫಸ್ಟ್ ಅಮೇಜಿಂಗ್ ಹ್ಯೂಮನ್ ಬಾಡಿ' ಎಂಬ ಸಿಡಿ ಪುಟ್ಟ ಮಕ್ಕಳಿಗೆ ಮಾನವ ದೇಹದ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡುತ್ತದೆ.

ಕಂಪ್ಯೂಟರ್‌ನಿಂದ ಜ್ಞಾನ ಸಂರಕ್ಷಣೆಯ ಜೊತೆಗೆ ಅದರ ವಿನಾಶಕ್ಕೂ ಕಾರಣವಾಗುತ್ತದೆ. ಯಂತ್ರಾಂಶ ಮತ್ತು ತಂತ್ರಾಂಶ ಬೆಲೆಗಳು ಅಧಿಕವಾಗಿದ್ದು, ಕಂಪ್ಯೂಟರ್ ಅಳವಡಿಕೆ ಹೆಚ್ಚು ವೆಚ್ಚದಾಯಕವಾಗಿದೆ. ಕಂಪ್ಯೂಟರಿನಿಂದ ಹೊರಸೂಸುವ ಕಿರಣಗಳು ವಂಶವಾಹಿನಿಗಳ ಮೇಲೆ ಕೆಟ್ಟ ಪರಿಣಾಮ ಬೀರುತ್ತವೆ. ತರಬೇತಿ ಹೊಂದಿರುವವರು ಸಿಬ್ಬಂದಿ ಅದರಲ್ಲೂ ಗ್ರಂಥಾಲಯದಂತ ಸ್ಥಳದಲ್ಲಿ ಗ್ರಂಥಪಾಲಕರ ಕೊರತೆ

ತಲೆದೋರಬಹುದು. ಅಲ್ಲದೇ ಕಂಪ್ಯೂಟರ್‌ಗಳಿಗೆ ತಲುಗುವ ವೈರಸ್‌ನ ಪರಿಣಾಮದಿಂದಾಗಿ ಸಂಸ್ಕರಿಸಿದ ಮಾಹಿತಿ ನಷ್ಟವಾಗುವ ಸಾಧ್ಯತೆಗಳಿವೆ.

ಎಮ್.ಎಸ್. ಪ್ರದರ್ಶನ ತಂತ್ರಾಂಶ (M.S.Power Point) ಪಾವರ್ ಪಾಯಿಂಟ್, ಡೆಸ್ಕ್ ಟಾಪನ್ ಮೇಲೆ ಯಾವುದೇ ವಿಷಯವನ್ನು ಪ್ರದರ್ಶಿಸಲು ಉಪಯೋಗಿಸುವ ಒಂದು ಪ್ರೋಗ್ರಾಮ್ ಇದು ಬೇರೆ ಆಫೀಸ್ ಅಪ್ಲಿಕೇಶನ್‌ಗಳಿಗಿಂತ ಭಿನ್ನವಾಗಿದ್ದು ಇದನ್ನು ಮುಖ್ಯವಾಗಿ ಪ್ರಸೆಂಟೇಶನ್‌ತಯಾರಿಸಲು ಉಪಯೋಗಿಸುತ್ತಾರೆ. ಪ್ರಸೆಂಟೇಷನ್‌ನ ಪ್ರತಿಯೊಂದು ಪುಟವನ್ನು ಸ್ಲೈಡ್ ಎಂದು ಕರೆಯುತ್ತಾರೆ. ಪಾವರ್ ಪಾಯಿಂಟ್ ಸ್ಲೈಡ್‌ಗಳ ಶ್ರೇಣಿಯನ್ನು ಹೊಂದಿರುತ್ತದೆ. ಒಂದು ಪ್ರೊಜೆಕ್ಟರ್ ಉಪಯೋಗಿಸಿ ನೀವು ಒಂದು ಪಾವರ್‌ಪಾಯಿಂಟ್ ಪ್ರಸೆಂಟೇಶನನ್ನು ಒಂದು ದೊಡ್ಡ ಸಭೆಯ ಸದಸ್ಯರಿಗೆ ವೀಕ್ಷಿಸಲು ಸಹಾಯವಾಗುತ್ತದೆ. ಪ್ರಸೆಂಟೇಶನ್ನಿನ ಹಸ್ತಪ್ರತಿಗಳನ್ನು ವೀಕ್ಷಕರಿಗೆ ಹಂಚಬಹುದು. ಚಿತ್ರಗಳು, ವರ್ಣಮಯಪಠ್ಯ ಚಲನಚಿತ್ರ ಮತ್ತು ಶಬ್ದ ಚಿತ್ರ ಅಥವಾ ಸಜೀವ ವಸ್ತುಗಳನ್ನು ಸೇರಿಸಿ ಪ್ರೆಸೆಂಟೇಶನ್‌ಗಳನ್ನು ಸೇರಿಸಿ ಪ್ರೆಸೆಂಟೇಶನ್‌ಗಳನ್ನು ವರ್ಣರಂಜಿತವಾಗಿಯೂ ಆಕರ್ಷಕವಾಗಿಯೂ ಮಾಡಬಹುದು. ವಿಷಯವನ್ನು ಪ್ರೆಸೆಂಟೇಶನ್ ಮಾಡಲು ಪವರ್ ಪಾಯಿಂಟ್ ಉತ್ತಮ ಆವಿಷ್ಕಾರವಾಗಿದೆ.

### ೯.೨.೨.೧. ಗಣಕೀಕರಣ (ಡಿಜಿಟಲೀಕರಣ)

ಕಂಪ್ಯೂಟರಿಗೆ ಅರ್ಥವಾಗುವ ಭಾಷೆ ವಿದ್ಯುನ್ಮಾನ ಭಾಷೆ. ಆ ಭಾಷೆಯು ಒಂದು ಮತ್ತು ಸೊನ್ನೆಗಳ ಸಂಕೇತಗಳ ರೂಪದಲ್ಲಿರುವುದರಿಂದಲೇ ಇದನ್ನು ಡಿಜಿಟ್‌ಗಳು, ಅಂದರೆ ಅಂಕಿಗಳು ಎಂದು ಕರೆಯಲಾಗಿದೆ. ಮುದ್ರಿತ ಅಥವಾ ಧ್ವನಿ, ಚಿತ್ರ ರೂಪದ ಮಾಹಿತಿ ಮತ್ತು ಜ್ಞಾನವನ್ನು ಕಂಪ್ಯೂಟರ್ ಅರ್ಥ ಮಾಡಿಕೊಳ್ಳುವ ಸಂಕೇತ ಭಾಷೆಗೆ ಪರಿವರ್ತಿಸುವುದನ್ನೇ ಡಿಜಿಟಲೀಕರಣ ಅಥವಾ ಕನ್ನಡದಲ್ಲಿ ಮಾಹಿತಿಗಳ 'ಅಂಕೀಕರಣ' ಎಂದು ಕರೆಯಲಾಗಿದೆ. ಕಂಪ್ಯೂಟರ್ ಕಾರ್ಯನಿರ್ವಹಣೆಗೆ ಬೈನರಿ ನಂಬರ್ ಸಿಸ್ಟಂನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಲಾಗಿದೆ. ಇದರಿಂದಾಗಿಯೆ ಇದಕ್ಕೆ ಡಿಜಿಟಲ್ ತಂತ್ರಜ್ಞಾನ ಎಂಬ ಹೆಸರು ಬಂದಿರುವುದು.[೨]

ಮಾಹಿತಿಯನ್ನು ಸಂಗ್ರಹಿಸುವುದು ಸಂಸ್ಕರಿಸುವುದು ಮತ್ತು ವಿತರಿಸುವುದು ಕಂಪ್ಯೂಟರ್‌ನ ಪ್ರಮುಖ ಕಾರ್ಯವಾಗಿದೆ. ಕಂಪ್ಯೂಟರ್ ಸಂಗ್ರಹಣಾ, ಸಂಸ್ಕರಣಾ ಮತ್ತು ವಿತರಣಾ ಕಾರ್ಯವನ್ನು ನಿರ್ವಹಿಸಲು ಆಧರಿಸುವುದು ತನ್ನ ಸ್ಮರಣಾ ಸಾಮರ್ಥ್ಯತದ ಮೇಲೆ ತನ್ನ ಸ್ಮರಣಾ ಸಾಮರ್ಥ್ಯವನ್ನು ಗಿಗಾಬೈಟುಗಳ ಲೆಕ್ಕದಲ್ಲಿ ಅತ್ಯಂತ ಹೆಚ್ಚಿನ ಸ್ಮರಣೆ ಇರುವ ಕಂಪ್ಯೂಟರ್‌ಗಳು ಸಮರ್ಥವಾಗಿ, ಕ್ಷಿಪ್ರವಾಗಿ ಕ್ಷಣಾರ್ಧದಲ್ಲಿ ಕೆಲಸ ಕಾರ್ಯಗಳನ್ನು ನಿರ್ವಹಿಸುವುದರ ಜೊತೆಗೆ ಜಗತ್ತಿನ ಯಾವುದೇ ಭಾಗದಿಂದ ಕ್ಷಣಾರ್ಧದಲ್ಲಿ ಮಾಹಿತಿಯನ್ನು ಪಡೆಯಬಹುದಾಗಿದೆ. ಕಂಪ್ಯೂಟರ್ ತನ್ನ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಎರಡು ರೀತಿಯ ಸ್ಮರಣೆಯನ್ನು ಬಳಸುತ್ತದೆ. ೧. ತಾತ್ಕಾಲಿಕ ಸ್ಮರಣೆ ೨. ಶಾಶ್ವತ ಸ್ಮರಣೆ.

### ೯.೨.೨.೧.೧. ತಾತ್ಕಾಲಿಕ ಸ್ಮರಣೆ

ವಿದ್ಯುತ್ ಸರಬರಾಜು ಇದ್ದು ಕಂಪ್ಯೂಟರ್ ಸಂಸ್ಕರಣೆಯ ಪ್ರಕ್ರಿಯೆಯು ಜಾರಿಯಲ್ಲಿದ್ದಾಗ, ತಾತ್ಕಾಲಿಕ ಸ್ಮರಣೆಯ ಬಳಕೆಯಲ್ಲಿರುತ್ತದೆ. ವಿದ್ಯುತ್ ಸರಬರಾಜು ನಿಂತು ಹೋದಾಗ ಈ ತಾತ್ಕಾಲಿಕ ಸ್ಮರಣೆಯೂ

ಸಹ ಅಳಿಸಿಹೋಗುತ್ತದೆ. ಇಂತಹ ತಾತ್ಕಾಲಿಕ ಸ್ಮರಣೆಯನ್ನು ಕಂಪ್ಯೂಟರ್ ಪರಿಭಾಷೆಯಲ್ಲಿ ರ್‍ಯಾಂಡಂ ಆಕ್ಸೆಸ್ ಮೆಮೊರಿ (ಆರ್.ಎ.ಎಂ.ರ್‍ಯಾಂ) ಎಂದು ಕರೆಯಲಾಗುತ್ತದೆ. ಮಾಹಿತಿ ಸಂಸ್ಕರಣೆಯ ಸಂದರ್ಭದಲ್ಲಿ ಈ ರ್‍ಯಾಂ ನಲ್ಲಿನ ಮಾಹಿತಿಗಳು ಪರಿಷ್ಕಾರಗೊಳ್ಳುತ್ತಾ ಬದಲಾಗುತ್ತಲೇ ಇರುತ್ತವೆ. ರ್‍ಯಾಂ ಸಾಮರ್ಥ್ಯವು ಹೆಚ್ಚಾಗಿದ್ದಷ್ಟು ಕಂಪ್ಯೂಟರ್‌ನ ಕಾರ್ಯವೇಗ, ಕಾರ್ಯಕ್ಷಮತೆ ಉತ್ತಮವಾಗಿರುತ್ತದೆ.

**೯.೨.೨.೧.೨. ಶಾಶ್ವತ ಸ್ಮರಣೆ**

ಸಂಸ್ಕರಣಾ ಪ್ರಕ್ರಿಯೆಯನ್ನು ಮುಗಿಸಿ ತನ್ನ ತಾತ್ಕಾಲಿಕ ಸ್ಮರಣೆಯಲ್ಲಿ ಆಗಾಗ ಪರಿಷ್ಕಾರಗೊಂಡು ಕೊನೆಯಲ್ಲಿ ಫಲಿತಾಂಶದ ರೂಪದಲ್ಲಿ ಸಿದ್ಧವಾದ ಡಿಜಿಟಲ್ ರೂಪದ ಮಾಹಿತಿಗಳನ್ನು ಕಂಪ್ಯೂಟರ್ ಶಾಶ್ವತವಾಗಿ ದಾಖಲಿಸುವ ಸ್ಮರಣೆಯನ್ನು 'ಶಾಶ್ವತ ಸ್ಮರಣೆ ಎನ್ನುತ್ತೇವೆ. ಅಂತಹ ಶಾಶ್ವತ ಸ್ಮರಣೆಯನ್ನು ಕಂಪ್ಯೂಟರ್ ಪರಿಭಾಷೆಯಲ್ಲಿ ರೀಡ್ ಓನ್ಲಿ ಮೆಮೊರಿ (ಆರ್.ಓ.ಎಂ.ರೊಂ) ಎಂದು ಕರೆಯಲಾಗುತ್ತದೆ. ಮ್ಯಾಗ್ನೆಟಿಕ್ ಮಿಡಿಯಾಗಳಲ್ಲಿನ ಶಾಶ್ವತ ಸ್ಮರಣೆಯನ್ನು ಸುರಕ್ಷತೆಯ ಮತ್ತು ಮರುಬಳಕೆಯ ದೃಷ್ಟಿಯಿಂದ ಕಂಪ್ಯೂಟರ್‌ನಿಂದ ಹೊರಗೆ ತೆಗೆದು ಸಂರಕ್ಷಿಸಿಡಲು ಸಿಡಿ (ಕಾಂಪ್ಯಾಕ್ಟ್ ಡಿಸ್ಕ್) ಡಿವಿಡಿ (ಡಿಜಿಟಲ್ ವರ್ಸಟೈಲ್ ಡಿಸ್ಕ ) ಆಪ್ಟಿಕಲ್ ಅಂತಹ ಮೀಡಿಯಾಗಳನ್ನು ಇಂದು ಹೆಚ್ಚಾಗಿ ಬಳಸಲಾಗುತ್ತದೆ. ಪೆನ್‌ಡ್ರೈವ್ ೧. ಜಿ.ಬಿಯಿಂದ ೨, ೪, ೮ ಹೀಗೆ ಸಂಗ್ರಹಣ ಮತ್ತು ಸಂಸ್ಕರಣ ಸಾಮರ್ಥ್ಯವನ್ನು ಹೊಂದಿರುತ್ತದೆ. ಪೆನ್‌ಡ್ರೈವ್ ಮಾಹಿತಿಯನ್ನು ಸಂಗ್ರಹಿಸಿಡುವ ಚಿಕ್ಕ ಸಾಧನವಾದರು ಇಂದು ಅತಿ ಸುಲಭದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮಾಹಿತಿಗಳನ್ನು ಒಯ್ಯಲು ಬಳಸಲಾಗುವ ಇತ್ತೀಚಿನ ಕಂಪ್ಯೂಟರಿನ ಡಿಜಿಟಲ್ ಮಾಧ್ಯಮವಾಗಿದೆ.

ಹಸ್ತಪ್ರತಿಗಳನ್ನು ಮಾಹಿತಿಯ ಪಠ್ಯರೂಪದಲ್ಲಿ ಬೆರಳಚ್ಚಿಸುವುದು ಅಥವಾ ಸ್ಕ್ಯಾನ್ ಮಾಡಿ ಡಿಜಿಟಲೀಕರಿಸುವ ಕಾರ್ಯ ಮಾಡುವಾಗ, ಮೊದಲಿಗೆ ತಾತ್ಕಾಲಿಕ ಮೆಮೊರಿಯಾಗಿ ರೂಪುಗೊಳ್ಳುವ ಡೇಟಾ ನಂತರದಲಿ ಹಾರ್ಡ್ ಡಿಸ್ಕನಲ್ಲಿ ಉಳಿಸಲಾಗುತ್ತದೆ. ಸಂರಕ್ಷಣೆಯ ದೃಷ್ಟಿಯಿಂದ ಹಾರ್ಡ್‌ಡಿಸ್ಕನಲ್ಲಿರುವ ಡೇಟಾವನ್ನು ಹೊರಗಿನ ಮಾಧ್ಯಮವಾದ, ಸಿಡಿಗಳು ಅಥವಾ ಡಿವಿಡಿಗಳಲ್ಲಿ ಅಥವಾ ಪೆನ್‌ಡ್ರೈವನಲ್ಲಿ ನಕಲಿಸಿ ಹೊರತೆಗೆದು, ಬ್ಯಾಕ್ ಎಂದು ಇಟ್ಟುಕೊಳ್ಳಲಾಗುತ್ತದೆ. ಮುಂದೆ ಅಗತ್ಯವಿದ್ದಾಗಲೆಲ್ಲಾ ಅವುಗಳನ್ನು ಮತ್ತೆ ಹಾರ್ಡ್‌ಡಿಸ್ಕ್‌ಗೆ ವರ್ಗಾಯಿಸಿಕೊಂಡು ಉಪಯೋಗಿಸಲಾಗುತ್ತದೆ.

ಕಂಪ್ಯೂಟರ್‌ನ ತಾತ್ಕಾಲಿಕ ಸ್ಮರಣೆಯಿಂದ ಮಾಹಿತಿಯನ್ನು ಮ್ಯಾಗ್ನೆಟಿಕ್ ಮೀಡಿಯಾಗಳಾದ ಫ್ಲಾಪಿಗಳು ಮತ್ತು ಹಾರ್ಡ್‌ಡಿಸ್ಕ್‌ಗಳಲ್ಲಿ ಹೊರಗೆ ಹಿಡಿದಿಡಲು ಬಳಸಲಾಗುತ್ತಿತ್ತು. ಇವುಗಳನ್ನು ಮರುಬಳಕೆಗೂ ಬಳಸಲಾಗುತ್ತಿತ್ತು ಮುಂದೆ ತಂತ್ರಜ್ಞಾನ ಆವಿಷ್ಕಾರವಾದ ಉತ್ತಮ ಗುಣಮಟ್ಟದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ಹೆಚ್ಚು ಸುರಕ್ಷತೆಗಾಗಿ ಕಂಪ್ಯೂಟರ್‌ನಿಂದ ಹೊರಗೆ ಮಾಹಿತಿಯನ್ನು ಸಂಗ್ರಹಿಸಿ ಸಂಸ್ಕರಿಸುವಂತೆ ಆಪ್ಟಿಕಲ್ ತಂತ್ರಜ್ಞಾನಗಳಾದ ಸಿಡಿಗಳು, ಡಿವಿಡಿಗಳಂತವು ಹಸ್ತಪ್ರತಿಗ್ರಂಥಗಳನ್ನು ಸಂರಕ್ಷಿಸಿಡುವಲ್ಲಿ ಫ್ಲಾಪಿಗಳು ಮತ್ತು ಹಾರ್ಡ್‌ಡಿಸ್ಕ್‌ಗಿಂತ ಅತ್ಯುತ್ತಮವಾದ ಸಂರಕ್ಷಣಾ ಕೇಂದ್ರಗಳಾಗಿವೆ.

ಹಸ್ತಪ್ರತಿಗಳನ್ನು ಸಂರಕ್ಷಿಸಲು ಮತ್ತು ಗ್ರಂಥರೂಪದಲ್ಲಿ ಪಡೆಯಲು ಮುದ್ರಣ ಮಾಧ್ಯಮಕ್ಕಿಂತ ಸುಲಭವಾಗಿ ಕಡಿಮೆ ವೆಚ್ಚದಲ್ಲಿ ಹೆಚ್ಚು ಪ್ರತಿಗಳನ್ನು ಪಡೆಯಲು ಕಂಪ್ಯೂಟರ್‌ನ ಡಿಜಿಟಲ್ ತಂತ್ರಜ್ಞಾನವನ್ನು ಬಳಸಲಾಗುತ್ತಿದೆ. ಹಸ್ತಪ್ರತಿಗಳನ್ನು ಎರಡು ರೀತಿಯಲ್ಲಿ ಕಂಪ್ಯೂಟರ್‌ನಲ್ಲಿ ಸಂಸ್ಕರಿಸಿಡಬಹುದಾಗಿದೆ. ೧. ಇರುವ ಹಸ್ತಪ್ರತಿಯ ಪೂರ್ಣಪಾಠವನ್ನು ಅದು ಬರಹ (ಲಿಪಿ) ರೂಪದಲ್ಲಿದ್ದರೆ, ಕೀಲಿಮಣೆಯನ್ನು ಬಳಸಿ ಬೆರಳಚ್ಚಿಸುವ ಮೂಲಕ ಕಂಪ್ಯೂಟರ್‌ನಲ್ಲಿ ಸಂಸ್ಕರಿಸುವುದು. ಇಲ್ಲಿ ಪದ ಸಂಸ್ಕಾರ (ವರ್ಡ್ ಪ್ರಾಸೆಸಿಂಗ್ ಸಾಫ್ಟ್‌ವೇರ್) ತಂತ್ರಾಂಶವನ್ನು ಬಳಸಲಾಗುತ್ತದೆ. ೨. ಹಸ್ತಪ್ರತಿಯ ಮೂಲರೂಪವನ್ನೇ ನೇರವಾಗಿ ಕಂಪ್ಯೂಟರಿನಲ್ಲಿ ದಾಖಲಿಸಲು, ಹಸ್ತಪ್ರತಿಯ ಪ್ರತಿಯೊಂದು ಪುಟವನ್ನು ಸ್ಕ್ಯಾನ್ ಮಾಡುವ ಮೂಲಕ ಹಸ್ತಪ್ರತಿಯನ್ನು ಮೂಲರೂಪದಲ್ಲಿಯೇ ಉಳಿಸುವಲ್ಲಿ ಡಾಕ್ಯುಮೆಂಟ್ ಮ್ಯಾನೇಜ್‌ಮೆಂಟ್ ಸಾಫ್ಟ್‌ವೇರನ್ನು ಬಳಸಲಾಗುತ್ತದೆ.

ಸ್ಕ್ಯಾನಿಂಗ್ ಮಾಡಿದ ಹಸ್ತಪ್ರತಿಗಳನ್ನು ಕಂಪ್ಯೂಟರ್ ದಾಖಲಾತಿಯಲ್ಲಿ ಉತ್ತಮಗೊಳಿಸಬಹುದು. ಹಸ್ತಪ್ರತಿಯಲ್ಲಿನ ಮೂಲ ಪುಟದಲ್ಲಿರುವ ಅಕ್ಷರಗಳು ಮಸುಕಾಗಿರುವ ತ್ರುಟಿತಗೊಂಡಿರುವುದನ್ನು ತಂತ್ರಜ್ಞಾನ ಮೂಲಕ ಮರುಸೃಷ್ಟಿಸಲು ಬರುತ್ತದೆ. ಬೇರೆ ಕಡೆಯಿರುವ ಅಕ್ಷರಗಳನ್ನು ಕಾಪಿ ಮಾಡಿ ತಂದು ಅಗತ್ಯವೆನಿಸಿದಲ್ಲಿ ಸೇರಿಸಬಹುದು ಮಸುಕಾಗಿ ಕಾಣುವ ಅಕ್ಷರಗಳನ್ನು ಸ್ಪಷ್ಟವಾಗಿ ಕಾಣುವಚಿತೆ ಮಾಡಲು ಇಮೇಜ್ ತಂತ್ರಜ್ಞಾನ ಮೂಲಕ ಸಾಧ್ಯವಾಗುತ್ತದೆ. ಹಸ್ತಪ್ರತಿಗಳು ಗ್ರಂಥರೂಪದಲ್ಲಿ ಇಲ್ಲವೇ ಚಿತ್ರರೂಪದಲ್ಲಿ ಇದ್ದರೆ ಸ್ಕ್ಯಾನ್ ಮಾಡಿ ಸಂಸ್ಕರಿಸಲು ಹೆಚ್ಚು ಮೆಮೊರಿ ಬೇಕಾಗುತ್ತದೆ. ಹಸ್ತಪ್ರತಿಗಳನ್ನು ಕೀಲಿಮಣೆ ಮೂಲಕ ಮತ್ತು ಸ್ಕ್ಯಾನ್ ಮೂಲಕ ಸಂಸ್ಕರಣೆಗೊಳಿಸುವ ಮೂಲಕ ಹಸ್ತಪ್ರತಿಗಳಂತಹ ಪ್ರಾಚೀನ ಜ್ಞಾನ ಸಾಮಗ್ರಿಗಳ ಸಂರಕ್ಷಣೆ ಕಾರ್ಯ ನಡೆಯುತ್ತಿದೆ. ಕಂಪ್ಯೂಟರ್ ಮುದ್ರಣ ತಂತ್ರಜ್ಞಾನ ತುಂಬಾ ಸಮರ್ಥವಾಗಿ ಬಳಸುವ ಮೂಲಕ ಸಂರಕ್ಷಣೆಗೊಂಡ ಹಸ್ತಪ್ರತಿಯೂ ಬಹುಪ್ರತಿಗಳ ಮೂಲಕ ಲೇಖಕರು ಬರೆದ ಬರಹವನ್ನು ಡಿ.ಟಿ.ಪಿ ಮಾಡುವ ಮೂಲಕ ಗ್ರಂಥಗಳನ್ನು ನಮಗೆ ಬೇಕಾದ ರೀತಿಯಲ್ಲಿ ಆಕರ್ಷಕವಾಗಿ ಅತ್ಯುತ್ತಮವಾದ ಗುಣಮಟ್ಟದಲ್ಲಿ ಸುಲಭವಾಗಿ ಪ್ರಕಟಿಸಲು ಸಾಧ್ಯವಾಗಿದೆ.

ಲೇಖಕರ ಮೂಲ ಕೈಬರಹದ ರೂಪದಲ್ಲಿಯೇ ಪುಸ್ತಕ ಮುದ್ರಣವಾಗಬೇಕು ಎಂದಾದರೆ, ಅದಕ್ಕೆ ಇಮೇಜ್ ಸ್ಕ್ಯಾನಿಂಗ್ ತಂತ್ರಜ್ಞಾನವನ್ನೇ ಬಳಸಬೇಕು. ಕುವೆಂಪು ವಿರಚಿತ 'ಶ್ರೀರಾಮಾಯಣ ದರ್ಶನಂ' ಕವಿಯ ಸ್ವಹಸ್ತಾಕ್ಷರದಲ್ಲಿಯೇ ಮುದ್ರಿಸಿ, ಪ್ರಕಟಿಸಿದ ಶ್ರೀಯುತ ಕೆ.ವಿ.ಪೂರ್ಣಚಂದ್ರ ತೇಜಸ್ವಿಯವರ ಪ್ರಯತ್ನವು ಇದಕ್ಕೆ ಉತ್ತಮ ಉದಾಹರಣೆಯಾಗಿ ನಮ್ಮ ಮುಂದೆ ಇದೆ. ಶ್ರೀ ರಾಮಾಯಣ ದರ್ಶನಂ ಹಸ್ತಪ್ರತಿಯಲ್ಲಿ ತ್ರುಟಿತಗೊಂಡಿದ್ದ ಅಕ್ಷರಗಳನ್ನು ನಕಲಿಸಿ ತಂದು ತ್ರುಟಿತಗೊಂಡಿದ್ದ ಅಕ್ಷರಗಳ ಸ್ಥಾನದಲ್ಲಿ ಉಪಾಯವಾಗಿ ಕೂರಿಸಲಾಯಿತು. ಇಷ್ಟೆಲ್ಲಾ ಸಾಹಸವನ್ನು ಮಾಡಿ, ಕವಿಯ ಹಸ್ತಾಕ್ಷರದಲ್ಲಿಯೇ ಮಹಾಕಾವ್ಯವನ್ನು ಓದುವ ಸಂತಸವನ್ನು ಓದುಗರಿಗೆ ನೀಡಲು ಸಾಧ್ಯವಾದದ್ದು ಈ ಕಂಪ್ಯೂಟರ್‌ನ ಡಿಜಿಟಲ್ ತಂತ್ರಜ್ಞಾನವನ್ನು ಸಮರ್ಥವಾಗಿ ಬಳಸಿದ್ದರಿಂದಲೇ ಇದರಿಂದಾಗಿ, ರಾಷ್ಟ್ರಕವಿಯ ಮಹಾಕಾವ್ಯವು ಆಧುನಿಕ ತಂತ್ರಜ್ಞಾನದ ತೆಕ್ಕೆಗೆ ಬಂದು ಸಂರಕ್ಷಣೆಗೊಂಡಿದೆ.[೧೩]

ಹಸ್ತಪ್ರತಿಗಳನ್ನು ಸಂರಕ್ಷಣೆಗಾಗಿ ಬಳಸಲಾಗುವ ಕಂಪ್ಯೂಟರ್ ಶಾಶ್ವತ ಸ್ಮರಣೆಯ ಗಾತ್ರವು ಕಾಲಕ್ರಮೇಣ ಹೆಚ್ಚಿದಂತೆಲ್ಲಾ ಮತ್ತು ಹೊಸ ಹೊಸ ಆಧುನಿಕ ಡಿಜಿಟಲ್ ಸಂಗ್ರಹಣಾ ಮಾಧ್ಯಮಗಳು ಆವಿಷ್ಕಾರಗೊಂಡಂತೆಲ್ಲಾ, ಹಸ್ತಪ್ರತಿಗಳ ಸಂರಕ್ಷಣಾ ಕಾರ್ಯವು ಸರಳವೂ ಸುಲಭವೂ ಆಗುತ್ತಿದೆ. ಮೊದಲಿಗೆ ಡಿಜಿಟಲ್ ಸಂಗ್ರಹಣಾ ಮಾಧ್ಯಮಗಳಾಗಿ ಮ್ಯಾಗ್ನೆಟಿಕ್ ಲೇಪನ ತಂತ್ರಜ್ಞಾನದ ಫ್ಲಾಪಿಗಳು, ಹಾರ್ಡ್ ಡಿಸ್ಕ್‌ಗಳು, ಡೇಟಾ ಟೇಪ್ ಡ್ರೈವ್‌ಗಳು ಮತ್ತು ಝಿಪ್ ಡ್ರೈವ್‌ಗಳು ಬಳಕೆಗೆ ಬಂದವು. ಆನಂತರದಲ್ಲಿ ಲೇಸರ್ ಕಿರಣಗಳಿಂದ ಕಾರ್ಯನಿರ್ವಹಿಸುವ ಅಪ್ಲಿಕಲ್ ತಂತ್ರಜ್ಞಾನದ ಸಿಡಿಗಳು ಮತ್ತು ಡಿವಿಡಿಗಳು ಬಂದವು ಅಲ್ಲದೇ ಫ್ಲಾಪ್ ಮೆಮೊರಿ ತಂತ್ರಜ್ಞಾನದ ಪೆನ್‌ಡ್ರೈವ್‌ಗಳು ಬಳಕೆಗೆ ಬಂದಿವೆ. ಈ ಎಲ್ಲಾ ತಂತ್ರಜ್ಞಾನದಿಂದ ಹಸ್ತಪ್ರತಿ ಕಾಗದಗಳಂತ ಅಗಾಧವಾದ ದಾಖಲೆಗಳನ್ನು ಒಂದೆರಡು ಸಿಡಿ, ಡಿವಿಡಿ, ಪೆನ್‌ಡ್ರೈವ್‌ನಂತಹ ಕಂಪ್ಯೂಟರ್ ಆವಿಷ್ಕಾರದಿಂದ ಮಾಹಿತಿಯನ್ನು ಸಂಸ್ಕರಿಸಿ ನಮಗೆ ಬೇಕಾದ ಸ್ಥಳಾವಕಾಶ ದೊರೆತಿದೆ. ತಂತ್ರಜ್ಞಾನದ ಆವಿಷ್ಕಾರದಿಂದ ಶ್ರಮ, ಕಾಲ, ವೆಚ್ಚ ಉಳಿತಾಯಗೊಂಡಿದೆ.

ಹಸ್ತಪ್ರತಿಗಳ ಸಂರಕ್ಷಣೆಗೆ ಸಿಲಿಕಾನ್ ವೇಫರ ತಂತ್ರಜ್ಞಾನ ಹೆಚ್ಚು ಸುರಕ್ಷಿತವಾದ ಸಂರಕ್ಷಣೆಯ ತಾಣವಾಗಿದೆ. ಸಿಡಿ, ಡಿವಿಡಿ, ಪೆನ್‌ಡ್ರೈವ್ ಇತ್ಯಾದಿ ಡಿಜಿಟಲ್ ಮೀಡಿಯಾಗಳ ಸ್ಥಾನವನ್ನು ಸಿಲಿಕಾನ್ ವೇಫರ್‌ಗಳು ಆಕ್ರಮಿಸುವ ಕಾಲ ಹತ್ತಿರದಲ್ಲಿಯೇ ಇದೆ. ಹಸ್ತಪ್ರತಿಯ ಪ್ರತಿಯೊಂದು ಪುಟದ ಇನ್ಫ್ರಾರೆಡ್ ಬಿಂಬಗಳನ್ನು ವಿವಿಧ ತರಂಗಗಳಲ್ಲಿ ತೆಗೆಯುವುದು ಈ ಇನ್ಫ್ರಾರೆಡ್ ಬಿಂಬಗಳಲ್ಲಿ ಕಣ್ಣಿಗೆ ಕಾಣದಿರುವ ಗೆರೆಗಳು ಸಹ ಗೋಚರವಾಗುತ್ತವೆ. ನಂತರ ಈ ಬಿಂಬಗಳನ್ನು ಒಂದರ ಮೇಲೊಂದರಂತೆ ಹೆಣೆದು ಒಂದೇ ಬಿಂಬವಾಗಿ ಪರಿವರ್ತಿಸುವುದು. ತದನಂತರ ಅದನ್ನು ಕಂಪ್ಯೂಟರ್ ಡಿಜಿಟಲ್ ರೂಪಕ್ಕೆ ಪರಿವರ್ತಿಸಿ ಕಪ್ಪು ಬಿಳುಪಿನ ಬಿಂಬವಾಗಿಸುವುದು ಈ ಬಿಂಬವನ್ನು ಸಿಲಿಕಾನ್ ವೇಫರ್ ಮೇಲೆ ಎರಕ ಹೊಯ್ಯುವುದೇ ಸಿಲಿಕಾನ್ ವೇಫರ್ ತಂತ್ರಜ್ಞಾನ.[೧೪]

ಸಿಲಿಕಾನ್ ತಟ್ಟೆಯ ಮೇಲೆ ಎರಕ ಹೋದ ಮೇಲೆ ಈ ರೀತಿ ಸಂಸ್ಕಾರಗೊಂಡ ತಟ್ಟೆಗಳು ಗಾಳಿ, ಬೆಳಕು, ತೇವ, ಉಷ್ಣತೆಗಳಿಂದ ಅದರಲ್ಲಿ ಇರುವ ಮಾಹಿತಿಯನ್ನು ಸಂರಕ್ಷಿಸುತ್ತದೆ. ಸಿಲಿಕಾನ್ ತಟ್ಟೆಗಳು ಬೆಂಕಿಯಲ್ಲಿ ಬಿದ್ದರೂ, ಮೇಲಿನ ಪ್ಲಾಸ್ಟಿಕ್ ಹೊದಿಕೆ ಕರಗಿ ಹೋಗಬಹುದೇ ಹೊರತು, ಸಿಲಿಕಾನ್ ವೇಫರ್ ಹಾಳಾಗುವುದಿಲ್ಲ ಎನ್ನುತ್ತಾರೆ. ಅಮೇರಿಕಾದ ರಾಜೆಸ್ಟರ್ ನ್ಯಾನೋರ್ಕ್ ಕಂಪನಿಯ ಮುಖ್ಯಸ್ಥರಾದ ಬೆಂಗಳೂರು ಮೂಲದ ಪ್ರೊ.ಪಿ.ಆರ್.ಮುಕುಂದ್ ಅಂತಹ ಮುದ್ರಿತ ತಟ್ಟೆಗಳಿಂದ ಮಾಹಿತಿಯನ್ನು ಓದಿ, ಕಂಪ್ಯೂಟರ್ ಮಾನಿಟರ್‌ನ ಮೇಲೆ ಪ್ರದರ್ಶಿಸಲು ಇವರು ಒಂದು ತಂತ್ರಾಂಶವನ್ನು ಸಹ ರೂಪಿಸಿದ್ದಾರೆ. ವೇಷರ್‌ಫಿಷ್ ಅವಿನಾಶಿ ಸಾಮಾನ್ಯ ಉಪಯೋಗದಿಂದ ೫೦೦ ವರ್ಷ ತಾಳಿಕೆ ಬರಬಹುದೆಂದು ಕೇಳಲಾಗಿದೆ. ಸಿಲಿಕಾನ್ ವೇಫರ್‌ತಂತ್ರಜ್ಞಾನವು ಹಸ್ತಪ್ರತಿಗಳ ಸಂರಕ್ಷಣೆ, ಸಂಸ್ಕರಣೆಯ ದೃಷ್ಟಿಯಿಂದ ತಂತ್ರಜ್ಞಾನದ ಅತ್ಯುತ್ತಮವಾದ ಆವಿಷ್ಕಾರವಾಗಿದೆ.

ಸಾಮಾನ್ಯವಾಗಿ ಸಂರಕ್ಷಣೆಯ ದೃಷ್ಟಿಯಿಂದ ಹಸ್ತಪ್ರತಿಯನ್ನು ಡಿಜಿಟಲೀಕರಣಗೊಳಿಸಬೇಕಾದಾಗ ಪಠ್ಯವನ್ನಾಗಿಸುವ ಬದಲಾಗಿ ಅದನ್ನು ಸ್ಕ್ಯಾನಿಂಗ್ ಮೂಲಕ ಡಿಜಿಟಲ್ ದಸ್ತಾವೇಜನ್ನಾಗಿ ಪರಿವರ್ತಿಸಲಾಗುತ್ತದೆ.

ಬೆರಳಚ್ಚಿಸಿದ ಪಠ್ಯದ ಪುಟಕ್ಕೆ ಅದರ ಗಾತ್ರಕ್ಕೆ ಹೋಲಿಸಿದರೆ ಸ್ಕ್ಯಾನ್ ಮಾಡಲಾದ ಪುಟದ ಗಾತ್ರವು ಗಣನೀಯವಾಗಿ ದೊಡ್ಡದಾಗಿರುತ್ತದೆ. ಅಂದರೆ, ಹೆಚ್ಚಿನ ಸಂಖ್ಯೆಯ ಬೈಟ್‌ಗಳಾದ್ದಾಗಿರುತ್ತದೆ. ಪಠ್ಯರೂಪದ ಡಿಜಿಟಲ್ ದಸ್ತಾಮೆಜಿನ ಗ್ರಾತವು ಸಹಜವಾಗಿಯೇ ಹೆಚ್ಚಾಗಿರುತ್ತದೆ. ಹಾಗಾಗಿ ಇದು ಹೆಚ್ಚಿನ ಡಿಸ್ಕ್‌ಸ್ಪೇಸನ್ನು (ಸ್ಥಳಾವಕಾಶ) ಬೇಡುತ್ತದೆ.

ಹಸ್ತಪ್ರತಿಗಳನ್ನು ಕಂಪ್ಯೂಟರಿಕರಿಸುವ ಮೂಲ ಉದ್ದೇಶ ಸಂಗ್ರಹಣೆ ಮತ್ತು ಸಂಸ್ಕರಣೆ ಹಾಗೂ ಸಂರಕ್ಷಣೆಯಾಗಿದೆ. ಪರಾಮರ್ಶೆಗಾಗಿ ಪ್ರತಿಬಾರಿ ಮೂಲ ಹಸ್ತಪ್ರತಿಯನ್ನು ತೆಗೆದು ಬಳಸುವ ಬದಲಾಗಿ ಸಂಗ್ರಹಿತ ಹಸ್ತಪ್ರತಿಗಳ ಡಿಜಿಟಲ್ ರೂಪವನ್ನು ಪರಾಮರ್ಶೆಗಾಗಿ ಬಳಸಲುಬಹುದು. ಅದಕ್ಕಾಗಿ ಸಂಗ್ರಹಿತ ಎಲ್ಲಾ ಹಸ್ತಪ್ರತಿಗಳ ಕುರಿತಾದ ಒಂದು ದತ್ತಸಂಚಯವನ್ನು ಸಿದ್ಧಗೊಳಿಸಬೇಕು. ಅಂತಹ ದತ್ತಸಂಚಯದಲ್ಲಿ ಪ್ರತಿಯೊಂದು ಹಸ್ತಪ್ರತಿಯ ವಿವರಗಳನ್ನು ಅಂದರೆ ಅದರ ವರ್ಗೀಕರಣ ಸ್ವರೂಪ, ದೊರೆತ ದಿನಾಂಕ, ರಚನೆಯಾದ ದಿನಾಂಕ, ಸಂಶೋಧಿಸಿದವರ ಹೆಸರು ಬರಹಗಾರರ ಹೆಸರು ಶೀರ್ಷಿಕೆ ಇತ್ಯಾದಿ ವಿವರಗಳನ್ನು ನಮೂದಿಸಬಹುದು. ಆ ದತ್ತ ಸಂಚಯದೊಂದಿಗೆ, ಹಸ್ತಪ್ರತಿಗಳ ಸ್ಕ್ಯಾನ್ ಮಾಡಲಾದ ಎಲ್ಲಾ ಡಿಜಿಟಲ್ ಪುಟಗಳನ್ನೂ ಸಹ ಅಳವಡಿಸಬಹುದು. ಇದೇ ದತ್ತಸಂಚಯವನ್ನು ಬಳಸಿ, ಅವಶ್ಯಕತೆಗೆ ತಕ್ಕಂತೆ ಪರಾಮರ್ಶನ ಮಾಡಲು, ಒಂದು ಆನ್ವಯಿಕ ತಂತ್ರಾಂಶವನ್ನು ಸಹ ಸಿದ್ಧಪಡಿಸಿ ಬಳಸಿಕೊಳ್ಳಬಹುದು. ಪರಾಮರ್ಶನ ವ್ಯವಸ್ಥೆಯುಳ್ಳ ಇಂತಹ ಅನ್ವಯಿಕ ತಂತ್ರಾಂಶವು ಸಂಶೋಧಕರಿಗೂ ಅತ್ಯುಪಯುಕ್ತವಾಗಿರುತ್ತದೆ.[೧೫]

ಕಂಪ್ಯೂಟರ್ ತಂತ್ರಜ್ಞಾನಗಳಾದ ಫ್ಲಾಪಿಗಳು ಕವಚದೊಳಗಿದ್ದರೂ ಸಹ ಧೂಳಿನಿಂದಾಗಿ ಅಥವಾ ಉಷ್ಣತೆಯಿಂದಾಗಿ ಅವು ಹಾಳಾಗುವ ಸಂಭವವಿದೆ.ಹಾರ್ಡ್‌ಡಿಸ್ಕ್‌ಗಳಿಗೆ ಧೂಳು ಮತ್ತು ಉಷ್ಣತೆ ಸಮಸ್ಯೆಯಿಲ್ಲದಿದ್ದರು ವಿದ್ಯುತ್ ಸರಬರಾಜಿನಲ್ಲಿ ಅನಿರೀಕ್ಷಿತ ನಿಲುಗಡೆಯಿಂದ ಓದು ಬರೆಯುವ 'ಹೆಡ್' ಪ್ಯಾಲೆಟ್‌ಗಳ ಮೇಲೆ ಭೌತಿಕವಾದಿ ಬೀಳುವುದರಿಂದ ಗೀಚುಗೆರೆಗಳು ಉಂಟಾಗಿ ಸಂಗ್ರಹಿಸಿದ ಮಾತಿಹಿಗಳು ಹಾಳಾಗುತ್ತವೆ. ಮರಳಿ ಮಾಹಿತಿಯನ್ನು ಪಡೆಯಲು ಕಷ್ಟಸಾಧ್ಯವಾಗುತ್ತದೆ. ಹಸ್ತಪ್ರತಿಗಳ ಡಿಜಿಟಲ್ ಸಂರಕ್ಷಣೆಯೂ ಸಹ ತಂತ್ರಜ್ಞಾನದ ಪರಿಮಿತಿಗೆ ಒಳಪಟ್ಟಿದೆ. ತಂತ್ರಜ್ಞಾನವು ಹಳತಾದಾಗಲೆಲ್ಲಾ ಸಂಗ್ರಹಣೆಯನ್ನು ಪರಿಷ್ಕರಿಸಿ ಹೊಸ ತಂತ್ರಜ್ಞಾನಕ್ಕೆ ವರ್ಗಾಯಿಸಿಕೊಳ್ಳಬೇಕಾದುದು ಅನಿವಾರ್ಯ ಆದಾಗ್ಯೂ, ಕಾಲಕಾಲಕ್ಕೆ ಆವಿಷ್ಕಾರಗೊಳ್ಳುತ್ತಿರುವ ತಂತ್ರಜ್ಞಾನಗಳನ್ನು ಹಸ್ತಪ್ರತಿಗಳ ಸಂಗ್ರಹಣೆ ಮತ್ತು ಸಂರಕ್ಷಣೆಗೂ ಸಹ ಸಮರ್ಥವಾಗಿ ಬಳಸಿಕೊಳ್ಳುವ ಮೂಲಕ ಹಸ್ತಪ್ರತಿಗಳ ಅಧ್ಯಯನ ಕ್ಷೇತ್ರದಲ್ಲಿ ಎಲ್ಲ ರೀತಿಯ ತಂತ್ರಜ್ಞಾನಗಳನ್ನು ಸಹ ಒಳಗುಮಾಡಿಕೊಳ್ಳುವ ಪ್ರಕ್ರಿಯೆಯು ನಿರಂತರವಾಗಿ ನಡೆಯುತ್ತಿದೆ.

ಹಸ್ತಪ್ರತಿಗಳ ಸಂಗ್ರಹಣೆ, ಸಂಸ್ಕರಣೆ, ಸಂರಕ್ಷಣೆಯಲ್ಲಿ ಕಂಪ್ಯೂಟರಿಕರಣಗೊಳಿಸಲಾದ ಮಾಹಿತಿಗಳ ಸಂಪೂರ್ಣ ಸಂರಕ್ಷಣೆ ಇಲ್ಲವೆ ಶಾಶ್ವತ ಪರಿಹಾರ ನೀಡುತ್ತವೆ ಎಂದು ಹೇಳಲಾಗದು. ಸಾಂಪ್ರದಾಯಿಕ ಸಂರಕ್ಷಣೆಯಲ್ಲಿ ಇರುವ ಸಾಧಕಬಾಧಕಗಳಂತೆ ಆಧುನಿಕ ಸಂರಕ್ಷಣೆಯೂ ತನ್ನ ಮಿತಿಯನ್ನು ಒಳಗೊಂಡಿದೆ. ವೇತನಕ್ಕಾಗಿ, ವೃತ್ತಿಗಾಗಿ ಕೆಲವು ಸಮಯಗಳವರೆಗೆ ಮಾತ್ರ ಅವುಗಳ ಸಂರಕ್ಷಣೆ ಜವಾಬ್ದಾರಿಯನ್ನು ಹೊಂದಿದ್ದು ಅದು ಮೇಲಾಧಿಕಾರಿಗೆ ತಿಳಿಸಿ ಅವರು ಹೇಳುವ ಕ್ರಮಗಳನ್ನು ಮಾತ್ರ ಅಳವಡಿಸಬಹುದು.

ಕಾಲದಿಂದ ಕಾಲಕ್ಕೆ ಆವಿಷ್ಕಾರಗೊಳ್ಳುವ ತಂತ್ರಜ್ಞಾನ ಅಳವಡಿಸಿ ಅದರಲ್ಲಿ ಕಾಣುವ ದೋಷಗಳು ಕಂಪ್ಯೂಟರಿನಲ್ಲಿ ಇರುವ ಮಾಹಿತಿಯನ್ನು ಅಳಿಸಿಹಾಕುವ ಸಾಧ್ಯತೆಯಿದೆ. ಆದುದರಿಂದಲೇ ಯಾವುದೇ ಒಂದು ಸಂಗ್ರಹಣಾ ಮಾಧ್ಯಮ ಅಥವಾ ತಂತ್ರಜ್ಞಾನವು ಸಾರ್ವತ್ರಿಕವಾಗಿ ಅತ್ಯುತ್ತಮವಾದದು ಎಂದು ಪ್ರಮಾಣೀಕರಿಸಲು ಅಸಾಧ್ಯ. ಹೀಗಾಗಿ ಯಾವುದೇ ಸಂಗ್ರಹಣ ಮಾಧ್ಯಮದಲ್ಲಿ ಸಂಗ್ರಹಗೊಂಡಿರುವ ಹಸ್ತಪ್ರತಿಗಳ ಮಾಹಿತಿ ಅಥವಾ ಡೇಟಾ ಎಲ್ಲ ಕಾರಣಕ್ಕೂ ಸುರಕ್ಷಿತ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಹೊಸ ತಂತ್ರಜ್ಞಾನದಲ್ಲಿ ಹಳೆಯ ಮಾಹಿತಿಗಳನ್ನು ಮರುಪಡೆಯಲು ಹಲವು ಸಮಸ್ಯೆಗಳು ಎದುರಾಗುತ್ತವೆ.

ಡಿ.ಟಿ.ಪಿ ಮಾಡಲಾದ ಕಡತಗಳನ್ನು ಯಾವ ತಂತ್ರಜ್ಞಾನದಲ್ಲಿ ಸಿದ್ಧಗೊಳಿಸಲಾಗುತ್ತದೋ ಆ ತಂತ್ರಾಂಶದ ಹೊಸ ಹೊಸ ಆವೃತ್ತಿಗಳು ಆವಿಷ್ಕಾರಗೊಂಡಾಗಲೆಲ್ಲ ಕಂಪ್ಯೂಟರನಲ್ಲಿ ಸಂಸ್ಕರಣಗೊಂಡ ಮಾಹಿತಿಗಳು ಅಳಿಸಿ ಹೋಗುವ ಸಂಭವವಿರುತ್ತದೆ. ಉದಾ ಹೊಸ ಆವಿಷ್ಕಾರಕ್ಕೆ ಮತ್ತೆ ಸಂಗ್ರಹಿಸಿಟ್ಟುಕೊಳ್ಳಬೇಕು. ಈ ಪ್ರಕ್ರಿಯೆನ್ನು ಮೈಗ್ರೇಷನ್ ಆಫ್ ಡೇಟಾ ತಂತ್ರಜ್ಞಾನದಿಂದ ಉಳಿಸಿಕೊಳ್ಳಬಹುದು. ಡೇಟಾ ಮೈಗ್ರೇಷನ್ ಕಾಲಕಾಲಕ್ಕೆ ಮಾಡದಿದ್ದರೆ ಕಂಪ್ಯೂಟರನ ಹಿಂದಿನ ಮಾಹಿತಿಗಳು ಹಳತಾಗಿ ಹೋಗಿ ಸಂಗ್ರಹಣೆಯೇ ನಿರುಪಯುಕ್ತವಾಗುವ ಸಾಧ್ಯತೆ ಇದೆ. ಹೀಗಾಗಿ ಹೊಸದಾಗಿ ಆವಿಷ್ಕಾರವಾಗುವ ತಂತ್ರಜ್ಞಾನಕ್ಕೆ ಒಗಿಕೊಳ್ಳುವಂತೆ ಸದಾ ಕ್ರಿಯಾಶೀಲವಾಗಿ ತುಂಬಾ ಜಾಗ್ರತೆಯಿಂದ ಹಸ್ತಪ್ರತಿಯನ್ನು ಕಂಪ್ಯೂಟರಿಕರಿಸಿದ ನಂತರ ಮರುಸಂರಕ್ಷಿಸುವ ಕಾರ್ಯ ನಿರಂತರವಾಗಿ ನಡೆದರೆ ಮಾತ್ರ ಹಸ್ತಪ್ರತಿಗಳಂತಹ ಜ್ಞಾನ ಸಾಮಗ್ರಿಗಳನ್ನು ಸಂರಕ್ಷಿಸಿ ಮಾಹಿತಿಯನ್ನು ಉಳಿಸಿಕೊಳ್ಳಬಹುದಾಗಿದೆ. ಇದಕ್ಕೆ ಮೀಡಿಯಾ ಮೈಗ್ರೇಷನ್ ತಂತ್ರಜ್ಞಾನ ಬಳಸುವುದರಿಂದ ಕಾಲಕಾಲಕ್ಕೆ ಬರುವ ಹೊಸ ಹೊಸ ಮಾಧ್ಯಮಗಳಿಗೆ ಸಂಗ್ರಹಿತ ಡೇಟಾವನ್ನು ವರ್ಗಾಯಿಸಿ ಮತ್ತೆ ಸಂರಕ್ಷಿಸಿಡಲು ಸಾಧ್ಯವಾಗುತ್ತದೆ. ಪ್ಲಾಪಿಯಲ್ಲಿನ ಸಂಗ್ರಹಿತ ಡೇಟಾವನ್ನು ಸಿಡಿ ಮೀಡಿಯಾಗೆ, ಟೇಪ್‌ನಲ್ಲಿ ಸಂಗ್ರಹಿಸಲಾಗಿರುವ ಡೇಟಾವನ್ನು ಸಿಡಿ ಮೀಡಿಯಾಗೆ ಮತ್ತು ಸಿಡಿಯಲ್ಲಿ ಸಂಗ್ರಹಿತ ಡೇಟಾವನ್ನು ಡಿವಿಡಿ ಮಾಧ್ಯಮಕ್ಕೆ ವರ್ಗೀಕರಿಸಿ ಇಡಬಹುದಾಗಿದೆ.

ಮ್ಯಾಗ್ನೆಟಿಕ್ ಟೇಪ್ ಓದಬಲ್ಲ ಡ್ರೈವ್‌ಗಳು ಈಗ ಇಲ್ಲವಾಗಿವೆ. ತಂತ್ರಜ್ಞಾನದ ಹೊಸ ಹೊಸ ಆವಿಷ್ಕಾರದಿಂದ ಇದರಲ್ಲಿರುವ ಮಾಹಿತಿಯನ್ನು ಸಿಡಿ, ಡಿವಿಡಿಯಲ್ಲಿ ಸಂಗ್ರಹಿಸಿಕೊಂಡರೆ ಮಾತ್ರ ಸುರಕ್ಷಿತಾಗಿ ಹೊಸ ತಂತ್ರಜ್ಞಾನದಲ್ಲಿ ಅಳವಡಿಸಿ ಸಂರಕ್ಷಿಸಬಹುದು. ಇಲ್ಲವಾದರೇ ಆ ಮಾಹಿತಿಯೂ ನಶಿಸಿಹೋಗುವ ಸಾಧ್ಯತೆಯಿದೆ. ಸಿಡಿ ಡಿವಿಡಿಗಳನ್ನು ಸುರಕ್ಷಿತವಾಗಿ ನೋಡಿಕೊಳ್ಳಬೇಕು ಬೆಂಕಿ, ನೀರಿನಿಂದ ಉಷ್ಣಾಂಶ ತೇವಾಂಶದಿಂದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯುವಾಗ ಅವುಗಳ ಮೇಲೆ ಒತ್ತಡ ಬೀಳದಂತೆ ಪಾಲಿಕಾರ್ಬೋನೆಟ್ ಫ್ಲಾಸ್ಟಿಕ್‌ನಿಂದ ತಯಾರಿಸಲಾದ ತಟ್ಟೆಗಳಲ್ಲಿ ಇಡಬೇಕಾಗುತ್ತದೆ.

ಜ್ಞಾನ ಮತ್ತು ಜೀವನ ಅನುಭವಗಳನ್ನು ಮುಂದಿನ ತಲೆಮಾರುಗಳ ಪ್ರಯೋಜನಕ್ಕಾಗಿ ದಾಖಲಿಸುವ ಮತ್ತು ಸಂರಕ್ಷಿಸುವ ಕಾರ್ಯ ನಡೆಯುತ್ತಿತ್ತು. ಹಸ್ತಪ್ರತಿಗಳಲ್ಲಿ ಅತ್ಯಮೂಲ್ಯವಾದ ಜ್ಞಾನ ಅತ್ಯಂತ ಉತ್ಕೃಷ್ಟವಾದ ಅಂದವಾದ ಚಿತ್ರಣಗಳನ್ನು ಕಾಣಬಹುದು. ಹಸ್ತಪ್ರತಿಗಳ ಸಂಗ್ರಹದ ನಂತರ ದಾಖಲಿಸಬೇಕು ಮತ್ತು ಅವುಗಳ ವಿಷಯ ಸೂಚಿಗಳನ್ನು ತಯಾರಿಸಿ ಪ್ರಕಟಗೊಳಿಸಬೇಕು. ಮೂಲ ಹಸ್ತಪ್ರತಿಗಳ

ಕಾಫಿಯಾಗಿ ಬದಲಿ ಪ್ರತಿಗಳು ಅಥವಾ ಮೈಕ್ರೋಫಿಲಂ ರೂಪದಲ್ಲಿ ಕಂಪ್ಯೂಟರ್ ಸ್ಕ್ಯಾನ್ ಮೂಲಕ ಹಸ್ತಪ್ರತಿಗಳನ್ನು ಸಂರಕ್ಷಿಸಬಹುದಾಗಿದೆ. ಅಲ್ಲದೇ ಸಂಶೋಧಕರಿಗೆ ಮತ್ತು ಆ ಪ್ರತಿಗಳ ಅವಶ್ಯಕತೆ ಇರುವವರಿಗೆ ಮಾತ್ರ ಲಭ್ಯವಾಗುವಂತೆ ಮಾಡಬೇಕು. ಹಸ್ತಪ್ರತಿಗಳ ಸ್ಥಿತಿ ಗತಿ ಕುರಿತು ಸಮಗ್ರ ವರದಿ ರಚಿಸಿ ಅವುಗಳು ಹಾಳಾಗದಂತೆ ಕ್ರಮಗಳನ್ನು ಕೈಗೊಳ್ಳುತ್ತಿರಬೇಕು. ದಾಸ್ತಾನುಗಳಲ್ಲಿ ಹಸ್ತಪ್ರತಿಗಳು ಹಾಳಾಗುವುದು ಕಂಡು ಬಂದಲ್ಲಿ ಮೇಲಾಧಿಕಾರಿಗಳ ಗಮನಕ್ಕೆ ತರುವುದು ಮೇಲಾಧಿಕಾರಿಯು ಸಂಬಂಧಪಟ್ಟ ದಾಖಲೆಯನ್ನು ಕಾಪಾಡಲು ತಕ್ಷಣ ಕ್ರಮಕೈಗೊಳ್ಳಬೇಕು. ಹಸ್ತಪ್ರತಿಗಳನ್ನು ಸಂರಕ್ಷಿಸಲು ಸಿಬ್ಬಂದಿಗಳಿಗೆ ವಿಶೇಷವಾದ ಜವಾಬ್ದಾರಿಯ ಜೊತೆಗೆ ಆ ಕುರಿತು ತರಬೇತಿಯನ್ನು ನೀಡಬೇಕಾಗುತ್ತದೆ. ಕನ್ನಡದಲ್ಲಿ ಈಗಾಗಲೇ ಹಲವಾರು ರೀತಿಯ ತಂತ್ರಾಂಶಗಳು ಕಾರ್ಯನಿರ್ವಹಿಸುತ್ತಿವೆ. ಕ ಮತ್ತು ಬ ಬರಹ ಕಲಿತ ನುಡಿ ಕನ್ನಡ ಕಚೇರಿ ಕೆಪಿರಾವ್ ನಂತಹ ಸಾಫ್ಟ್‌ವೇರ್‌ಗಳು ಗುಣಾತ್ಮಕ ಸಾಧ್ಯತೆಯನ್ನು ತೆರೆದಿಟ್ಟಿವೆ.

**೯.೩. ಸಂಗ್ರಹಣ ಸಾಧನಗಳು**

**೯.೩.೧. ಡಿ.ವಿ.ಡಿ/ಸಿ.ಡಿ.ರಾಮ್: (DVD/CD ROM)** ಹೆಚ್ಚಿನ ತಂತ್ರಾಂಶಗಳು ಸಿಡಿ.ರಾಮ್‌ನಲ್ಲೇ ಪೂರೈಸಲ್ಪಡುತ್ತವೆ. ಇದನ್ನು ಬಳಸಿಕೊಳ್ಳಬೇಕೆಂದರೆ ನಾವು ಬಳಸುವ ಸಿಸ್ಟಮ್‌ನಲ್ಲಿ ಸಿ.ಡಿ.ರಾಮ್ ಇರಬೇಕು. ಒಂದು ಸಿ.ಡಿ.ರಾಮ್ ಸುಮಾರು ೪೫೦ ಪ್ಲಾಪಿ ಡಿಸ್ಕ್‌ಗಳಷ್ಟು ಸಾಮರ್ಥ್ಯವನ್ನು ಹೊಂದಿರುತ್ತದೆ. ಅದರೆ ಡಿ.ವಿ.ಡಿ. ರಾಮ್‌ಗಳು ಸುಮಾರು ೩೩೩೩ ಪ್ಲಾಪಿ ಡಿಸ್ಕ್ ಗಳಷ್ಟು ಸಾಮರ್ಥ್ಯವನ್ನು ಹೊಂದಬಲ್ಲದು. ಅಷ್ಟೇ ಅಲ್ಲ ಡಿವಿಡಿ ಸಿ.ಡಿ. ರಾಮ್ ಮತ್ತು ಆಡಿಯೋ ಸಿಡಿಗಳನ್ನು ಒಳಗೊಂಡಿದ್ದು, ಇವುಗಳ ಮೂಲಕ ಬೇಕಾದ ಮಾಹಿತಿಯನ್ನು ನಕಲು ಮಾಡಿಕೊಳ್ಳಬಹುದು.

**೯.೩.೨. ಪ್ಲಾಪಿ ಡ್ರೈವ್: (Floppy Dive)** ಮಾಹಿತಿಯನ್ನು ಸುಲಭವಾಗಿ ಒಂದೂ ಕಂಪ್ಯೂಟರಿನಿಂದ ಇನ್ನೊಂದಕ್ಕೆ ಸಾಗಿಸಲು ಸರಳವಾದ ವಿಧಾನವೆಂದರೆ ಪ್ಲಾಪಿ ಡಿಸ್ಕ್‌ಗಳು ಆಯಸ್ಕಾಂತೀಯ ಡಿಸ್ಕ್‌ಗಳಾಗಿದ್ದು ಚೌಕಾಕೃತಿಯ ಪ್ಲಾಸ್ಟಿಕ್ ಆವರಣದಲ್ಲಿ ಸಂಗ್ರಹಿತವಾಗಿರುತ್ತವೆ. ಹಾಗೂ ೧.೪೪ ಎಂ.ಬಿ. ಸಾಮರ್ಥ್ಯವನ್ನು ಹೊಂದುವ ಪ್ಲಾಪಿ ಡಿಸ್ಕ್‌ಗಳು ಪಡೆದಿರುತ್ತವೆ.

**೯.೩.೩. ಸ್ಕ್ಯಾನರ್(Scanner):** ಕಂಪ್ಯೂಟರಿಗೆ ದತ್ತಾಂಶಗಳನ್ನು ನೀಡುವ ಹಲವಾರು ಸಾಧನಗಳಲ್ಲಿ ದೃಷ್ಟಿ ವಿಚ್ಛೇದಕ ಸಲಕರಣೆಯೂ ಒಂದು. ಇದು ಕಂಪ್ಯೂಟರಿಗೆ ಛಾಯಾಚಿತ್ರದ ಅಥವಾ ಬರವಣಿಗೆ ರೂಪದ ಮಾಹಿತಿಯ ಪ್ರತಿಬಿಂಬವನ್ನು ಕಂಪ್ಯೂಟರಿಗೆ ವರ್ಗಾಯಿಸುವ ಒಂದು ಸಾಧನ. ಇದು ಒಂದು ರೀತಿಯಲ್ಲಿ ಜೆರಾಕ್ಸ್ ಯಂತ್ರದಂತೆ ಕಾರ್ಯ ಮಾಡುತ್ತದೆ. ಆದರೆ, ಇನ್ನೊಂದು ಪ್ರತಿಯನ್ನು ಮುದ್ರಿಸುವ ಬದಲು ಆ ಪ್ರತಿಬಿಂಬವನ್ನು ಸ್ಮರಣೆಯಲ್ಲಿ ಸಂಗ್ರಹಿಸಿಕೊಳ್ಳುತ್ತದೆ. ಬೇಕಾದಾಗ ಮುದ್ರಿಸುತ್ತದೆ. ದೃಷ್ಟಿ ವಿಚ್ಛೇದಕಗಳು ಬರೆದ ಮಾಹಿತಿ, ಆಲೇಖ, ಚಿತ್ರ, ನಕ್ಷೆ ಛಾಯಾಚಿತ್ರ ಮುಂತಾದವುಗಳನ್ನು ದತ್ತಾಂಶಗಳಂತೆ ಸ್ವೀಕರಿಸಿ ಸ್ಮರಣಾಂಗಕ್ಕೆ ಕಳಿಸುತ್ತದೆ. ೧. ವೇಗದ ಸ್ಕ್ಯಾನರ್ ೨. ಪುಟ್ಟ ಸ್ಕ್ಯಾನರ್‌ಗಳು ೩. ಕ್ಯಾನೋಸ್ಕ್ಯಾನ್ ೪. ಪೋರ್ಟಬಲ್ ಸ್ಕ್ಯಾನರ್

**೯.೩.೪. ಘನತಟ್ಟೆ (Hard Disk):** ಇದು ಕಂಪ್ಯೂಟರನಲ್ಲಿ ಹೆಚ್ಚು ಬಳಕೆಯಲ್ಲಿರುವ ಸಂಗ್ರಹಣಾ ಸಾಧನವಾಗಿದೆ. ಇದರಿಂದ ದತ್ತಾಂಶಗಳನ್ನು ಕಂಪ್ಯೂಟರಿಗೆ ನೀಡಬಹುದು ಮತ್ತು ಇದರಲ್ಲಿ ದತ್ತಾಂಶಗಳನ್ನು ಸಂಗ್ರಹಿಸಬಹುದು. ಇದು ಮೆಟಾಲಿಕ್ ಆಕ್ಸೈಡಿನಿಂದ ಲೇಪಿತವಾದ ಲೋಹದಿಂದ ಮಾಡಲ್ಪಟ್ಟಿರುತ್ತದೆ. ಇಲ್ಲಿ ಟ್ರ್ಯಾಕ್‌ಗಳ ಸಂಖ್ಯೆ ಪ್ಲಾಪಿಗಿಂತ ಅಧಿಕವಾಗಿದ್ದು ಅಳತೆಗಳ ಆಧಾರದ ಮೇಲೆ ಸಾಮರ್ಥ್ಯ ಅಧಿಕವಾಗಿದು, ಸುಮಾರು ೨೦ ರಿಂದ ೪೫೦ ಎಂ.ಬಿ. ದತ್ತಗಳನ್ನು ಸಂಗ್ರಹಿಸಿಡಬಹುದು.

- ಸಂಗ್ರಹಣಾ ಸಾಮರ್ಥ್ಯ ಅಧಿಕವಾಗಿರುತ್ತದೆ.
- ಸಂಗ್ರಹಣಾ ಸಾಮರ್ಥ್ಯ ೨೦ ಎಂಬಿ ರಿಂದ ೫೪೦ಎಂಬಿ.
- ದತ್ತಗಳನ್ನು ಪಡೆಯುವ ವೇಗ ಪ್ಲಾಪಿಗಿಂತ ಅಧಿಕ.
- ಟ್ರಾಕ್ಯ ಗಳ ಸಂಖ್ಯೇ ಪ್ಲಾಪಿಗಿಂತ ಅಧಿಕ.
- ಕಂಪ್ಯೂಟರನಲ್ಲಿ ಇದನ್ನು ಶಾಶ್ವತವಾಗಿ ಸಂಸ್ಕರಿಸಬಹುದು.

**೯.೩.೫. ಸಿಡಿ ರೋಮ್(CD ROM):** ಇದು ಬಾಹ್ಯ ಸಂಗ್ರಹಣಾ ಸಾಧನವಾಗಿದೆ. ಅತ್ಯಧಿಕ ಮಾಹಿತಿಯನ್ನು ಸುರಕ್ಷಿತವಾಗಿ ಹಾಗೂ ಶಾಶ್ವತವಾಗಿ ಸಂಗ್ರಹಿಸಿಡಲು ಸಿಡಿರೋಮ್ ಗಳನ್ನು ಬಳಸುತ್ತಾರೆ.

೧) ಸಿಡಿ-ರೋಮ್‌ಗಳಲ್ಲಿ ಒಮ್ಮೆ ಬರೆದ ಮಾಹಿತಿಯನ್ನು ಮತ್ತೆ ಮತ್ತೆ ಅಳಿಸಿ ಬರೆಯಲು ಸಾಧ್ಯವಿಲ್ಲ.

೨) ಇದು ಓದು ಮಾತ್ರ ಸ್ಮರಣೆಯಾಗಿದೆ.

೩) ಇದರಲ್ಲಿ ಸಂಗ್ರಹಿಸಬಹುದಾದ ಮಾಹಿತಿಯ ಪ್ರಮಾಣ ೭೦೦ ಎಂಬಿ.

೪) ಇವುಗಳಲ್ಲಿ ೫೦೦ ಪ್ಲಾಪಿ ತಟ್ಟೆಗಳಲ್ಲಿ ಬರುವಷ್ಟು ಮಾಹಿತಿಯನ್ನು ಸಂಗ್ರಹಿಸಬಹುದು.

೫) ಸಿಡಿ - ರೋಮ್‌ಗಳಲ್ಲಿ ಮಾಹಿತಿಯನ್ನು ತುಂಬಲು ಸಿಡಿ ರೈಟರ್ ಎಂಬ ಸಾಧನಬೇಕು.

೬) ಇತ್ತೀಚಿನ ದಿನಮಾನಗಳಲ್ಲಿ ಸಿಡಿ ರೋಮ್‌ಗಳನ್ನು ಪಠ್ಯಗಳಲ್ಲದೇ ಸಿನಿಮಾ ಹಾಡುಗಳನ್ನು ಸಂಗ್ರಹಿಸುವ ಮೂಲಕ ಮನರಂಜನೆಯ ತಾಣದ ಸಂಗ್ರ ಮಾಧ್ಯಮವಾಗಿವೆ.

ಇಂದು ಪಾರಂಪರಿಕ ಸಂರಕ್ಷಣಾ ಕ್ರಮಗಳು ಹಸ್ತಪ್ರತಿ ರಕ್ಷಣೆಯಲ್ಲಿ ಹೆಚ್ಚು ಶ್ರಮ, ವೇಳೆ, ವೆಚ್ಚವನ್ನು ಬಯಸುತ್ತವೆ. ಕಂಪ್ಯೂಟರ್ ತಂತ್ರಜ್ಞಾನದ ಮೂಲಕ ಕಡಿಮೆ ಶ್ರಮದಲ್ಲಿ ಮತ್ತು ಕಡಿಮೆ ಖರ್ಚಿನಲ್ಲಿ ಕಡಿಮೆ ಸ್ಥಳಾವಕಾಶವನ್ನು ಹೊಂದಿ ಹೆಚ್ಚು ಮಾಹಿತಿಯನ್ನು ಸಂಸ್ಕರಣೆ ಮಾಡಬಹುದಾಗಿದೆ. ಇಂದು ಪ್ರಚಲಿತಗೊಂಡಿರುವ ಇಂಟರ್‌ನೆಟ್, ಎಲೆಕ್ಟ್ರಾನಿಕ್ ಕಾಮರ್ಸ್, ಇಮೇಲ್‌ನಂತಹ ನವೀನ ಮಾಧ್ಯಮಗಳು ಹಸ್ತಪ್ರತಿಗಳ ಸಂಗ್ರಹ ಮತ್ತು ಪರಿಚಲನೆಗೆ ದಾರಿಗಳನ್ನು ತೆರೆದಿಟ್ಟಿವೆ. ಅಕ್ಷರವೊಂದನ್ನು ಶೇಖರಿಸಲು ನೂರಾರು ರೂಪಾಯಿಗಳು ಬೇಕಾಗಿದ್ದ ಕಾಲದಿಂದ ಹಿಡಿದು ಕೆಲವೇ ರೂಪಾಯಿಗಳಲ್ಲಿ ಸಹಸ್ರಾರು ಅಕ್ಷರಗಳನ್ನು ಶೇಖರಿಸಿ ಇಟ್ಟುಕೊಳ್ಳಬಲ್ಲ ಸಿಡಿರಾಂ, ಡಿವಿಡಿಯಂತಹ ಅವಕಾಶಗಳು ಬಾಯ್ತೆರೆದು ನಿಂತಿವೆ. ಈ ಮೂಲಕ ಹಸ್ತಪ್ರತಿಗಳನ್ನು ಸಮರ್ಪಕವಾಗಿ ಮತ್ತು ಬಹುಕಾಲದ ಪ್ರಯೋಜನಕ್ಕಾಗಿ ಡಿಜಿಟಲ್ ರೂಪದಲ್ಲಿ ಸಂಗ್ರಹಿಸಿಡಬಹುದಾಗಿದೆ. ಹೋಂಪೇಜ್, ವೈಬ್‌ಸೈಟ್, ವೆಬ್‌ಸರ್ವರ್‌ಗಳು, ಸಂಗ್ರಹ ಯೋಗ್ಯ ಸಾಧನಗಳಾಗಿವೆ.

ಆಧುನಿಕವಾದ ಪ್ರಬಲ ಮಾಧ್ಯಮಗಳ ಮೂಲಕ ಒಂದು ಹಸ್ತಪ್ರತಿ ಭಂಡಾರವನ್ನೇ ಜೇಬಿನಲ್ಲಿಟ್ಟುಕೊಂಡು ತಿರುಗಾಡುವ ಎಲ್ಲಿ ಬೇಕೆಂದರೆ ಅಲ್ಲಿಗೆ ಕಡಿಮೆ ವೇಳೆ ಮತ್ತು ಕಡಿಮೆ ವೆಚ್ಚದಲ್ಲಿ ತಲುಪಿಸುವ ಕ್ರಮ ನಿಜಕ್ಕೂ ಸುತ್ಯಾರ್ಹ. ತಿಳುವಳಿಕೆ ವಿನಿಮಯವಾದಷ್ಟು ಜೀವಂತವಾಗುಳಿಯುತ್ತದೆ. ಹಾಗೆ ಅದರ ಭಾಷೆ ಸಂಸ್ಕೃತಿ ಸಮುದಾಯಗಳು ಪರಿವರ್ತನೆ ತೆರೆದುಕೊಳ್ಳುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ಭಾರತದ ನಿಜವಾದ ಸಾಂಸ್ಕೃತಿಕ ಸಂಪತ್ತು ಹಸ್ತಪ್ರತಿ, ತಾಮ್ರಪತ್ರ ಮತ್ತು ಶಿಲ್ಪ ಸಂಪತ್ತುಗಳಲ್ಲಿ ಅಡಗಿದೆ ಎಂದರೆ ತಪ್ಪಾಗಲಾರದು. ಆದರೆ ಅದರಲ್ಲಿ ಹೆಚ್ಚಿನ ಭಾಗ ಅಪಾತ್ರರ ಕೈಸೇರಿ ಹಾಳಾಗಿರುವುದು ಇತಿಹಾಸದಿಂದ ತಿಳಿದುಬರುತ್ತದೆ.

**೯.೩.೬. ಕಂಪ್ಯೂಟರ್ ಸಂಗ್ರಹ ವಿಧಾನಗಳ ಗುಣಾವಗುಣಗಳು**

೧) ಕಂಪ್ಯೂಟರ್ ಪ್ರಯೋಗಾಲಯಕ್ಕೆ ಮಾತ್ರ ಸೀಮಿತವಾಗಿರದೇ ಸರ್ವವ್ಯಾಪಿಯಾಗಿದೆ. ಉದಾ: ವಾಣಿಜ್ಯ, ವ್ಯವಹಾರ, ವಿಮಾನ, ಕಛೇರಿ, ಶೈಕ್ಷಣಿಕ ಕ್ಷೇತ್ರ, ಕಂಪ್ಯೂಟರ್ ಕಠಿಣವಾದ ಲೆಕ್ಕಚಾರಗಳನ್ನು ತ್ವರಿತವಾಗಿ ಮತ್ತು ಸ್ಪಷ್ಟವಾಗಿ ನಿರ್ವಹಿಸುತ್ತದೆ. ಆಜ್ಞೆಗಳನ್ನು ಕಟ್ಟುನಿಟ್ಟಾಗಿ ನಿರ್ವಹಿಸುತ್ತದೆ. ಅಪೇಕ್ಷಿತ ಕಾರ್ಯಗಳನ್ನು ಶೀಘ್ರವಾಗಿ ಮಾಡುತ್ತದೆ.

೨) ಕಂಪ್ಯೂಟರ್ ಹೆಚ್ಚು ಮಾಹಿತಿಯನ್ನು ಉಪಯುಕ್ತ ವಿಷಯಗಳನ್ನು ಸಂಸ್ಕರಿಸುವ ತಾಣವಾಗಿದೆ. ಸ್ಮರಣಾಂಗ ಮಾಹಿತಿಯನ್ನು ಅಗತ್ಯವಿದ್ದಾಗ ಪೂರೈಸಿತ್ತದೆ.

೩) ಕಂಪ್ಯೂಟರ್ ಮನುಷ್ಯ ಆದೇಶಿಸಿದಂತೆ ನಡೆದುಕೊಳ್ಳುತ್ತದೆ. ಹೀಗಾಗಿ ವೈಜ್ಞಾನಿಕ ಸಂಶೋಧನೆಯಲ್ಲಿ ಸಹಾಯಕವಾಗಿದೆ.

೪) ಕಂಪ್ಯೂಟರ್‌ನಲ್ಲಿ ಇಂಟರ್‌ನೆಟ್ ಇ – ಮೇಲ್ ನಂತಹ ಸೌಲಭ್ಯಗಳು ಪರಸ್ಪರ ಜ್ಞಾನವನ್ನು ಹೊಂದಲು ಸಹಕಾರಿಯಾಗಿದೆ.

೫) ಕಂಪ್ಯೂಟರನ ಪರದೆಯ ಮೇಲೆ ಮಾಹಿತಿಯನ್ನು ಮತ್ತು ಸಂಸ್ಕರಿಸಲ್ಪಟ್ಟ ವಿವರವನ್ನು ಮುದ್ರಣರೂಪದಲ್ಲಿ ಪಡೆಯಲು ಸಹಕಾರಿಯಾಗಿದೆ.

೬) ಕಂಪ್ಯೂಟರ್ ಹೆಚ್ಚು ಕಾರ್ಯಕ್ಷಮತೆಯನ್ನು ಹೊಂದಿದ್ದು. ಕಡಿಮೆ ಸಮಯದಲ್ಲಿಯೇ ಕಾರ್ಯನಿರ್ವಹಿಸುತ್ತದೆ.

**೯.೩.೭. ಮಿತಿಗಳು**

೧) ಕಂಪ್ಯೂಟರ್ ನಲ್ಲಿ ಎಂದಿಗೂ ನಿರ್ಣಾಯಕ ಶಕ್ತಿ ಇರುವುದಿಲ್ಲ. ಅಂದರೆ ತನ್ನಷ್ಟಕ್ಕೆ ತಾನೇ ಯೋಚಿಸಲಾರದು.

೨) ಮಾನವನ ಕೆಲಸಕ್ಕೆ ಮಾತ್ರ ತಕ್ಕಮಟ್ಟಿಗೆ ಸಹಕಾರಿಯಾದದು. ಆದರೆ ಮಾನವನ ಸಹಾಯವಿಲ್ಲದಿದ್ದರೆ ನಿರುಪಯುಕ್ತವಾಗುತ್ತದೆ.

೩) ಅತಿಯಾದ ಕಂಪ್ಯೂಟರ್ ಬಳಕೆಯಿಂದ ನಿರುದ್ಯೋಗ ಸಮಸ್ಯೆ ಕಾಡುತ್ತದೆ. ಹತ್ತು ಜನರು ಮಾಡುವ ಕೆಲಸವನ್ನು ಒಬ್ಬ ಮನುಷ್ಯ ಒಂದು ಕಂಪ್ಯೂಟರ್ ಮೂಲಕ ನಿರ್ವಹಿಸಬಹುದು.

೪) ಕಂಪ್ಯೂಟರ್‌ನ ಮೂಲಕ ಇಂಟರ್‌ನೆಟ್ಟನ್ನಲ್ಲಿರುವ ಮಾಹಿತಿಯನ್ನು ಪಡೆಯಲು ಮುಕ್ತ ಅವಕಾಶಗಳಿರುವುದರಿಂದ ರಾಷ್ಟ್ರದ ಗುಪ್ತಚರ ಮಾಹಿತಿಯನ್ನು, ಹಣಕಾಸಿನ ಮಾಹಿತಿಯೂ ಭಯೋತ್ಪಾದಕರ ಪಾಲಾಗುವ ಸಾಧ್ಯತೆಯೂ ಇರುತ್ತದೆ. ಕಂಪ್ಯೂರನಲ್ಲಿ ಸಂಸ್ಕರಣಗೊಂಡ ಎಲ್ಲಾ ಮಾಹಿತಿಯನ್ನು ಕ್ಷಣಾರ್ಧದಲ್ಲಿ ನಾಶಮಾಡಿವ ವೈರಸ್‌ಗಳು ಜ್ಞಾನದ ಸಂರಕ್ಷಣೆಯಲ್ಲಿ ಕಾರ್ಯಕ್ಷಮತೆಯನ್ನು ಕುಂದಿಸುತ್ತವೆ.

ಹೀಗಾಗಿ ಕಂಪ್ಯೂಟರ್ ತಂತ್ರಜ್ಞಾನ ಎಷ್ಟು ಉಪಯುಕ್ತವೂ ಅಷ್ಟೇ ಅನುಪಯುಕ್ತವಾಗಿದೆ. ಕಂಪ್ಯೂಟರ್ ತರಬೇತಿ ಹೊಂದದವರಿಗೆ ತುಂಬಾ ಕಷ್ಟಕರವಾಗಿದೆ. ವಿದ್ಯುತ್ ಕಡಿತದಿಂದ ಸಮಸ್ಯಗಳು ಒದಗಬಹುದು ಇಷೆಲ್ಲಾ ಸಮಸ್ಯೆಗಳು ಇದ್ದಾಗಲೂ ಕೂಡ ಆಧುನಿಕತೆಗೆ ಅನುಗುಣವಾಗಿ ಬರಹ ಮಾಧ್ಯಮಗಳು ಬದಲಾವಣೆ ಹೊಂದುತ್ತಾ ಬಂದಿವೆ. ಶಿಲೆ, ತಾಳೆಗರಿ, ಕಡತ ಬೂರ್ಜ್ವಪತ್ರ, ಕಾಗದದಂತಹ ಅನೇಕ ಬರಹ ಸಾಮಗ್ರಿಗಳು ಅವಿಷ್ಕರಗೊಂಡವು. ಅದರ ಮುಂದುವರೆದ ಭಾಗವೇ ಕಂಪ್ಯೂಟರ್ ತಂತ್ರಜ್ಞಾನ. ಕಂಪ್ಯೂಟರ್ ತಂತ್ರಜ್ಞಾನದಲ್ಲಿಯೋ ಮಾಹಿತಿಯನ್ನು ಸಂರಕ್ಷಿಸಲು ಡಿಟಿಪಿ, ಸ್ಕ್ಯಾನಿಂಗ್, ಮೈಕ್ರೊಪಿಲ್ಮಿಂಗ್, ಡಿಜಿಟಲಿಕರಣ, ಅಂತರ್‌ಜಾಲ ಇವುಗಳಲ್ಲದೇ ಕಂಪ್ಯೂಟರ್‌ನ ಬಾಹ್ಯ ಬರಹ ಸಾಧನಗಳಾದ ಫ್ಲಾಪಿ, ಸಿಡಿ, ಡಿವಿಡಿ, ಪೆನ್‌ಡ್ರೈವ್‌ನಂತಹ ತಂತ್ರಜ್ಞಾನಗಳು ಅವಿಷ್ಕಾರಗೊಂಡವು. ಕಂಪ್ಯೂಟರ್ ಬಳಕೆ ಮತ್ತು ಆಧುನಿಕ ಯಂತ್ರಗಳನ್ನು ಬಳಸಿ ಕೃತಕ ಬೆಳಕು ನೀಡುವ, ಬೆಳಕಿನ ಪ್ರಮಾಣವನ್ನು ನಿಯಂತ್ರಿಸುವುದು, ಉಷ್ಣಾಂಶದಿಂದ ಹಸ್ತಪ್ರತಿಗಳನ್ನು ಸಂರಕ್ಷಿಸಬಹುದು. ಅಲ್ಲದೇ ರಾಸಾಯನಿಕ ಬಳಕೆಯಿಂದ ಕ್ರಿಮಿಕೀಟಗಳಿಂದ ಸಂರಕ್ಷಿಸುವುದರಿಂದ ಪ್ರಾಚೀನ ಜ್ಞಾನವನ್ನು ಸಂರಕ್ಷಿಸಿ ಸಂವರ್ಧಿಸಿ ಮುಂದಿನ ತಲೆಮಾರಿಗೆ ತಲುಪಿಸಲು ತುಂಬಾ ಉಪಯುಕ್ತವಾದ ಮಾಧ್ಯಮಗಳಾಗಿವೆ.

**ಅಡಿಟಿಪ್ಪಣಿಗಳು**

೧. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು) ಪುಟ ೧೬೦; ೨೦೦೩

೨. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು) ಪುಟ ೧೬೦; ೨೦೦೩

೩. ಶ್ರೀಮತಿ ಉಷಾ ಸುರೇಶ್ ತಾಳೆಗರಿಗಳ ಮತ್ತು ಕಾಗದ ದಾಖಲೆಗಳ ಸಂರಕ್ಷಣೆ ಏಕೆ ಮತ್ತು ಹೇಗೆ, ಪುಟ.೧೨

೪. ಶ್ರೀಮತಿ ಉಷಾ ಸುರೇಶ್ ತಾಳೆಗರಿಗಳ ಮತ್ತು ಕಾಗದ ದಾಖಲೆಗಳ ಸಂರಕ್ಷಣೆ ಏಕೆ ಮತ್ತು ಹೇಗೆ, ಪುಟ.೧೨

೫. ಶ್ರೀಮತಿ ಉಷಾ ಸುರೇಶ್ ತಾಳೆಗರಿಗಳ ಮತ್ತು ಕಾಗದ ದಾಖಲೆಗಳ ಸಂರಕ್ಷಣೆ ಏಕೆ ಮತ್ತು ಹೇಗೆ, ಪುಟ.೧೬

೬. ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ. ೭೦; ೨೦೦೮-೦೯

೭. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳು ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನ: ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ೨೦೦೦.

೮. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸಸಾಧ್ಯತೆಗಳು) ಪುಟ, ೧೫೮; ೨೦೦೩

೯. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು), ಪುಟ.೧೫೮; ೨೦೦೩

೧೦. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು) ಪುಟ.೧೫೮,೧೫೯; ೨೦೦೩

೧೧. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಗಣಕೀಕರಣ: (ಹಸ್ತಪ್ರತಿ ವ್ಯಾಸಂಗ, ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು) ಪುಟ.೧೫೯; ೨೦೦೩

೧೨. ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ. ೭೫, ೭೬; ೨೦೦೮-೦೯

೧೩. ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ, ೬೫; ೨೦೦೮-೦೯

೧೪. ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ. ೭೩, ೭೪; ೨೦೦೮-೦೯

೧೫. ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ. ೭೯; ೨೦೦೮-೦೯

೧೬ ವೀರೇಶ ಬಡಿಗೇರ, (ಸಂ), ಹಸ್ತಪ್ರತಿ ಅಧ್ಯಯನ: ಪುಟ, ೬೪; ೨೦೦೮-೦೯



ಅಧ್ಯಾಯ ಹತ್ತು

# ಸಂರಕ್ಷಣೆ ಹಾಗೂ ಗ್ರಂಥಾಲಯ ವಿಜ್ಞಾನ

೧೦.೧. ಗ್ರಂಥಗಳ ಆಯ್ಕೆ

೧೦.೨. ರಾಷ್ಟ್ರೀಯ ಪುಸ್ತಕ ಮಂಡಳಿ

೧೦.೨.೧. ರಾಷ್ಟ್ರೀಯ ಪುಸ್ತಕ ಮಂಡಳಿಯ ಉದ್ದೇಶಗಳು

೧೦.೩. ಗ್ರಂಥ ಸಂರಕ್ಷಣೆ ಮತ್ತು ರಾಸಾಯನಿಕಗಳ ಬಳಕೆ

೧೦.೪. ಗ್ರಂಥಾಲಯ ಕಾರ್ಯತಂತ್ರಗಳು ಹಾಗೂ ಸೇವೆಗಳು

೧೦.೫. ಗ್ರಂಥಾಲಯ ವರ್ಗೀಕರಣ

೧೦.೫.೧ ಗ್ರಂಥಾಲಯ ವರ್ಗೀಕರಣ ಪದ್ಧತಿಗಳು

೧೦.೫.೨. ಡ್ಯೂಯಿ ದಾಶಮಿಕ ವರ್ಗೀಕರಣ ಪದ್ಧತಿ

೧೦.೫.೩. ದ್ವಿಬಿಂದು ವರ್ಗೀಕರಣ ಪದ್ಧತಿ

೧೦.೬. ಗ್ರಂಥಸೂಚಿ

೧೦.೭. ಗ್ರಂಥಗಳ ದುರಸ್ತಿ

೧೦.೮. ದಾಸ್ತಾನು ಪರಿಶೀಲನೆ

೧೦.೯. ವಿದ್ಯುನ್ಮಾನ ಗ್ರಂಥಾಲಯ

೧೦.೯.೧. ವಿದ್ಯುನ್ಮಾನ ಗ್ರಂಥಾಲಯದ ಉದ್ದೇಶಗಳು

"ಗ್ರಂಥಗಳಿಲ್ಲದಿದ್ದಲ್ಲಿ ದೇವರೇ ಮೂಕನಾಗಿ ಬಿಡುತ್ತಾನೆ; ನ್ಯಾಯದೇವತೆ ನಿದ್ರಿಸುತ್ತಾಳೆ; ವಿಜ್ಞಾನದೇವತೆ ವಿಶ್ರಾಂತಿ ಪಡೆಯುತ್ತಾಳೆ; ತತ್ವಜ್ಞಾನ ಕಂಟುತ್ತದೆ; ಸಾಹಿತ್ಯ ಬಾಯಿಗೆ ಬೀಗ ಹಾಕಿಕೊಂಡು ಬಿಡುತ್ತದೆ; ಉಳಿದುದೆಲ್ಲವೂ ಅಂಧಕಾರದಲ್ಲಿ ಅಡಗಿ ಬಿಡುತ್ತದೆ" ಎಂದು ಥಾಮಸ್ ಬಾರ್ಥೋಲಿನ್ ಎಂಬ ಡೆನ್ಮಾರ್ಕ ದೇಶದ ಗ್ರಂಥಪಾಲಕನೊಬ್ಬನು ೧೬೭೨ರಲ್ಲಿಯೇ ಸಾರಿ ಹೇಳಿದ್ದಾನೆ. ನಿಜವಾಗಿಯೂ ಗ್ರಂಥಗಳು ನಮ್ಮ ನಾಗರಿಕತೆಯ ತಳಹದಿ; ನಮ್ಮ ಸಂಸ್ಕೃತಿಯ ಪ್ರತಿನಿಧಿ; ನಮ್ಮ ಬಾಳಿಗೆ ಬೆಳಕು. ಗ್ರಂಥಗಳ ಸಾಮರ್ಥ್ಯ, ಘನತೆ ಅಷ್ಟಿಷ್ಟಲ್ಲ.

ಬರವಣಿಗೆಯ ಅತಿ ಮೊಟ್ಟಮೊದಲಿನ ರೂಪವೆಂದರೆ ಕಲ್ಲು. ಈ ರೂಪದ ಪಠ್ಯಗಳು ನಮ್ಮ ದೇಶದ ಮೂಲೆಮೂಲೆಯಲ್ಲಿ ದೊರೆಯುತ್ತವೆ. ಕ್ರಿಪೂ. ೩ನೆಯ ಶತಮಾನದ ಅಶೋಕನ ಶಿಲಾಶಾಸನಗಳು ಇದಕ್ಕೆ ಉತ್ತಮ ಉದಾಹರಣೆ. ಬೆಬಿಲೋನಿಯ ಮತ್ತು ಆಸ್ಸೀರಿಯಾ ದೇಶಗಳಲ್ಲಿ ಕ್ರಿಪೂ. ೨೦೦೦ ವರ್ಷಗಳ ಹಿಂದೆ ಇಟ್ಟಂಗಿ ರೂಪದಲ್ಲಿ ಪುಸ್ತಕಗಳಿರುತ್ತಿದ್ದವೆಂದು ಇಂಥ ಇಟ್ಟಂಗಿಗಳ ವರ್ಗೀಕೃತ ಪೀಪಾಯಿಗಳು ಅಲ್ಲಿ ಇತ್ತೀಚಿಗೆ ಸಿಕ್ಕಿರುವುದರಿಂದ ಮತ್ತು ಅಲ್ಲಿ ದೊರೆತ ಗ್ರಂಥದ ಲೇಖಕನ ಹೆಸರು ಇನ್ನಿತರ ಮಾಹಿತಿಯನ್ನು ಸೂಚಿಸುವ ಸೂಚಿಪತ್ರವನ್ನು ಅಂಟಿಸಿರುವುದು ಕಾಣಬಹುದಾಗಿದೆ. ಚೀನಾ ದೇಶದಲ್ಲಿ ಗ್ರಂಥಗಳನ್ನು ಕ್ರಿಪೂ. ೧೪ನೆಯ ಶತಮಾನದಲ್ಲಿ ಎಲುಬುಗಳ ಮೇಲೆ ಬರೆಯುತ್ತಿದ್ದರಂತೆ. ಆನ್‌ಯಾಂಗ್ ಎಂಬಲ್ಲಿ ದೊರೆತ ಇಂಥ ಎಲುಬುಗಳಿಗೆ Oracle bones ಎಂದು ಹೇಳುತ್ತಾರೆ.

ಮಾನವ ತನ್ನ ಬರಹಕ್ಕಾಗಿ ಚರ್ಮ, ಹುಲ್ಲು, ತೊಗಟೆ, ತಾಮ್ರಪಟ, ತಾಡವೋಲೆ (ತಾಳೆಗರಿ) ಭೂರ್ಜಪತ್ರ, ಆರಿವೆ, ರೇಶಿಮೆಬಟ್ಟೆ, ಬಿದಿರು, ಫಲಕ, ಕಬ್ಬಿಣ, ಹಿತ್ತಾಳೆ, ಬೆಳ್ಳಿ ಬಂಗಾರಗಳ ಪಟ, ಹಸ್ತಿದಂತ ಮುಂತಾದವುಗಳನ್ನು ಬಳಸುತ್ತಾ ಬಂದಿದ್ದಾನೆ.. ಈ ಎಲ್ಲಾ ವಿಧದ ಬರಹ ಸಾಧನವಿರುವ ಬರಹವನ್ನು ವಸ್ತುಸಂಗ್ರಹಾಲಯ, ಗ್ರಂಥಭಂಡಾರ, ಗ್ರಂಥಾಲಯಗಳಲ್ಲಿ ಕಾಣಬಹುದಾಗಿದೆ. ಆಸಕ್ತರಿಗೆ ಸೂಕ್ತ ಜ್ಞಾನವನ್ನು ಕಡಿಮೆ ಸಮಯದಲ್ಲಿ ಪೂರೈಸುವುದೇ ಗ್ರಂಥಾಲಯದ ಮುಖ್ಯ ಉದ್ದೇಶವಾಗಿದೆ.

ಗ್ರಂಥಾಲಯಗಳು ಒಂದು ಸಾಮಾಜಿಕ ಶೈಕ್ಷಣಿಕ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿವೆ. ಗ್ರಂಥ ಸಿಬ್ಬಂದಿ ಮತ್ತು ಓದುಗರ ತ್ರಿವೇಣಿ ಸಂಗಮವಾಗಿದ್ದು. ಸಿಬ್ಬಂದಿ & ಓದುಗರು ಗ್ರಂಥಗಳನ್ನು

ಒಂದಕ್ಕೊಂದು ಪೂರಕವಾಗಿ ವ್ಯವಸ್ಥಿತವಾಗಿ ಬಳಸಿಕೊಂಡಾಗ ಸಮಾಜ ಏಳಿಗೆ ಸಾಧ್ಯ. ಗ್ರಂಥಾಲಯದ ಸಂಯೋಜಿತ ಮಾಹಿತಿ ಮೂಲಗಳ ಸಂಗ್ರಹಗಳಿಗೆ ಜ್ಞಾನಜೀವಿಗಳ ಜ್ಞಾನತೃಷೆಗೆ ಸ್ಪಂದಿಸುವ ಹಾಗೂ ಸಾಮಾನ್ಯ ಓದುಗನನ್ನು ಸಹೃದಯ, ಸಂಶೋಧಕ ವಿಮರ್ಶಕನನ್ನಾಗಿ ಮಾಡುವ ಶಕ್ತಿ ಇದೆ. ಹೀಗಾಗಿ ಗ್ರಂಥಾಲಯಗಳು ಮನುಷ್ಯನ ಬೌದ್ಧಿಕ ವಿಕಾಸಕ್ಕೆ ಸಹಕಾರಿಯಾಗಿದ್ದು. ಜನರ ಮಾಹಿತಿ, ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಗತ್ಯತೆಗಳನ್ನು ಪೂರೈಸುವ ಕೇಂದ್ರವಾಗಿವೆ. ಓದುಗರ ಅಭಿರುಚಿಗೆ ಹಾಗೂ ಆಕಾಂಕ್ಷೆಗೆ ತಕ್ಕುದಾದ ಜ್ಞಾನವನ್ನು ಶೇಖರಿಸಿ ವಿತರಿಸುವ ಮೂಲಕ ಜ್ಞಾನಕ್ಷೇತ್ರವನ್ನು ವಿಶಾಲಗೊಳಿಸಬಲ್ಲ ಪ್ರಬುದ್ಧ ಸಂಸ್ಥೆಯಾಗಿದೆ.

ಲೈಬ್ರರಿ ಪದದ ಪ್ರತಿ ಅಕ್ಷರಕ್ಕೂ ಮೌಲಿಕವಾದ ಅರ್ಥವಿದೆ. ಅದೆಂದರೆ You literate by Accessing, Reading and Referring Informative Books. ಅಂದರೆ ಮಾಹಿತಿಯುಕ್ತ ಪುಸ್ತಕಗಳನ್ನು ಓದುವ, ಆಕರಿಸುವ ಹಾಗೂ ಅವಲೋಕಿಸುವ ಮೂಲಕ ಜ್ಞಾನಿಯಾಗು' ಎಂದು ಅರ್ಥೈಸಬಹುದು.[೧] ಓದುಗರ ಅಭಿರುಚಿ ಅನುಗುಣವಾಗಿ ಹಸ್ತಪ್ರತಿ ಗ್ರಂಥಗಳಂಥ / ಜ್ಞಾನದ ಮೂಲಗಳನ್ನು ಸಂಗ್ರಹಿಸಿ ಅವುಗಳ ಸ್ವರೂಪಕ್ಕನುಗುಣವಾಗಿ ವಿಂಗಡಿಸಲಾಗುವುದು. ಗ್ರಂಥಾಲಯದ ಸಮಗ್ರ ಸಂಗ್ರಹದಿಂದ ಸುಲಭವಾಗಿ ಬೇಕಾದ ಗ್ರಂಥವನ್ನು ಅಥವಾ ಜ್ಞಾನವನ್ನು ಕಡಿಮೆ ಸಮಯದಲ್ಲಿ ಪಡೆಯುವ ಅನುಕೂಲತೆಯೂ ಇರುತ್ತದೆ. ಹೀಗೆ ಸಂಗ್ರಹಿಸಿದ ಗ್ರಂಥಗಳನ್ನು ವಿಷಯ ಲೇಖಕ ಹಾಗೂ ಶೀರ್ಷಿಕೆವಾರು ಸೂಚೀಕರಿಸಲಾಗುವುದು. ಪ್ರಾಚೀನ ಗ್ರಂಥಾಲಯಗಳು ಹಸ್ತಪ್ರತಿ ಸಂಗ್ರಹಗಳಾಗಿದ್ದವು. ಕಾಲಾನಂತರ ಅವುಗಳೊಂದಿಗೆ ಮುದ್ರಿತ ಗ್ರಂಥಗಳನ್ನು ಹಾಗೂ ಕೆಲವು ಮುಖ್ಯ ದಾಖಲೆಗಳನ್ನು ಸಂಗ್ರಹಿಸಲು ಪ್ರಾರಂಭಿಸಲಾಯಿತು. ಕಾಲಕ್ರಮಿಸಿದಂತೆ ಜೀವನ ಶೈಲಿಯ ತ್ವರಿತ ಬದಲಾವಣೆಯಿಂದಾಗಿ ಜನರಲ್ಲಿ ಜ್ಞಾನದಾಹದ ಪರಿಕಲ್ಪನೆ ಬೇರೆಯಾಯಿತು. ಕೇವಲ ಮೇಲುವರ್ಗಕ್ಕೆ ಸೀಮಿತವಾದ ಜ್ಞಾನ ಸಂಪಾದನೆಯ ಕಾರ್ಯ ಸಾರ್ವತ್ರಿಕವಾಗಿ ಎಲ್ಲರೂ ಪಡೆಯುವಂತಾಯಿತು.

ಗ್ರಂಥಾಲಯಗಳು ಸಮಾಜದ ಸಾಂಸ್ಕೃತಿಕ ವಲಯಕ್ಕೆ ಹೃದಯಭಾಗವಿದ್ದಂತೆ ಇಂದಿನ ಶಿಕ್ಷಣ ಪದ್ಧತಿಯಲ್ಲಿ ಗ್ರಂಥಾಲಯ ಪಾತ್ರ ಮುಖ್ಯವಾಗಿದೆ. ಶಿಕ್ಷಣ ಮತ್ತು ಗ್ರಂಥಾಲಯ ಅವಳಿ – ಜವಳಿ ಇದ್ದಂತೆ. ಆದ್ದರಿಂದ ಇತ್ತೀಚೆಗೆ ಗ್ರಂಥಾಲಯಗಳು ಬರೀ ಮಾಹಿತಿಯನ್ನು ಒದಗಿಸುವ ಕೇಂದ್ರಗಳಾದ ಗ್ರಂಥಾಲಯವನ್ನು ಬೌದ್ಧಿಕ ಪ್ರಯೋಗಾಲಯ ಮತ್ತು ಜ್ಞಾನವನ್ನು ಸಂಗ್ರಹಿಸಿ ಸಂರಕ್ಷಿಸುವುದರ ಜೊತೆಗೆ ಎಲ್ಲಾ ರೀತಿಯ ಓದುಗರ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುವ ಜ್ಞಾನ ಸಂರಕ್ಷಣೆ ಮೂಲ ತಾಣವಾಗಿವೆ. ಉತ್ತಮ ಮತ್ತು ಯೋಗ್ಯವಾಗಿ ಸಂಘಟಿಸಲ್ಪಟ್ಟ ಗ್ರಂಥಾಲಯಗಳು ಸಕಲ ಸೌಕರ್ಯಗಳಿಂದ ಸುಸಜ್ಜಿತವಾದ ಕಟ್ಟಡದಲ್ಲಿ ಎಲ್ಲ ವಿಷಯಗಳ ಗ್ರಂಥಗಳನ್ನು ಸಂಗ್ರಹಿಸುವ ಹಾಗೂ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿದ್ದು (ಓದುಗರ) ಸಹೃದಯರಿಗೆ ತಲುಪಿಸುವ ಮೂಲಕ ತನ್ನ ಪರಿಸರದಲ್ಲಿರುವವರಿಗೆ ಗ್ರಂಥಾಲಯಕ್ಕೆ ಬರುವ ಮತ್ತು ಓದುವ ಹವ್ಯಾಸವನ್ನು ಬೆಳೆಸುವ ಜ್ಞಾನ ಪ್ರಸರಣದ ಸಾರ್ವಜನಿಕ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ.

ಪ್ರತಿನಿತ್ಯವೂ ಜ್ಞಾನದ ವಲಯದ ವಿಸ್ತೃತವಾಗುತ್ತಿರುವುದರಿಂದ ಜಗತ್ತಿನಲ್ಲಿ ನಡೆಯುವ ಹೊಸ ಶೋಧನೆಗಳನ್ನು ತಿಳಿದುಕೊಳ್ಳಲು ಗ್ರಂಥಾಲಯಗಳು ಅತೀ ಅವಶ್ಯಕವಾಗಿರುವವು. ಕಲಿಕೆ ಎನ್ನುವುದು ನಿರಂತರವಾದ ಪ್ರಕ್ರಿಯೆಯಾಗಿದ್ದು ಶಿಕ್ಷಕನೊಬ್ಬನೇ ಎಲ್ಲ ವಿಷಯಗಳಲ್ಲಿ ಪರಿಣಿತನಾಗಿರಲಾರನು. ಎಲ್ಲ ಬಲ್ಲವನಿಲ್ಲ ಜಗದಲಿ ಎನ್ನುವಂತೆ ಮಾನವ ತನ್ನ ಜ್ಞಾನವಲಯವನ್ನು ವಿವಿಧ ಆಯಾಮದ ಮೂಲಕ ಪಡೆದುಕೊಳ್ಳುತ್ತಾನೆ. ಗ್ರಂಥಾಲಯವಿಲ್ಲದ ಶಿಕ್ಷಣ ಅಂದರೆ ಆತ್ಮವಿಲ್ಲದ ದೇಹದಂತೆ ಎಂದು ಹೇಳಬಹುದು. ಪ್ರಧಾನಿ ನೆಹರೂರವರು ಗ್ರಂಥಾಲಯ ಕುರಿತು "A Library is the key to the knowledge of the world" ಎಂದು ಹೇಳಿದ್ದಾರೆ.[೨]

ಜ್ಞಾನ ಸಂಗ್ರಹ, ಸಂರಕ್ಷಣೆ, ವಿತರಣೆ ಮನುಷ್ಯನ ವ್ಯಕ್ತಿತ್ವದ ವಿಕಾಸಕ್ಕೆ ಸಹಕಾರಿಯಾಗುತ್ತದೆ. ಅವನು ಮಾನಸಿಕವಾಗಿ ಬೌದ್ಧಿಕವಾಗಿ, ಶಾರೀರಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಎಲ್ಲಾ ರಂಗಗಳಲ್ಲಿ ಅಂದರೆ ಅವನ ಸರ್ವಾಂಗೀಣ ಪ್ರಗತಿಯನ್ನು ಹೊಂದಿ ಉತ್ತಮ ನಾಗರಿಕನಾಗಿ ರೂಪುಗೊಳ್ಳಲು ಗ್ರಂಥಾಲಯಗಳು ಕಾರಣವಾಗುತ್ತವೆ. ಉತ್ತಮ ನಾಗರಿಕನ್ನೆ ದೇಶದ ಸಂಪತ್ತು. ಈ ಸಂಪತ್ತನ್ನು ಹೆಚ್ಚಿಸುವ ಕೆಲಸ ಗ್ರಂಥಾಲಯಗಳದ್ದು. ಶಿಕ್ಷಣದಲ್ಲಿ ಔಪಚಾರಿಕ ಅನೌಪಚಾರಿಕವಾಗಿ ಗ್ರಂಥಾಲಯದ ಪಾತ್ರ ಮಹತ್ವದಾಗಿದ್ದು. ಇದನ್ನರಿತು ಮಾಧ್ಯಮಿಕ ಶೈಕ್ಷಣಿಕ ಆಯೋಗವು (೧೯೫೨) ಕೋಠಾರಿ ಆಯೋಗ (೧೯೬೬) ಮತ್ತು ಹೊಸ ಶಿಕ್ಷಣ ನೀತಿ (೧೯೮೬) ಶಿಕ್ಷಣ ರಂಗದಲ್ಲಿ ಗ್ರಂಥಾಲಯದ ಮಹತ್ವದ ಬಗ್ಗೆ ಹೆಚ್ಚಿನ  ಒತ್ತನ್ನು ಕೊಟ್ಟಿದೆ. ಮಾಧ್ಯಮಿಕ ಶೈಕ್ಷಣಿಕ ಆಯೋಗವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸುಸಜ್ಜಿತ ಮತ್ತು ಸುಸಂಘಟಿತ ಗ್ರಂಥಾಲಯವು ಶಾಲೆಗಳ ಬೆನ್ನೆಲುಬಾಗಿದೆ ಎಂದು ಶಿಫಾರಸು ಮಾಡಿದೆ.

ಮಾಧ್ಯಮಿಕ ಶೈಕ್ಷಣಿಕ ಆಯೋಗದ ಪ್ರಕಾರ "ಶಾಲೆಯಲ್ಲಿ ಗ್ರಂಥಾಲಯವು ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿದೆ. ವಿಜ್ಞಾನ ವಿಷಯಗಳಿಗೆ ಪ್ರಯೋಗಶಾಲೆ ಬೇಕಾಗುವಂತೆ, ತಾಂತ್ರಿಕ ವಿಷಯಗಳಿಗೆ ಕಮ್ಮಟ ಬೇಕಾಗುವಂತೆ ಶಾಲೆಗಳಿಗೆ ಗ್ರಂಥಾಲಯಗಳು ಬೇಕು. ವೈಯಕ್ತಿಕ ಚಟುವಟಿಕೆಗಳು, ಉತ್ತಮ ಗ್ರಂಥಾಲಯದ ಬುನಾದಿಯಾಗಿದೆ. ಗ್ರಂಥಾಲಯ ಮತ್ತು ಶಿಕ್ಷಣದ ಪರಸ್ಪರ ಅವಲಂಬನೆ ಮತ್ತು ಪರಿಸರ ಆಂತರಿಕ ಸಂಬಂಧ ವ್ಯಕ್ತವಾಗುತ್ತದೆ. ಅವೆರಡರ ಸಂಬಂಧ ಬಹಳ ಅನ್ಯೋನ್ಯವಾದದ್ದು. ಒಂದು ಮತ್ತೊಂದರ ಅಭಿವೃದ್ಧಿಗೆ ಪೂರಕವಾಗಿವೆ. ಸುಸಜ್ಜಿತ್ ಮತ್ತು ಸುಸಂಘಟಿತ ಗ್ರಂಥಾಲಯ ಶಿಕ್ಷಣವೆಂಬ ಸೌಧದ ಅಡಿಪಾಯವಾಗಿದೆ. ಗ್ರಂಥಾಲಯವಿಲ್ಲದ ಶಿಕ್ಷಣ ಅರ್ಥವಿಲ್ಲದ್ದು ಶೈಕ್ಷಣಿಕ ಚಟುವಟಿಕೆಗಳಿಲ್ಲದ ಗ್ರಂಥಾಲಯ ವ್ಯರ್ಥವಾದದ್ದು ಎರಡೂ ಒಟ್ಟೊಟ್ಟಿಗೆ ಸಾಗುತ್ತವೆ. ಅವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.

ಗ್ರಂಥಾಲಯವೆಂದರೆ ಜ್ಞಾನವನ್ನು ಸಂರಕ್ಷಿಸುವ ಓದುಗರಿಗೆ ಜ್ಞಾನವನ್ನು ಉಣಬಡಿಸುವ ಕೇಂದ್ರವಾಗಿದೆ. ಈ ಜ್ಞಾನ ಭಂಡಾರದಲ್ಲಿ ಎಲ್ಲ ವಿಷಯಗಳ ಮೇಲು ಉಪಯುಕ್ತ ಮೇಧಾವಿಗಳಿಂದ ರಚಿತವಾದ

ಗ್ರಂಥಗಳನ್ನು ತಕ್ಷಣ ದೊರಕುವಂತೆ ವ್ಯವಸ್ಥಿತವಾಗಿ ಜೋಡಿಸಲಾಗುತ್ತದೆ. ಇಂಥ ಗ್ರಂಥಗಳ ಮತ್ತು ಅಂತರಜಾಲದ (Non-book) ಮಾಹಿತಿಯನ್ನು ನೀಡುವ ಜ್ಞಾನ ಭಂಡಾರಕ್ಕೆ ಗ್ರಂಥಾಲಯ ಎನ್ನುವರು.

ಡಾ. ಎಸ್. ಆರ್. ರಂಗನಾಥರವರು "ಬದಲಾಗುತ್ತಿರುವ ಪ್ರಪಂಚಕ್ಕೆ ವಿದ್ಯಾರ್ಥಿಗಳನ್ನು ವಿದ್ಯಾವಂತರನ್ನಾಗಿ ಮಾಡಲು ಶಿಕ್ಷಣ ಕೊಡುವ ಶಾಲೆಗಳಲ್ಲಿ ಶಾಲಾ ಗ್ರಂಥಾಲಯವು ಒಂದು ಅದು ಜೀವಂತ ಕಾರ್ಯಗಾರವಿದ್ದಂತೆ" ಎಂದು ಹೇಳಿದ್ದಾರೆ.

ಮನುಷ್ಯನಿಗೆ ಗ್ರಂಥಾಲಯಗಳು ಚೈತನ್ಯದ ಚಿಲುಮೆಯಾಗಿವೆ. ಓದುಗನಿಗೆ ಸೃಜನಾತ್ಮಕ ಭಾವನೆ ಮತ್ತು ವಿಚಾರ ಕ್ಷೇತ್ರದ ವಿಸ್ತರಣೆಯನ್ನು ಮಾಡುವ ಮಾಹಿತಿ ಮತ್ತು ವಿಜ್ಞಾನ ಶಾಖೆಯಾಗಿ ಕಾರ್ಯನಿರ್ವಹಿಸುತ್ತದೆ. ಗ್ರಂಥಗಳು ಜ್ಞಾನದ ಮಾಹಿತಿಯನ್ನು ಹಾಗೂ ವಿಷಯದ ಮೂಲ ಆಕರಗಳಾಗಿ ಜನಾಂಗದಿಂದ ಜನಾಂಗಕ್ಕೆ ದೇಶದಿಂದ ದೇಶಕ್ಕೆ ಜ್ಞಾನವನ್ನು ಪಸರಿಸುವ ಭೂತಕಾಲದ ಸಂಸ್ಕೃತಿಯನ್ನು ಸಂರಕ್ಷಿಸಿ ಭವಿಷ್ಯತ್ಕಾಲಕ್ಕೆ ಕೊಂಡೊಯ್ಯುವ ಗ್ರಂಥಾಲಯಗಳು ಜ್ಞಾನ ಸಂರಕ್ಷಣೆಯ ಕೇಂದ್ರವಾಗಿವೆ. ಹೀಗಾಗಿ ಗ್ರಂಥಾಲಯಗಳು ಮಾನವನ ಜೀವನಕ್ಕೆ ದಾರಿದೀಪಗಳಾಗಿವೆ ಮತ್ತು ಅವನ ಅಭಿವೃದ್ಧಿಗೆ ಸದಾ ಕಾಲ ಶ್ರಮಿಸುತ್ತಾ ಬಂದಿವೆ.

ಡಾ. ಎಸ್.ಆರ್. ರಂಗನಾಥರವರು ನಿರೂಪಿಸಲ್ಪಟ್ಟ ಗ್ರಂಥಾಲಯದ ಪಂಚ ಸೂತ್ರಗಳು ಗ್ರಂಥಾಲಯದ ಜ್ಞಾನಸಾಮಗ್ರಿಗಳ ಸಂಗ್ರಹ, ಸಂರಕ್ಷಣೆ ದೃಷ್ಟಿಯಿಂದ ತುಂಬಾ ಮುಖ್ಯವಾಗಿವೆ.

೧. ಉಪಯೋಗಕ್ಕಾಗಿ ಪುಸ್ತಕ

Books are for use

೨. ಎಲ್ಲರಿಗಾಗಿ ಪುಸ್ತಕ ಅಥವಾ ಪ್ರತಿಯೊಬ್ಬ ಓದುಗನಿಗೆ ಅವನದೇ ಆದ ಪುಸ್ತಕ.

Books are for all Every Reader his/her Books

೩. ಪ್ರತಿಯೊಂದು ಪುಸ್ತಕಕ್ಕೆ ಅದರ ಓದುಗ

Every Books its Reader

೪. ಓದುಗನ ಸಮಯ ಉಳಿಸಿ

Save the Time of the Reader

೫. ಗ್ರಂಥಾಲಯ ಬೆಳೆಯುತ್ತಿರುವ ಸಂಸ್ಥೆ

Library is a Growing organistion

ಗ್ರಂಥಾಲಯದಲ್ಲಿ ಗ್ರಂಥಗಳನ್ನು ಸಂಗ್ರಹಿಸುವಲ್ಲಿ ಈ ಕೆಳಗಿನ ಕ್ರಮಗಳನ್ನು ಕೈಗೊಳ್ಳಬೇಕು.

ಸಂಗ್ರಹಣಾ ವಿಧಾನ (Acquisition Library)

೧. ಪ್ರಸಿದ್ಧ ಪುಸ್ತಕಗಳ ಮಳಿಗೆಯಿಂದ ಪುಸ್ತಕಗಳನ್ನು ಖರೀದಿಸಿ ಸಂಗ್ರಹಿಸುವುದು.

೨. ಸಾರ್ವಜನಿಕರಿಂದ ದೇಣಿಗೆ ಪಡೆಯುವುದು.

೩. ವಿದ್ವಾಂಸರಿಂದ ಹಾಗೂ ಸಾಹಿತಿಗಳಿಂದ ಪುಸ್ತಕಗಳ ಕಾಣಿಕೆ ಪಡೆಯಬಹುದು.

೪. ಅಂತರ ಗ್ರಂಥಾಲಯಗಳಲ್ಲಿ ಪುಸ್ತಕಗಳನ್ನು ವಿನಿಮಯ ಮಾಡಿಕೊಂಡು ಜ್ಞಾನವನ್ನು (ಮಾಹಿತಿ) ಸಂಗ್ರಹಿಸುವುದು.

೫. ಜ್ಞಾನದ ಸಾಗಾಣಿಕೆ, ಜ್ಞಾನದ ರಕ್ಷಣೆ, ಜ್ಞಾನದ ಅಭಿವೃದ್ಧಿ ಗ್ರಂಥಾಲಯದ ಪುಸ್ತಕಗಳ ಸಂಗ್ರಹನ ವಿಧಾನದ ಪ್ರಮುಖ ಕಾರ್ಯವಾಗಿದೆ.

೬. ಗ್ರಂಥಗಳ ಆಯ್ಕೆ ಗ್ರಂಥಗಳ ಸಂಗ್ರಹಣ, ಓದುಗರಿಗೆ ಗ್ರಂಥಗಳನ್ನು ಓದುಗಿಸುವುದು, ವರ್ಗೀಕರಣ ಮತ್ತು ಸೂಚಿಕರಣ ಮೂಲಕ ಗ್ರಂಥಗಳ ಸಂಸ್ಕರಣೆ ಮಾಡುವುದು.

೭. ಗ್ರಂಥಾಲಯದ ಅವಶ್ಯಕತೆಗಳನ್ನು ಪೂರೈಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೮. ಗ್ರಂಥಗಳ ಆಯ್ಕೆಗೆ ಸಂಬಂಧಿಸಿದಂತೆ ಆಯಾಯ ವಿಷಯ ತಜ್ಞರ ಮಾಹಿತಿ ಪಡೆಯುವುದು.

೯. ಗ್ರಂಥಗಳ ಮೂಲ ಪ್ರತಿಗಳು ಮುದ್ರಿತ ರೂಪದಲ್ಲಿ ದೊರೆಯದಿದ್ದಾಗ ಅವುಗಳ ನಕಲನ್ನು ತಯಾರಿಸಿಡಬೇಕು.

೧೦. ಗ್ರಂಥಗಳನ್ನು ಓದಿ ಅವುಗಳ ಗುಣಮಟ್ಟವನ್ನು ನಿರ್ಧರಿಸಿ ಅವುಗಳನ್ನು ಸಂಗ್ರಹಿಸಲು ಮುಂದಾಗಬೇಕು.

೧೧. ಸಂಗ್ರಹಣ ಕಾರ್ಯಕ್ಕೆ ಅನುಕೂಲವಾಗುವಂತೆ ಗ್ರಂಥಗಳ ವಾಗ್ಮೇಯ ದರ್ಶಕವನ್ನು ಸಂರಕ್ಷಿಸಿಡಬೇಕು.

೧೨. ಗ್ರಂಥಗಳನ್ನು, ನಿಯತಕಾಲಿಕೆಗಳನ್ನು ತರಿಸುವಾಗ ಪತ್ರ ವ್ಯವಹಾರವನ್ನು ನಡೆಸುವ ಜ್ಞಾನವನ್ನು ಹೊಂದಿರಬೇಕು.

### ೧೦.೧. ಗ್ರಂಥಗಳ ಆಯ್ಕೆ (Selection of Books)

೧. ಗ್ರಂಥಾಲಯದ ಪಂಚಸೂತ್ರಗಳ ನೆಲೆಯಲ್ಲಿ ಗ್ರಂಥಗಳ ಆಯ್ಕೆ

೨. ಓದುಗರಲ್ಲಿ ಜೀವನದ ಮೌಲ್ಯಗಳನ್ನು ಬೆಳೆಸುವಂತಹ ಗ್ರಂಥಗಳನ್ನು ಗ್ರಂಥಾಲಯಕ್ಕೆ ತರಿಸಬೇಕು.

೩. ಗ್ರಂಥಾಲಯಕ್ಕಾಗಿ ಗ್ರಂಥಗಳನ್ನು ವಿವೇಕಯುತವಾಗಿ ಆಯ್ಕೆ ಮಾಡಬೇಕಾಗುತ್ತದೆ.

೪. ಕಡಿಮೆ ವೆಚ್ಚದಲ್ಲಿ ಹೆಚ್ಚು ಓದುಗರಿಗೆ ಉತ್ತಮ ಗ್ರಂಥಗಳನ್ನು ಖರೀದಿಸುವ ಪ್ರಯತ್ನ ಮಾಡಬೇಕು.

೫. ಗ್ರಂಥಗಳ ಆಯ್ಕೆಮಾಡಲು ಗ್ರಂಥಗಳ ಆಯ್ಕೆ ಸಮಿತಿ ನಿರ್ಮಿಸಿಕೊಳ್ಳಬೇಕು.

ಅಮೇರಿಕೆಯ ಸಾಂಸ್ಕೃತಿಕ ಕೇಂದ್ರವೆನಿಸಿಕೊಂಡಿರುವ ಇಡೀ ವಿಶ್ವದಲ್ಲಿಯೇ ಅತಿ ದೊಡ್ಡ ಗ್ರಂಥಾಲಯವಾದ ಅಮೇರಿಕೆಯ ರಾಷ್ಟ್ರೀಯ ಗ್ರಂಥಾಲಯ (Library of Congress) ಕ್ರಿ.ಶ. ೧೮೦೦ ರಲ್ಲಿ ನಿರ್ಮಾಣವಾಯಿತು. ಈ ಗ್ರಂಥಾಲಯದಲ್ಲಿ ೧೦ ಕೋಟಿಗೂ ಮಿಕ್ಕ ಗ್ರಂಥಗಳೂ, ನಿಯತಕಾಲಿಕೆಗಳು, ಗ್ರಾಮೋಪೋನ್ ರಿಕಾರ್ಡುಗಳು, ನಕಾಶೆಗಳು, ಕೈಬರಹದ ಪ್ರತಿಗಳು, ಅಂಧರ ಸಲುವಾಗಿ ಬ್ರೇಲ್ ಹಾಗೂ ಧ್ವನಿರೂಪದ ಗ್ರಂಥಗಳು ಇವೆ. ಇಲ್ಲಿ ೪೦೦೦ಕ್ಕೂ ಹೆಚ್ಚು ಜನರು ಜ್ಞಾನವನ್ನು ಮಾಹಿತಿಯನ್ನು ಮನರಂಜನೆಯನ್ನು

ಹೆಚ್ಚಿನ ವಿಷಯ ಪಡೆಯಲು ಸಂಗ್ರಹಕ್ಕಾಗಿ ಬರುತ್ತಾರೆ. ಪ್ರತಿವಾರ ೧೦,೦೦೦ಕ್ಕೂ ಹೆಚ್ಚು ಗ್ರಂಥಗಳನ್ನು ತರಿಸಿಕೊಂಡು ಅವುಗಳನ್ನು ವರ್ಗೀಕರಿಸಿ, ಸೂಚೀಕರಿಸಿ ಓದುಗರ ಉಪಯೋಗಕ್ಕಾಗಿ ವ್ಯವಸ್ಥೆಗೊಳಿಸಲಾಗುತ್ತದೆ. ಜಗತ್ತಿನ ಮೂಲೆ ಮೂಲೆಯಿಂದ ಗ್ರಂಥಗಳನ್ನು ತರಿಸಲಾಗುತ್ತದೆ. ಈ ಗ್ರಂಥಾಲಯದಲ್ಲಿ ಅತ್ಯಮೂಲ್ಯವಾದ ೪ ಲಕ್ಷಕ್ಕೂ ಹೆಚ್ಚು ಗ್ರಂಥಗಳಿವೆ. ೧೫೦೧ಕ್ಕೆ ಮುಂಚಿತವಾಗಿ ಅಚ್ಚಾದ ೫೬೦೦ ಗ್ರಂಥಗಳನ್ನು ಈ ಗ್ರಂಥಾಲಯ ಸಂಗ್ರಹಿಸಲಾಗಿದೆ. ಪ್ರಥಮವಾಗಿ ಅಚ್ಚಾದ (೧೪೫೬) ಗುಟ್ಟೆನ್ ಬರ್ಗ ಬೈಬಲ್ಲೂ ಇಲ್ಲಿದೆ.[೩]

ಅಮೇರಿಕೆಯ ಜನ ಕಾಂಗ್ರೇಸ್ ಗ್ರಂಥಾಲಯವನ್ನು "ಮೈಲುಗಟ್ಟಲಿನ ಜ್ಞಾನಭಂಡಾರ" (Miles of knowledge) ಎಂದು ಕರೆದುಕೊಂಡಿದ್ದಾರೆ. ಈ ಗ್ರಂಥಾಲಯದಲ್ಲಿ ಅನೇಕ ಕನ್ನಡ ಗ್ರಂಥಗಳು ಇವೆ. ಅಮೇರಿಕೆಯಲ್ಲಿ ಹಳ್ಳಿಗಳಿಗೆ, ಆಸ್ಪತ್ರೆಗಳಿಗೆ ಪುಸ್ತಕಗಳನ್ನೊದಗಿಸಲು ಸಂಚಾರಿ ಗ್ರಂಥಾಲಯಗಳು ಅಲ್ಲದೇ ಸೆರೆಮನೆಯ ಕೈದಿಗಳಿಗೆ, ಸೈನಿಕರಿಗೆ, ನಾವಿಕರಿಗೆ ವಿಮಾನ ಪಡೆಯಲ್ಲಿದ್ದವರಿಗೆ ಗ್ರಂಥಗಳನ್ನೊದಗಿಸುವ ವ್ಯವಸ್ಥೆಯಿದೆ.

ಸಿಂಧೂ ನದಿಯ ದಡದ ಸಂಸ್ಕೃತಿ ಐದು ಸಾವಿರ ವರ್ಷಗಿಂತಲೂ ಮಿಕ್ಕಿ ಪುರಾತನವಾದುದು. ಮೋಹೆಂಜೊದಾರೋ, ಹರಪ್ಪಾಗಳಲ್ಲಿಯ ಐತಿಹಾಸಿಕ ಅವಶೇಷಗಳು ೫ ಸಾವಿರ ವರ್ಷಗಳ ಹಿಂದೆ ಅಲ್ಲಿ ಬಾಳಿ ಬದುಕಿದ ಜನರು ಅತ್ಯಂತ ಸುಸಂಸ್ಕೃತರಾಗಿದ್ದರು. ಅಲ್ಲಿ ದೊರೆತ ಬಿಲ್ಲೆಗಳ ಮೇಲಿನ ಬರಹವನ್ನು ಓದುವ ಸಾಹಸ ನಡೆದಿದ್ದು ಅದು ಸಾಧಿಸಿದ ನಂತರ ಭಾರತವೇ ಬರಹದ ತವರೆಂದು ಹೇಳಬಹುದು. ಇಲ್ಲಿಂದಲೆ ಜಗತ್ತಿನ ಎಲ್ಲೆಡೆಗೆ ಹರಡಿದೆ ಎಂದು ಸಂಶೋಧಕರು ಹೇಳುತ್ತಾರೆ. ವೇದಗಳ ಕಾಲ ಕ್ರಿ.ಪೂ. ೨೫೦೦ – ೧೫೦೦ ಎಂದು ಸಂಶೋಧಕರು ಹೇಳುತ್ತಾರೆ. ವೇದಗಳನ್ನು ರಚಿಸಿದ ಜನತೆ ಬರಹವನ್ನು ಅರಿತಿರುವ ಸಾಧ್ಯತೆಯಿದೆ.

ಕದಂಬ, ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ ರಾಜರು ಅವರ ಸಾಮಂತರು ಸಾಮಾನ್ಯವಾಗಿ ಸಾಹಿತ್ಯಪ್ರಿಯರೂ ಗ್ರಂಥಪ್ರಿಯರೂ ಆಗಿದ್ದರು. ಹಾಗಾಗಿಯೇ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವಲ್ಲಿ ಅವುಗಳ ಜೊತೆಗೆ ಗ್ರಂಥಾಲಯಗಳನ್ನು ಸ್ಥಾಪಿಸುವಲ್ಲಿ ಬಹಳ ಅಸ್ಥೆ ವಹಿಸುತ್ತಿದ್ದರು. ತಾಳಗುಂದ ಸಾಲೋಟಗಿ, ನಾಗಾವಿ, ಬಳ್ಳಿಗಾವಿ, ಕುಪ್ಪಟೂರು, ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿ ವಿಶ್ವವಿದ್ಯಾಲಯಗಳಿದ್ದವೆಂದು ಶಾಸನಗಳಿಂದ ತಿಳಿಯುತ್ತದೆ.

ದಾನಗಳಲ್ಲಿ ಶ್ರೇಷ್ಠವಾದುದು ಜ್ಞಾನದಾನ; ಅದರ ಮಹತ್ವದ ಅಂಗಶಾಸ್ತ್ರದಾನ ಕರ್ನಾಟಕದಲ್ಲಿ ಶಾಸ್ತ್ರ ದಾನದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಸಾವಿರ ಹಸ್ತಪ್ರತಿಗಳನ್ನು ಮಾಡಿಸಿ ದಾನಮಾಡಿದಳು. ತುಘಲಕ ವಂಶದ ಸಂಸ್ಥಾಪಕ ಫಿರೋಜಶಹಾನು (ಕ್ರಿ.ಶ. ೧೩೩೫) ಭಾರತೀಯ ಸಾಹಿತ್ಯ ಶಿಲ್ಪಗಳಲ್ಲಿ ಆಸಕ್ತಿಯುಳ್ಳ ದೊರೆಯಾಗಿದ್ದಾನೆ. ನಾಗರಕೋಟ ನಗರದ ಮೇಲೆ ದಾಳಿಯಿಟ್ಟಾಗ ಅಲ್ಲಿಯ ಜ್ವಾಲಾಮುಖಿ ಗುಡಿಯಲ್ಲಿ ೧೩೦೦ ಸಾವಿರಕ್ಕೂ ಹೆಚ್ಚು ಹಸ್ತಪ್ರತಿಗಳ ಗ್ರಂಥವಿರುವುದನ್ನು ತಿಳಿದು ಅವುಗಳನ್ನು ತನ್ನ ವಶಕ್ಕೆ ಪಡೆದು ಸಂರಕ್ಷಿಸಿದಲ್ಲದೇ ಹಲವು ಹಸ್ತಪ್ರತಿಗಳನ್ನು ಪರ್ಶಿಯನ್ ಭಾಷೆಗೆ

ಭಾಷಾಂತರಿಸಿದ. ಬಹುಮನಿ ರಾಜ್ಯದ ಬಾದಶಹನಾದ ಮಹಮ್ಮದಶಹನ ಮಂತ್ರಿ ಮಹಮ್ಮದ ಗವಾನ್ ಬೀದರನಲ್ಲಿ ಒಂದು ಕಾಲೇಜು ಸ್ಥಾಪಿಸಿ ಅಲ್ಲಿ ಒಳ್ಳೆಯ ಗ್ರಂಥಾಲಯವನ್ನು ನಿರ್ಮಾಣಮಾಡಿದನು.

ವಿಜಾಪುರದ ಆದಿಲ್‌ಶಹಾನು ಅರಮನೆಯಲ್ಲಿನ ಗ್ರಂಥಾಲಯವನ್ನು ಸ್ಥಾಪಿಸಿದನು. ಅಲಿ ಆದಿಲ್‌ಶಹಾನು ಗ್ರಂಥಾಲಯದ ಉಸ್ತುವಾರಿ ನೋಡಿಕೊಳ್ಳಲು ಅಲಂಕಾರಾಕ್ಷರ ಲಿಪಿಕಾರ ರನ್ನೊಳಗೊಂಡ ೬೦ ಜನ ಸಿಬ್ಬಂದಿಯನ್ನು ನೇಮಿಸಿದ್ದನು. ಮೊಗಲರ ಆಳ್ವಿಕೆ ಕಾಲಕ್ಕೆ ನೆಮ್ಮದಿಯ ಸ್ಥಿರತೆಯ, ಶಾಂತಿಯನ್ನು ತಂದುಕೊಟ್ಟಿತು. ಈ ಅರಸನು, ಗ್ರಂಥಾಲಯಗಳನ್ನು ಕಟ್ಟುವಲ್ಲಿ ಗ್ರಂಥಗಳನ್ನು ಬರೆಸುವಲ್ಲಿ ತುಂಬಾ ಆಸಕ್ತಿಯನ್ನು ಹೊಂದಿದ್ದರು. ಬಾಬರನು ಅನೇಕ ಶಾಲಾಕಾಲೇಜುಗಳನ್ನು ಸ್ಥಾಪಿಸಿ ಅವುಗಳಲ್ಲಿ ಗ್ರಂಥಾಲಯ ಸೇವೆಯನ್ನು ಕಾರ್ಯಗೊಳಿಸಿದನು. ಹುಮಾಯೂನ ಬಾದಶಹನು ತನ್ನ ಗ್ರಂಥಾಲಯದಿಂದ ಅನೇಕ ಗ್ರಂಥಗಳನ್ನು ಯುದ್ಧರಂಗಗಳಿಗೆ ಹೋಗುವಾಗ ತನ್ನ ಹತ್ತಿರ ಒಯ್ಯುತ್ತಿದ್ದರು. ಅಕ್ಬರ ರಾಜನ ಆಳ್ವಿಕೆಯಲ್ಲಿ ಸಾಹಿತಿಗಳಿಗೆ ಪ್ರೋತ್ಸಾಹ ನೀಡುವುದರ ಜೊತೆಗೆ ಅರಮನೆಯ ಗ್ರಂಥಾಲಯವು ಬಹುಮುಖವಾಗಿ ಬೆಳೆಯಿತು. ಗ್ರಂಥಾಲಯದ ಭಾಗವಾಗಿ ಅಕ್ಬರನು ಭಾಷಾಂತರ ವಿಭಾಗವೊಂದನ್ನು ತೆರೆದನು. ಇಲ್ಲಿ ಸಂಸ್ಕೃತ ಹಾಗೂ ಪರ್ಶಿಯನ್ ಗ್ರಂಥಗಳನ್ನು ಭಾಷಾಂತರ ಪ್ರತಿಮಾಡಲಾಯಿತು. ಅದರಲ್ಲಿ ಬದೌನಿಯ ರಾಮಾಯಣ, ಅರ್ಥವೇದ, ಹಾಗೂ ಮಹಾಭಾರತಗಳ ಭಾಷಾಂತರಗೊಂಡವು. ಆಗ್ರಾದ ಕಿಲ್ಲೆಯಲ್ಲಿ ೭ ಲಕ್ಷ ಪೌಂಡ ಬೆಲೆಯುಳ್ಳ ೨೪ ಸಾವಿರ ಗ್ರಂಥಗಳ ಗ್ರಂಥಾಲಯಲಯ ಸ್ಥಾಪಿಸಿದನು. ಈ ಗ್ರಂಥಾಲಯದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಕವಿತೆ, ಆರ್ಯಾವೇದ, ಜೋತಿಷ್ಯ, ಸಂಗೀತ, ತತ್ವಜ್ಞಾನ, ಖಗೋಳಶಾಸ್ತ್ರ ನೆಲೆಯಲ್ಲಿ ವರ್ಗೀಕರಿಸಲಾಗಿತ್ತು.

ವಿಲಾಸಪ್ರಿಯನೆಂದೇ ಹೆಸರಾದ ಜಹಾಂಗೀರನು ಗ್ರಂಥಾಲಯ ಮತ್ತು ಗ್ರಂಥಗಳ ಮೇಲೆ ತುಂಬಾ ಆಸಕ್ತಿಯನ್ನು ಹೊಂದಿದ್ದನು. ಗ್ರಂಥಾಲಯವನ್ನು ಸುಸ್ಥಿತಿಯಲ್ಲಿ ಇಡಲು ಹೆಚ್ಚು ಸಿಬ್ಬಂದಿಯನ್ನು ನೇಮಿಸಿದನು. "ಯುಸುಫ ವ ಝುಲೇಖಾ" ಎಂಬ ಗ್ರಂಥದ ಒಂದು ಪ್ರತಿಗೆ ಅವನು ಒಂದು ಸಾವಿರ ಮೊರೆಹನ್ನು ಕೊಟ್ಟನಂತೆ ಹಾಗೆಯೇ ಅವನ ಪ್ರೇಯಸಿ ನೂರಜಹಾನಳು ಕೂಡ ಗ್ರಂಥಪ್ರಿಯಳಾಗಿದ್ದು ಮಿರ್ಝಾ ಕಾಮರಾನನು ಬರೆದ "ದಿವಾನ" ಎಂಬ ಗ್ರಂಥದ ಒಂದು ಪ್ರತಿಯನ್ನು ಅವಳು ೩ ಬಂಗಾರದ ಮೊಹರುಗಳಿಗೆ ಕೊಟ್ಟಳಂತೆ. ಈ ಗ್ರಂಥ ಇಂದು ಪಾಟ್ನಾದ ಖುದಾಬಕ್ಷ ಗ್ರಂಥಾಲಯದಲ್ಲಿದೆ.

ಶಹಾಜಹಾನನ ಹಸ್ತಾಕ್ಷರಗಳುಳ್ಳ ಅನೇಕ ಗ್ರಂಥಗಳು ಇಂದಿಗೂ ದೇಶದಲ್ಲಿಯ ಅನೇಕ ಗ್ರಂಥಾಲಯಗಳಲ್ಲಿ ಸಿಗುತ್ತವೆ. ಶಹಜಹಾನನ ಹಿರಿಯ ಮಗ ದಾರಾ ಅವನ ಮಾರ್ಗದರ್ಶನದಲ್ಲಿ ಸಂಸ್ಕೃತದಿಂದ ಪರ್ಶಿಯನ್ ಭಾಷೆಗೆ ರೂಪಾಂತರಗೊಂಡ ಅನೇಕ ಗ್ರಂಥಗಳಲ್ಲಿ ಉಪನಿಷತ್ತುಗಳ ಮತ್ತು ಭಗವದ್ಗೀತೆಯ ಭಾಷಾಂತರಗಳು ಮಹತ್ವದವು. ಆದರೆ ಮೊಗಲರ ಕ್ರೂರದೊರೆಯೆಂದು ಖ್ಯಾತನಾದ ಔರಂಗಜೇಬನು ಗ್ರಂಥಗಳನ್ನು ಸಂರಕ್ಷಿಸಲು ಸಹಕಾರಿಯಾದ ವಾತಾವರಣ ನಿರ್ಮಾಣ ಮಾಡಿದನು. ಆದರೆ ಮೊಗಲ ಅರಸರ ಅವನತಿಯೊಂದಿಗೆ ಅವರು ಕಟ್ಟಿಸಿದ ಗ್ರಂಥಾಲಯಗಳು ಹಾಗೂ ಗ್ರಂಥಾಲಯ ಸಂಪತ್ತು ನಿರ್ನಾಮವಾದವು. ಇದಕ್ಕೆ ಮೂಲ ಕಾರಣ ೧೭೩೯ರಲ್ಲಿ ನಾದಿರಶಹನು ದಿಲ್ಲಿಯ ಮೇಲೆ ದಾಳಿಮಾಡಿ ಅಲ್ಲಿಯ ಸಂಪತ್ತಿನ

ಜೊತೆಗೆ ಗ್ರಂಥಸಂಪತ್ತನ್ನು ಲೂಟಿಮಾಡಿಕೊಂಡು ತನ್ನ ದೇಶಕ್ಕೆ ಕೊಂಡೊಯ್ದನೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ದಕ್ಷಿಣ ಪ್ರದೇಶದಲ್ಲಿ ಟಿಪ್ಪುಸುಲ್ತಾನನೂ ಒಂದು ಒಳ್ಳೆಯ ಗ್ರಂಥ ಸಂಗ್ರಹವನ್ನು ಕಟ್ಟಿದನು. ೧೭೯೯ರಲ್ಲಿ ಶ್ರೀರಂಗಪಟ್ಟಣದ ಪತನದ ನಂತರ ಅವನ ಈ ಗ್ರಂಥಸಂಗ್ರಹವು ಮಾರ್ಕ್ವಿಸ್ ವೆಲ್ಲೆಸ್ಲಿಯ ಆಜ್ಞೆಯ ಮೇರೆಗೆ ೧೮೦೮ ರಲ್ಲಿ ಕಲ್ಕತ್ತೆಯಲ್ಲಿ ಸ್ಥಾಪಿತವಾದ ಕಾಲೇಜಿಗೆ ಒಯ್ಯಲ್ಪಟ್ಟಿತು. ಇದರಲ್ಲಿಯ ಅನೇಕ ಬೆಲೆಯುಳ್ಳ ಹಸ್ತಪ್ರತಿಗಳನ್ನು ಆಕ್ಸ್‌ಫರ್ಡ್ ಹಾಗೂ ಕೇಂಬ್ರಿಜ್ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಕಳಿಸಲಾಯಿತು. ೨೦೦೦ ಸಂಖ್ಯೆಯುಳ್ಳ ಈ ಸಂಗ್ರಹ ಹೆಚ್ಚಾಗಿ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ್ದು. ಮರಾಠರ ಅಭ್ಯುದಯದ ಕಾಲದಲ್ಲಿ ಗ್ರಂಥಾಲಯಗಳು ಮತ್ತೆ ತಲೆದೋರಿದವು. ಇಷ್ಟರಲ್ಲಿ ಮುದ್ರಣ ಕಲೆಯೂ ಭಾರತದಲ್ಲಿ ಕಾಲಿಟ್ಟಿತು. ಹೀಗಾಗಿ ಗ್ರಂಥಗಳ ರಚನೆಗೆ ಹೆಚ್ಚು ಚಾಲನೆ ದೊರೆತರೂ ದೇಶದಲ್ಲಿನ ಅಸ್ಥಿರತೆ, ಅಶಾಂತ ವಾತಾವರಣದಿಂದ ಗ್ರಂಥಗಳ ಅಭಿವೃದ್ಧಿಗೆ ಅಷ್ಟು ಪ್ರಮಾಣದಲ್ಲಿ ಪ್ರೋತ್ಸಾಹ ಸಿಗಲಿಲ್ಲ ಎಂದು ಹೇಳಬಹುದು.

ಭಾರತದಲ್ಲಿಯೇ ಹಸ್ತಲಿಖಿತ ಗ್ರಂಥಗಳ ಸಂಗ್ರಹಕ್ಕಾಗಿ ಖ್ಯಾತಿವೆತ್ತ ತಂಜಾವೂರಿನ ಸರಸ್ವತೀ ಮಹಲ್ ಗ್ರಂಥಾಲಯ ಮತ್ತು ಪಾಟ್ನಾದ ಖುದ್ದಾಬಕ್ಷ ಗ್ರಂಥಾಲಯ ತಂಜಾವೂರಿನಲ್ಲಿರುವ ಮಹಾರಾಜಾ ಸರ್ಫೋಜಿಯವರ ಗ್ರಂಥಾಲಯ ಉಗಮವಾದದ್ದು. ೧೬ನೇ ಶತಮಾನದಲ್ಲಿ ಆ ಕಾಲದಲ್ಲಿ ಇಲ್ಲಿ ರಾಜ್ಯವಾಳುತ್ತಿದ್ದ ತೆಲುಗು ನಾಯಕರು ಅನೇಕ ತೆಲುಗು ಹಸ್ತಲಿಖಿತ ಗ್ರಂಥಗಳನ್ನು ಸಂಗ್ರಹಿಸಿದ್ದರು. ೧೮ನೇ ಶತಮಾನದಲ್ಲಿ ಈ ಭಾಗವನ್ನು ಗೆದ್ದುಕೊಂಡು ಆಳತೊಡಗಿದ ಮರಾಠರು ಕೂಡಾ ಅನೇಕ ಸಂಸ್ಕೃತ ಹಸ್ತಪ್ರತಿಗಳನ್ನು ಸಂಗ್ರಹಿಸಿ ಇಲ್ಲಿಯ ಗ್ರಂಥಸಂಗ್ರಹವನ್ನು ವೃದ್ಧಿಪಡಿಸಿದರು. ಆದರೆ ಸಂಗ್ರಹ ಬಹುಮಟ್ಟಿಗೆ ವೃದ್ಧಿಗೊಂಡದ್ದು ೧೮೨೦-೩೦ರ ಅವಧಿಯಲ್ಲಿ ಈ ಸಮಯದಲ್ಲಿ ಸರ್ಫೋಜಿಯವರು ಬನಾರಸಕ್ಕೆ ಭೇಟಿ ಇತ್ತು. ಅನೇಕ ಸಂಸ್ಕೃತ ಗ್ರಂಥಗಳನ್ನು ಕೊಂಡುತಂದು ಈ ಸಂಗ್ರಹಕ್ಕೆ ಸೇರಿಸಿದರು. ಇಲ್ಲಿ ೫೦ ಸಾವಿರಕ್ಕೂ ಹೆಚ್ಚು ಅಮೂಲ್ಯವಾದ ತಾಡೋಲೆಯ ಹಸ್ತಪ್ರತಿಗಳಿವೆ. ಅಲ್ಲದೇ ४೫ ಸಾವಿರ ಮುದ್ರಿತ ಗ್ರಂಥಗಳಿವೆ. ೧೮೭೩ರಲ್ಲಿ ಈ ಸಂಗ್ರಹದ ಗ್ರಂಥಾಲಯದ ಗ್ರಂಥಗಳ ಸೂಚಿಯನ್ನು ಡಾ. ಬರ್ನೆಲ್ಲರು ಕೈಗೊಂಡರು. ३೫ ಕ್ಕೂ ಹೆಚ್ಚು ವಿವರಣಾತ್ಮಕ ಸೂಚಿಗಳು ಪ್ರಕಟಗೊಂಡಿವೆ.

ಖುದಾಬಕ್ಷ ಮನೆತನದಿಂದ ೧೯ನೇ ಶತಮಾನದ ಪ್ರಾರಂಭದಲ್ಲಿ ಸಂಗ್ರಹಿಸಲ್ಪಟ್ಟ ಈ ಅಮೂಲ್ಯವಾದ ಹಸ್ತಪ್ರತಿಗಳು ಮತ್ತು ಮುದ್ರಿತ ಗ್ರಂಥಗಳ ಸಂಗ್ರಹ ೧೮೯೧ ರಲ್ಲಿ ೮೦ ಸಾವಿರ ರೂಪಾಯಿ ವೆಚ್ಚದಲ್ಲಿ ಭವ್ಯ ಭವನದಲ್ಲಿಡಲ್ಪಟ್ಟು, ಖಾನ ಬಹಾದ್ದೂರ ಖುದಾಬಕ್ಷರಿಂದ ಸಾರ್ವಜನಿಕರ ಉಪಯೋಗಕ್ಕಾಗಿ ತೆರೆದಿಡಲ್ಪಟ್ಟಿತು. ಮೊಗಲರ ಅವನತಿಯ ನಂತರ ಅವರ ಅತ್ಯದ್ಭುತವಾದ ಅರಮನೆಯ ಗ್ರಂಥಾಲಯವನ್ನು ದೇಶದಲ್ಲಿಯ ಅನೇಕ ಮಾಂಡಲಿಕರು ಹರಿದು ಹಂಚಿಕೊಂಡು ಬಿಟ್ಟಿದ್ದರು. ಇನ್ನು ಕೆಲವನ್ನು ಇಂಗ್ಲಿಷರು ಕಡಿಮೆ ಬೆಲೆಗೆ ಕೊಂಡು ಬ್ರಿಟನ್ನಿನ ಗ್ರಂಥಾಲಯಗಳಿಗೆ ಕಳುಹಿಸಿಬಿಟ್ಟಿದ್ದರು. ಸಾಹಿತ್ಯ ಸಂಸ್ಕೃತಿಪ್ರಿಯರೂ ಸ್ವತಃ ಶ್ರೇಷ್ಠ ವಿದ್ವಾಂಸರೂ ಆದ ಖುದಾಬಕ್ಷರು ಹಳೆಯ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ವಿಶೇಷ ಆಸಕ್ತಿ

ವಹಿಸಿದ್ದರು. ಹಳೆಯ ಹಸ್ತಪ್ರತಿಗಳನ್ನು ಮಾರಬಂದವರಿಗೆ ಅವರ ಗಾಡಿ ಹಾಸಲಿನ ಎರಡುಪಟ್ಟು ಹಣ ನೀಡಿ ಅವರು ತಂದ ಹಸ್ತಪ್ರತಿಗಳನ್ನು ಯೋಗ್ಯ ಬೆಲೆಗೆ ಕೊಂಡುಕೊಳ್ಳುತ್ತಿದ್ದರು. ಅಲ್ಲದೇ ಇಂಥ ಅಮೂಲ್ಯ ಗ್ರಂಥ ಸಂಗ್ರಹಗಳಿರುವ ಸ್ಥಳಗಳನ್ನು ಕಂಡು ಹಿಡಿಯಲು ಕುಶಲನೆಂದೆನಿಸಿಕೊಂಡ ಮಹಮ್ಮದ ಮಕ್ಕಿ ಎಂಬುವನಿಗೆ ಪ್ರತಿ ತಿಂಗಳು ೫೦ ರೂಪಾಯಿ ವೇತನ ಕೊಟ್ಟ ಪುರಾತನ ಗ್ರಂಥಗಳ ಹಾಗೂ ಹಸ್ತಪ್ರತಿಗಳ ಶೋಧನೆ, ಶೇಖರಣೆಯ ಕಾರ್ಯವನ್ನು ಒಪ್ಪಿಕೊಟ್ಟರು, ಮತ್ತು ಇಂಥ ಅಮೂಲ್ಯ ಸಂಗ್ರಹಣ ರಭಸದಿಂದ ಪರದೇಶಕ್ಕೆ ಹೋಗುವುದನ್ನು ತಡೆಗಟ್ಟಿದರು.

೧,೫೦,೦೦ಕ್ಕೂ ಹೆಚ್ಚು ಗ್ರಂಥಗಳೂ ೩೦,೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳು ಇರುವ ಈ ಗ್ರಂಥಾಲಯ ೧೯೬೯ರಲ್ಲಿ ಭಾರತ ಸರಕಾರದ ಆಧೀನಕ್ಕೆ ಒಳಪಟ್ಟಿತ್ತು. ೧೫೫೬ ಸೆಪ್ಟಂಬರ ತಿಂಗಳಲ್ಲಿ ಪೋರ್ತುಗೀಜ ಪಾದ್ರಿಗಳು ರಾಚೋಲ ಎಂಬಲ್ಲಿಯ 'ಸೆಂಟಪಾಲ್ ಕಾಲೇಜಿ'ನಲ್ಲಿ ಒಂದು ಮುದ್ರಣಾಲಯವನ್ನು ಪ್ರಾರಂಭಿಸಿ ನವ್ಹಂಬರ ತಿಂಗಳೊಳಗಾಗಿ ಅವರು Conclusoes publicas ಎಂಬ ಗ್ರಂಥವನ್ನು ಮುದ್ರಿಸಿದರು. ಮೊಟ್ಟಮೊದಲು ಭಾರತೀಯ ಭಾಷೆಯಲ್ಲಿ ಅಚ್ಚಾದ ಗ್ರಂಥವೆಂದರೆ ಕ್ರಿಸ್ತ್ಯವಣ್ಣಕಣಂ ಈ ಗ್ರಂಥ ಇಂದಿಗೂ ನೋಡಲು ದೊರೆಯುತ್ತದೆ. ೧೫೭೮ ರಲ್ಲಿ ಪುನಮುದ್ರಣ ಹೊಂದಿದ್ದು ಒಂದು ಪ್ರತಿಮ ಫ್ರಾನ್ಸದ ರಾಷ್ಟ್ರೀಯ ಗ್ರಂಥಾಲಯ (Bibliotheque Nationale)ದಲ್ಲಿದೆ.

### ೧೦.೨. ರಾಷ್ಟ್ರೀಯ ಪುಸ್ತಕ ಮಂಡಳಿ (National Book Trust)

೧೯೫೭ರಲ್ಲಿ ಸ್ಥಾಪನೆಯಾದ ರಾಷ್ಟ್ರೀಯ ಪುಸ್ತಕ ಮಂಡಳಿ ಉತ್ತಮ ಗುಣಮಟ್ಟದ ಪುಸ್ತಕವನ್ನು ಪ್ರಕಟಿಸುವುದು ಮತ್ತು ಇನ್ನೂ ಅಂತಹ ಅನೇಕ ಪುಸ್ತಕಗಳು ಬೆಳಕಿಗೆ ಬರುವಂತೆ ಪ್ರೋತ್ಸಾಹಿಸುವುದು ಇದರ ಮೂಲ ಉದ್ದೇಶವಾಗಿದೆ. ಪ್ರಕಟವಾದ ಪುಸ್ತಕಗಳನ್ನು ಗ್ರಂಥಾಲಯಕ್ಕೆ ಸಾರ್ವಜನಿಕರಿಗೆ ಮತ್ತು ಸಾಮಾಜಿಕ ಸಂಘ ಸಂಸ್ಥೆಗಳಿಗೆ ಕಡಿಮೆ ಬೆಲೆಯಲ್ಲಿ ಗ್ರಂಥಗಳನ್ನು ಪೂರೈಸುವುದು ಅಷ್ಟೇ ಅಲ್ಲದೇ ೧೯೭೦ ರಿಂದ ವಿಶ್ವವಿದ್ಯಾಲಯದಲ್ಲಿ ಭಾರತೀಯ ಲೇಖಕರು ಇಂಗ್ಲಿಷ್‌ನಲ್ಲಿ ಪ್ರಕಟಿಸುವ ಗ್ರಂಥಗಳಿಗೆ ವಿಶೇಷ ಧನಸಹಾಯ ನೀಡುತ್ತಿದೆ.

### ೧೦.೨.೧. ರಾಷ್ಟ್ರೀಯ ಪುಸ್ತಕ ಮಂಡಳಿಯ ಉದ್ದೇಶಗಳು

೧. ಸಾರ್ವಜನಿಕರಲ್ಲಿ ಓದುವ ಹವ್ಯಾಸವನ್ನು ಹೆಚ್ಚಿಸುವದು.

೨. ಬೇರೆಬೇರೆ ವಿಷಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಪ್ರಕಾಶಕರಿಂದ ಗ್ರಂಥಗಳನ್ನು ಪಡೆಯುವುದು.

೩. ಪ್ರಕಾಶಕರಿಗೆ ಆರ್ಥಿಕ ಸಹಾಯ ಮಾಡಿಸುವುದು.

೪. ಗ್ರಂಥಾಲಯ ಶೈಕ್ಷಣಿಕ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕರಿಗೆ ಯೋಗ್ಯದರದಲ್ಲಿ ಪುಸ್ತಕಗಳು ಸಿಗುವಂತೆ ಮಾಡುವುದು.

೫. ಅಂತರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಪುಸ್ತಕಗಳ ಪ್ರದರ್ಶನವನ್ನು ಏರ್ಪಡಿಸುವುದು.

೬. ಪ್ರಕಾಶನ ಮತ್ತು ಗ್ರಂಥಾಲಯ ಸೇವೆಯ ಕುರಿತು ಸೆಮಿನಾರು, ಕಮ್ಮಟ ಮತ್ತು ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳುವುದು.

೭. ಒಂದು ಪ್ರಾದೇಶಿಕ ಭಾಷೆಯಲ್ಲಿರುವ ಉತ್ಕೃಷ್ಟ ಕೃತಿಗಳನ್ನು ಇತರ ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರ ಮಾಡುವುದು.

೮. ವಿಶೇಷವಾಗಿ ಭಾರತೀಯ ಲೇಖಕರಿಂದ ವಿಶ್ವವಿದ್ಯಾಲಯ ಮಟ್ಟದಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಕಟಿಸುವ ಪುಸ್ತಕಗಳಿಗೆ ಧನ ಸಹಾಯ ನೀಡುತ್ತದೆ.

ಯಾವುದೇ ಗ್ರಂಥಾಲಯವು ಸುವ್ಯವಸ್ಥೆಯಿಂದ ಕಾರ್ಯ ನಿರ್ವಹಿಸಲು ಈ ಪಂಚಸೂತ್ರಗಳ ಪಾಲನೆ ಅಗತ್ಯವಾಗಿವೆ. ವಿಶ್ವಸಂಸ್ಥೆ ೧೯೭೨ನೇ ವರ್ಷದಲ್ಲಿ ಅಂತರಾಷ್ಟ್ರೀಯ ಗ್ರಂಥಗಳ ವರ್ಷವೆಂದು ಘೋಷಿಸಿದರು. ಈ ಘೋಷಣೆ ಎಲ್ಲರಿಗೂ ಗ್ರಂಥಗಳು ಎಂಬುದನ್ನು ಸಾರಿ ಹೇಳುತ್ತದೆ. ಈ ಮಾತು ಗ್ರಂಥಪಾಲನ ದಕ್ಷತೆಯ ಮಾನದಂಡವಾಗಿದ್ದು ವ್ಯಕ್ತಿ ವ್ಯಕ್ತಿಗಳಲ್ಲಿಯ ಅಭಿರುಚಿ ಭಿನ್ನತೆಯನ್ನು ಮನಗಂಡ ಹೆಚ್ಚು ಜನ ಗ್ರಂಥಾಲಯಕ್ಕೆ ಬಂದು ಪ್ರತಿಯೊಂದು ಗ್ರಂಥವನ್ನು ಓದುವಂತ ವಾತಾವರಣ ನಿರ್ಮಾಣ ಮಾಡಿದಾಗ ಮಾತ್ರ ಗ್ರಂಥಗಳ ಜ್ಞಾನವನ್ನು ಸಹೃದಯರು ಆಸ್ವಾದಿಸಲು ಸಾಧ್ಯವಾಗುತ್ತದೆ. ಗ್ರಂಥಗಳು ಓದುಗರು ಮತ್ತು ಸಿಬ್ಬಂದಿ ನಡುವೆ ಸಮನ್ವಯತೆ ಏರ್ಪಟ್ಟಾಗ ಜ್ಞಾನ ಪ್ರಸಾರವಾಗುತ್ತದೆ. ಗ್ರಂಥಾಲಯದ ಮೂಲಕ ಜ್ಞಾನವನ್ನು ಸಂರಕ್ಷಿಸಿಡಲು ಈ ಕೆಳಗಿನ ಸೂತ್ರವನ್ನು ಗ್ರಂಥಪಾಲಕನಾದವನು ಪಾಲಿಸಬೇಕಾಗುತ್ತದೆ.

೧. ಡಾ. ಎಸ್.ಆರ್. ರಂಗನಾಥ ಹೇಳಿರುವ ಪಂಚಸೂತ್ರಗಳನ್ನು ಗ್ರಂಥಾಲಯದಲ್ಲಿ ಅಳವಡಿಸುವದು.

೨. ಗ್ರಂಥಪಾಲಕರು ಗ್ರಂಥಾಲಯದ ವಿಜ್ಞಾನದಲ್ಲಿ ಜ್ಞಾನವನ್ನು ಹೊಂದಿದ್ದು ಅದಕ್ಕೆ ತಕ್ಕ ಅನುಭವ ಮತ್ತು ತರಬೇತಿಯನ್ನು ಹೊಂದಿರಬೇಕು.

೩. ಗ್ರಂಥಾಲಯಕ್ಕೆ ಗ್ರಂಥಾಲಯದ ನೀತಿನಿಯಮಗಳನ್ನು ತಿಳಿದಿರಬೇಕು.

೪. ಗ್ರಂಥಾಲಯದ ಅರ್ಥ ಅದರ ಸ್ವರೂಪ, ಗುಣಲಕ್ಷಣ ಬಗ್ಗೆ ತಿಳಿವಳಿಕೆಯಿರಬೇಕಾಗುತ್ತದೆ.

೫. ಓದುಗರ ಸಂಖ್ಯೆ, ಅವರ ಅಭಿರುಚಿ, ಮನೋವ್ಯಕ್ತಿ ಮತ್ತು ಸಾಮರ್ಥ್ಯ ಅರಿವಿರಬೇಕಾಗುತ್ತದೆ.

೬. ಗ್ರಂಥಾಲಯದಲ್ಲಿರುವ ಗ್ರಂಥಗಳ ಮತ್ತು ದೃಕ್-ಶ್ರವಣ (ನಾನ್-ಬುಕ್) ಸಾಧನಗಳ ಬಗ್ಗೆ ತಿಳಿವು.

೭. ಗ್ರಂಥಾಲಯದ ಉಪಯೋಗ ಪರಿಣಾಮಕಾರಿಯಾಗುವಂತೆ ಮಾಡಲು ವರ್ಗೀಕರಣ (Classification) ಗ್ರಂಥಸೂಚಿ (Cataloguing) ಪದ್ಧತಿಗಳನ್ನು ಅಳವಡಿಸಬೇಕು.

೮. ಗ್ರಂಥ ಓದುಗ ಮತ್ತು ಗ್ರಂಥಪಾಲನ ನಡುವೆ ಉತ್ತಮ ಬಾಂಧ್ಯವ್ಯವನ್ನು ಹೊಂದಿರಬೇಕಾಗುತ್ತದೆ.

೧೮, ೧೯ನೇ ಶತಮಾನಗಳಲ್ಲಿ ಗ್ರಂಥಗಳನ್ನು ರಕ್ಷಿಸುವುದು ಗ್ರಂಥಾಲಯಗಳ ಒಂದು ದೊಡ್ಡ ಜವಾಬ್ದಾರಿಯಾಯಿತು. ಈ ರಕ್ಷಣೆಯಲ್ಲಿ ಅನುಸರಿಸಬೇಕಾದ ಉತ್ತಮ ವಿಧಿವಿಧಾನಗಳು ಕಂಡುಹಿಡಿಯಲು ಹಲವಾರು ಸಂಸ್ಥೆಗಳು ಹಣವನ್ನು ಬಹುಮಾನಗಳನ್ನು ನೀಡಿದವು. "೧೭೭೪ರಲ್ಲಿ ರಾಯಲ್ ಸೋಸೈಟಿ

ಆಫ್ ಗೋರ್ಟಂಗ್‌ಟನ್" ಸಂಸ್ಥೆಯು ಗ್ರಂಥಗಳಿಗೆ ಕೀಟಗಳ ಹಾವಳಿ ಮತ್ತು ನಿವಾರಣೋಪಾಯಗಳ ಬಗ್ಗೆ ಅಧ್ಯಯನ ನಡೆಸಿ ಡಾ॥ ಜೋಹಾನ್ ಎಂಬಾತನಿಗೆ ೧೨ ಡಕಟ್ (Ducat) ಹಣವನ್ನು ಬಹುಮಾನವಾಗಿ ನೀಡಿತು. ಈ ದಿಸೆಯಲ್ಲಿ ಅಮೇರಿಕಾ ಬ್ರಿಟನ್ ಫ್ರಾನ್ಸ್ ಮೊದಲಾದ ದೇಶಗಳೇ ಅಲ್ಲದೆ, ಮೆಕ್ಸಿಕೋ ಸಿರಿಯಾ ಭಾರತ ದೇಶಗಳಲ್ಲಿಯೂ ಅಧ್ಯಯನ ನಡೆದಿದೆ. ೧೯ನೆಯ ಶತಮಾನದ ಕೊನೆಯಲ್ಲಿ ಕಿಂಗ್‌ಸ್ಟನ್ನಿನಲ್ಲಿರುವ ಜಮೈಕಾ ಸಂಸ್ಥೆಯು ಗ್ರಂಥಹುಳುಗಳ ಮತ್ತು ಜರಲೆಗಳ ಹಾವಳಿಯಿಂದ ಪುಸ್ತಕಗಳನ್ನು ರಕ್ಷಿಸುವಲ್ಲಿ ಹೆಚ್ಚು ಪ್ರಯೋಗಗಳನ್ನು ನಡೆಸಿ ಅನೇಕ ನಿವಾರಣೋಪಾಯಗಳಿಂದ ಸುಸಜ್ಜಿತವಾಯಿತು.[೪]

ಗ್ರಂಥ ಸಂರಕ್ಷಣೆ ಕುರಿತು ಅಂತರಾಷ್ಟ್ರೀಯ ಗ್ರಂಥಪಾಲಕರ ಸಮ್ಮೇಳನವು ೧೮೯೮ರಲ್ಲಿ ಸೈಂಟ್‌ಗಾಲ್ (Saintgall) ಮಂದಿರದಲ್ಲಿ ಸಭೆ ಸೇರಿದಾಗ ಗ್ರಂಥ ಸಂರಕ್ಷಣೆಯ ವಿಷಯವನ್ನು ಚರ್ಚಿಸಿ ಇದರ ಅಧ್ಯಯನಕ್ಕೆ ೧೯೦೦ ರಲ್ಲಿ ಇಂಗ್ಲೆಂಡಿನಲ್ಲಿ ಒಂದು ಸಮಿತಿಯನ್ನು ರಚಿಸಿತು. ಮೊದಲನೆಯ ಮಹಾಯುದ್ಧದ ಅನಂತರ ಗ್ರಂಥ ಸಂರಕ್ಷಣೆಯ ಸಮಸ್ಯೆಗಳನ್ನು ಅಭ್ಯಾಸಮಾಡಲು ಬ್ರಿಟಿಷ್ ಮ್ಯೂಸಿಯಂನಲ್ಲಿ ಒಂದು ಸಂಶೋಧನಾ ಪ್ರಯೋಗಾಲಯವನ್ನು ಸ್ಥಾಪಿಸಲಾಯಿತು. ರೋಮ್ ದೇಶದಲ್ಲಿ ಆಲ್ಡಾನ್ಸೊಗಾಲೊ ಎಂಬಾತನು ತನ್ನ "ಇಸ್ಟಿಟ್ಯುಟೊ ಡಿ ಪೆಥೆಲೋಜಿಯ ಡೆಲ್ ಲಿಬ್ರೊ" ಎಂಬ ಗ್ರಂಥ ಸಂರಕ್ಷಣಾ ಶಾಸ್ತ್ರದ ಅಧ್ಯಯನ ಸಂಸ್ಥೆಯನ್ನು ಸ್ಥಾಪಿಸಿದನು. ಅಲ್ಲಿ ಗ್ರಂಥ ಸಂರಕ್ಷಣಾ ಶಾಸ್ತ್ರದ ಅಧ್ಯಯನ ನಡೆಸಲಾಯಿತು. ಗ್ರಂಥಗಳ, ಹಸ್ತಪ್ರತಿಗಳಂತಹ ಪ್ರಾಚೀನ ಕಾಲದ ಜ್ಞಾನ ಆಕರಗಳನ್ನು ಕುರಿತು ಅಧ್ಯಯನ ನಡೆಸುತ್ತಿರುವ ಸಂಸ್ಥೆಗಳಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿನ 'ನಾಷನಲ್ ಆರ್ಕೈವ್ಸ್ ಪತ್ರಾಗಾರ ಭಾರತದ ರಾಷ್ಟ್ರೀಯ ಪತ್ರಾಗಾರ ನವದೆಹಲಿಯಲ್ಲಿ ಸ್ಥಾಪಿಸಲ್ಪಟ್ಟಿತು.

ಹೀಗಾಗಿ ಗ್ರಂಥಸಂರಕ್ಷಣೆಯ ಬಗ್ಗೆ ಸಮಗ್ರವಾದ ಚರ್ಚೆ ವಿಚಾರ ಸಂಕಿರಣ ಗ್ರಂಥಾಲಯ ಮತ್ತು ಗ್ರಂಥಪಾಲಕರ ಸಮ್ಮೇಳನಗಳನ್ನು ಹಮ್ಮಿಕೊಳ್ಳುವುದರ ಜೊತೆಗೆ ಸಾಂಪ್ರದಾಯಿಕ ಮತ್ತು ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಗ್ರಂಥ ಸಂರಕ್ಷಣೆ ಸಂವರ್ಧನೆಯನ್ನು ಮಾಡುವಲ್ಲಿ ಗ್ರಂಥಪಾಲಕರ ಪಾತ್ರ ಅತಿ ಮುಖ್ಯವಾಗಿದೆ. ಗ್ರಂಥಾಲಯಗಳಲ್ಲಿ ಜ್ಞಾನದ ಸಂರಕ್ಷಣೆ ಗ್ರಂಥಪಾಲಕರ ಮತ್ತು ಪ್ರತಿಯೊಬ್ಬ ಗ್ರಂಥ ಪ್ರೇಮಿಗಳ ಜವಾಬ್ದಾರಿಯಾಗಿದೆ.

### ೧೦.೩. ಗ್ರಂಥಸಂರಕ್ಷಣೆ ಮತ್ತು ರಾಸಾಯನಿಕಗಳ ಬಳಕೆ

ಕ್ರಿ.ಶ. ೯೯೩ ರಲ್ಲಿಯೇ ಬಾಗ್ದಾದಿನ 'ಸಂಬರ್ – ಇಬಿನ್ – ಅರ್ದಪೀರ ಗ್ರಂಥಾಲಯದಲ್ಲಿ ಗೆದ್ದಲವನ್ನು ಹೋಗಲಾಡಿಸಲು ರಾಸಾಯನಿಕ ವಸ್ತುಗಳನ್ನು ಉಪಯೋಗಿಸುತ್ತಿದ್ದರು. ಇಂದು ಗ್ರಂಥಾಲಯದ ಕಟ್ಟಡಗಳ ತಳಪಾಯದಲ್ಲಿ ಗೆದ್ದಲನ್ನು ತಡೆಗಟ್ಟುವ ಸಲುವಾಗಿ ಗೋಡೆಯ ಸುತ್ತಲು ರಾಸಾಯನಿಕ ವಿಷಕಾರಿ ದ್ರಾವಣವನ್ನು ಹಾಕಲಾಗುತ್ತದೆ. ಈ ದ್ರಾವಣದಲ್ಲಿ ಟ್ರೈಕ್ಲೋರೊಬೆಂಜಿನ್ ಪೆಂಟಕ್ಲೋರೊ ಪೆನಾಲ್, ಸೋಡಿಯಂ ಆರ್ಸೆನೈಟ್ ಮತ್ತು ಮತ್ತನ್ನುಂಟುಮಾಡುವ ಪದಾರ್ಥಗಳನ್ನು ಮಿಶ್ರಣವಾಗಿರುತ್ತದೆ.

ಯಾವುದೇ ಮುನ್ನೆಚ್ಚರಿಕೆ ಹೊಂದದೆ ಹಾಗೆ ನಿರ್ಮಾಣವಾದ ಗ್ರಂಥಾಲಯ ಕಟ್ಟಡಗಳಿಗೆ ಈ ದ್ರಾವಣವನ್ನು ಕಟ್ಟಡದ ಹೊರ ಗೋಡೆಗೆ ಕಿಟಕಿಗಳಿಗೆ ಮುಖ್ಯ ದ್ವಾರಗಳಿಗೆ ಸಿಂಪಡಿಸುವುದರಿಂದ ಗೆದ್ದಲುಗಳಿಂದ ಸಂರಕ್ಷಿಸಬಹುದಾಗಿದೆ.

ಇತ್ತೀಚಿಗೆ ಮಲಯದ ಕೌಲಾಲಂಪುರ್ ನಗರದಲ್ಲಿರುವ 'ಇನ್‌ಸ್ಟಿಟ್ಯೂಟ್ ಫಾರ್ ಮೆಡಿಕಲ್ ರಿಸರ್ಚ್ ಗ್ರಂಥಾಲಯವು ಗೆದ್ದಲು ದಾಳಿಗೆ ತುತ್ತಾದಾಗ, ಅಲ್ಲಿನ ಲೋಕೋಪಯೋಗಿ ಇಲಾಖೆಯವರು ನೆಲಕ್ಕೆ ಚಿತ್ರಾಕಾರವಾಗಿ ಜೋಡಿಸಿದ್ದ ಮರದ ಹಲಗೆಗಳಲ್ಲಿ ಕಳಚಿ, ಕಟ್ಟಡದ ಗೋಡೆಗಳ ಹೊರ ಮತ್ತು ಒಳಭಾಗಗಳಲ್ಲಿ ತೆಗೆದು ಸುಮಾರು ೯೦ ಗುಳಿಗಳಲ್ಲಿ ಡೈಲ್‌ಡ್ರೆಕ್ಸ್ ದ್ರಾವಣವನ್ನು ಸುರಿದು ಗೆದ್ದಲನ್ನು ಹತೋಟಿಗೆ ತಂದರು.[೫]

ಉಷ್ಣಾಂಶ ಮತ್ತು ತೇವಾಂಶ ಹೆಚ್ಚಾಗದಂತೆ ಗ್ರಂಥಾಲಯವನ್ನು ನೋಡಿಕೊಳ್ಳಬೇಕು. ಹವಾನಿಯಂತ್ರಣ ಮಾಡುವುದು. ಹವಾನಿಯಂತ್ರಣವಿಲ್ಲದೆಡೆಗಳಲ್ಲಿ ಚೆನ್ನಾಗಿ ಗಾಳಿ ಬೆಳಕು ಬರುವಂತೆ ಋತುಮಾನಕ್ಕೆ ಅನುಗುಣವಾಗಿ ಕೃತಕವಾದ ಯಂತ್ರಗಳ ಮೂಲಕ ವಿದ್ಯುಚ್ಛಕ್ತಿ ಉಪಕರಣಗಳನ್ನು ಬಳಸಿ ಉಷ್ಣಾಂಶ ಮತ್ತು ತೇವಾಂಶದಿಂದ ಗ್ರಂಥಾಲಯದಲ್ಲಿರುವ ಜ್ಞಾನ ಸಾಮಗ್ರಿಯನ್ನು ಸಂರಕ್ಷಣೆಗೆ ಒಳಪಡಿಸಬಹುದಾಗಿದೆ. ಗ್ರಂಥಗಳ ಹೊದಿಕೆಗೆ ಉಪಯೋಗಿಸುವ ಬಟ್ಟೆಯೂ ಕಪ್ಪು, ಗಾಡನೀಲಿ ಮತ್ತು ಕೆಂಪು ಬಣ್ಣದ್ದಾಗಿದ್ದರೆ ಬೂಷ್ಟು ಸುಲಭವಾಗಿ ಹತ್ತುವುದಿಲ್ಲ.

ಹೊರಗಿನಿಂದ ತಂದ ಹಸ್ತಪ್ರತಿಗಳು(ಗ್ರಂಥಗಳು) ಮತ್ತು ಗ್ರಂಥಾಲಯದಲ್ಲಿರುವ ಹಸ್ತಪ್ರತಿ ಗ್ರಂಥಗಳಿಗೆ ಯಾವುದೇ ಕಾರಣದಿಂದ ಬೂಷ್ಟು ಅಥವಾ ಕ್ರಿಮಿಕೀಟಗಳು ಬಂದಿದ್ದರೆ, ಅವುಗಳನ್ನು ಹಾಗೆ ಧೂಪಕ್ಕೆ ಇಲ್ಲವೆ ಹವೆಯ ಒತ್ತಡಕ್ಕೆ ಒಳಪಡಿಸಿದಾಗ ಆ ಜ್ಞಾನಗಳನ್ನು ರಕ್ಷಿಸುವುದಲ್ಲದೆ ಇತರ ಗ್ರಂಥಗಳಿಗೆ ಹರಡದಂತೆಯೂ ಮುನ್ನೆಚ್ಚರಿಕೆ ಪಡೆಯಲು ಸಾಧ್ಯ. ಗ್ರಂಥಗಳಲ್ಲಿರುವ ಕ್ರಿಮಿಕೀಟಗಳ ಮೊಟ್ಟೆಗಳನ್ನು ನಾಶಮಾಡಲು ಇದೊಂದು ಉತ್ತಮ ಮತ್ತು ಸುಲಭವಾದ ಸಂರಕ್ಷಣಾ ವಿಧಾನವಾಗಿದೆ. ಥೈಮಾಲು ಅನಿಲ ಬೂಷ್ಟು ರೋಗಗಳಿಗೆ ಅತ್ಯಂತ ಪರಿಣಾಮಕಾರಿಯಾಗಿದ್ದು. ಕೀಟಗಳಿಗೆ ಪ್ಯಾರಡೈಕ್ಲೋರೊಬೆಂಜಿನ್ ಮತ್ತು ಕಿಲ್ಲೊಟೆರಾಗಳನ್ನೆ ಉಪಯೋಗಿಸಬೇಕಾಗುತ್ತದೆ. ಭಾರತದಲ್ಲಿ ಗ್ರಂಥಗಳನ್ನು ರಕ್ಷಿಸಲು ನ್ಯಾಫ್ತಲಿನ್ ಬಿಲ್ಲೆಗಳನ್ನು ಉಪಯೋಗಿಸುತ್ತಾರೆ. ಗ್ರಂಥಗಳ ಕಪಾಟುಗಳಲ್ಲಿ ಮೂರು ಅಡಿ ಅಂತರದಲ್ಲಿ ಒಂದು ನ್ಯಾಫಲಿನ್ ಬಿಲ್ಲೆಯನ್ನು ಇಡಬೇಕು. ಅವುಗಳ ಜೊತೆಗೆ ಕರ್ಪೂರದ ಬಿಲ್ಲೆಗಳನ್ನು ಮೇಜಿನ ಖಾನೆಗಳಲ್ಲಿ, ಕಪಾಟುಗಳಲ್ಲಿ ಕಾಗದಪತ್ರಗಳಲ್ಲಿ ಹಾಕುವುದರಿಂದ ಬೆಳ್ಳಿಮೀನನಂತೆ ಕ್ರಿಮಿಕೀಟದಿಂದ ರಕ್ಷಿಸಬಹುದು. ಬೆಳ್ಳಿಮೀನು ಗ್ರಂಥಗಳ ವಿನಾಶವನ್ನು ತುಂಬಾ ಬೇಗನೆ ಮಾಡುವುದರಿಂದ ಬೆಳ್ಳಿಮೀನಿನಂತೆ ಕ್ರಿಮಿಕೀಟಗಳಿಂದ ಗ್ರಂಥಗಳನ್ನು ಸಂರಕ್ಷಿಸುವುದು ಹೆಚ್ಚು ಪರಿಣಾಮಕಾರಿಯಾಗಿದೆ.

ಸೊಳ್ಳೆ, ನುಸಿಹುಳು, ಜೀರುಂಡೆ, ಗಾಳದನೊಣ, (Sandflies) ನೊಣ, ಕಣಜ (wasp), ಗಿಡಹೇನು (crickets), ಗಬ್ಬು ತಗಣೆ (stinkbugs), ಜೇನುಹುಳುಗಳು (wild bees) ಹಾರುವ ಗೆದ್ದಲು (Flying ants) ಇವೇ ಮೊದಲಾದ ಲಕ್ಷಾಂತರ ಕೀಟಗಳು ಉಷ್ಣವಲಯದಲ್ಲಿನ ಗ್ರಂಥಾಲಯಗಳಿಗೆ ಸದಾ

ಬರುತ್ತಿರುತ್ತವೆ. ಅದರಲ್ಲಿಯೂ, ವರ್ಷಕಾಲ ಪ್ರಾರಂಭವಾಗುವುದಕ್ಕೆ ಮೊದಲು ಇವು ಹೆಚ್ಚಾಗಿ ಬರುತ್ತವೆ. ಮೇಲಿನ ಕೆಲವು ಕೀಟಗಳು ವಿದ್ಯುಚ್ಛಕ್ತಿಯ ದೀಪಗಳಿಗೆ ಆಕರ್ಷಿತವಾಗಿ ಬರುತ್ತವೆ. ಗ್ರಂಥಾಲಯದಲ್ಲಿ ಹಾಕಿರುವ ವಿದ್ಯುತ್ ದೀಪಗಳನ್ನು ಮುಚ್ಚಳದಿಂದ ಮುಚ್ಚುವುದರಿಂದ ಕೀಟಗಳ ಆಕರ್ಷಣೆ ಕಡಿಮೆಯಾಗುವುದಲ್ಲದೆ ದೀಪದಿಂದ ಹೊರಡುವ ವಿದ್ಯುತ್ ಕಿರಣಗಳು ನೇರವಾಗಿ ಹಸ್ತಪ್ರತಿ ಗ್ರಂಥಗಳ ಮೇಲೆ ಬೀಳದಂತೆ ಬೆಳಕಿನಿಂದ ಸಂರಕ್ಷಿಸಬಹುದು.

**೧೦.೪. ಗ್ರಂಥಾಲಯ ಕಾರ್ಯತಂತ್ರಗಳು ಹಾಗೂ ಸೇವೆಗಳು**

೧. ಗ್ರಂಥಗಳ ಆಯ್ಕೆ ಮತ್ತು ಸಂಗ್ರಹಣೆ

೨. ಪರಿಚಲನ ಪೂರ್ವಸಿದ್ಧತೆ

೩. ವರ್ಗೀಕರಣ ಮತ್ತು ಸೂಚೀಕರಣ

೪. ಗ್ರಂಥ ಪರಿಚಲನೆ

೫. ಗ್ರಂಥ ಸಂರಕ್ಷಣೆ

೬. ಗ್ರಂಥಾಲಯ ಕಟ್ಟಡ ಹಾಗೂ ಪೀಠೋಪಕರಣಗಳು

೭. ಗ್ರಂಥಾಲಯ ಸಮಿತಿ, ಸಂಘ ಹಾಗೂ ಅಕಾಡಮಿಗಳು

೮. ಗ್ರಂಥಾಲಯ ಸಿಬ್ಬಂದಿ

ಗ್ರಂಥಾಲಯದಲ್ಲಿ ಜ್ಞಾನ ಮೂಲಗಳ ಓದುವ ಸಲಕರಣೆಗಳ ಸಮಗ್ರ ಸಂಗ್ರಹವಿರುತ್ತದೆ. ಪ್ರಮುಖವಾಗಿ ದಿನಪತ್ರಿಕೆಗಳು (ವೃತ್ತಪತ್ರಿಕೆಗಳು) ಹಸ್ತಪ್ರತಿ ಗ್ರಂಥಗಳು, ನಿಯತಕಾಲಿಕೆಗಳು, ವಿಶ್ವಕೋಶಗಳು, ಡೈರೆಕ್ಟರಿಗಳು, ನಿಘಂಟುಗಳು, ಗೆಜೆಟಿಯರ್ಸ್, ವಾರ್ಷಿಕ ವರದಿಗಳು ಕೈಪಿಡಿಗಳು, ಸಾರಾಂಶಸೂಚಿಗಳು, ಕಂಪ್ಯೂಟರ್‌ನ ಅಂತರ್‌ಜಾಲ ಸೇವೆ ಡಿಜಿಟಲ್‌ಂತ ವಿದ್ಯುನ್ಮಾನ ಆವಿಷ್ಕಾರದ ಬಳಕೆಗಳು ಓದುಗರಿಗೆ ಉಪಯುಕ್ತವಾದ ಜ್ಞಾನವನ್ನು ಜ್ಞಾನದಾಹವನ್ನು ಉಣಬಡಿಸುವಲ್ಲಿ ನಿರತವಾಗಿವೆ.

ಗ್ರಂಥಾಲಯದ ಪ್ರಮುಖ ಸ್ವತ್ತಾಗಿರುವ ಗ್ರಂಥಗಳನ್ನು ಸಂರಕ್ಷಿಸುವುದು ಬಹುಮುಖ್ಯ ಕಾರ್ಯವಾಗಿದೆ. ಗ್ರಂಥಗಳು ನಾಶವಾಗಲು ಅನೇಕ ಕಾರಣಗಳುಂಟು ಮುಖ್ಯವಾಗಿ ಅವುಗಳನ್ನು ಉಪಯೋಗಿಸುವ ಕ್ರಮ ಕಪಾಟುಗಳಿಂದ ತೆಗೆಯುವ ಬಗೆ, ಓದುವಾಗ ಗ್ರಂಥಗಳಲ್ಲಿ ಟಿಪ್ಪಣಿಗಳನ್ನು ಗುರುತಿಸುವುದು, ಹಾಳೆಗಳನ್ನು ಮಡುಚುವುದು, ಬೇಕಾದ ಭಾಗಗಳನ್ನು ಕತ್ತರಿಸುವುದು ಇವುಗಳಿಂದ ಗ್ರಂಥಗಳನ್ನು ಸಂರಕ್ಷಿಸುವುದು ಆದ್ಯಕರ್ತವ್ಯವಾಗಿದೆ. ಈ ಬಗ್ಗೆ ಗ್ರಂಥಾಲಯ ಸಿಬ್ಬಂದಿಗಳು ಎಚ್ಚರವಹಿಸುವುದು ಓದುಗರಿಗೆ ಗ್ರಂಥಗಳ ಉಪಯೋಗದ ಬಗ್ಗೆ ಬಳಸುವ ವಿಧಾನ ಕುರಿತು ಅವುಗಳ ರಕ್ಷಣೆ ದೃಷ್ಟಿಯಿಂದ ಹೆಚ್ಚು ಸೂಕ್ತವಾಗಿದೆ. ಗ್ರಂಥಾಲಯ ಕಟ್ಟಡದ ಬಗ್ಗೆ ತುಂಬಾ ಗಮನಹರಿಸಿ ನಿರ್ಮಿಸಬೇಕು.

೧. ಓದುಗನನ್ನು ಸುಲಭವಾಗಿ ಆಕರ್ಷಿಸುವಂತಿರಬೇಕು. ಸಾಮಾನ್ಯವಾಗಿ ಸಾರ್ವಜನಿಕರಿಗೆ ನಿತ್ಯ ಭೇಟಿ ನೀಡುವ ಪಟ್ಟಣದ ಮಧ್ಯೆ ಭಾಗದಲ್ಲಿ, ಶೈಕ್ಷಣಿಕ ಗ್ರಂಥಾಲಯವಾಗಿದ್ದರೆ ಶೈಕ್ಷಣಿಕ ಕ್ಷೇತ್ರದ ಮಧ್ಯಭಾಗದಲ್ಲಿ ಗ್ರಂಥಾಲಯದ ಕಟ್ಟಡವಿರಬೇಕು. ಕಾಲಕಾಲಕ್ಕೆ ವಿಸ್ತರಿಸಲು ಅನುವಾಗುವಂತಿರಬೇಕು.

೨. ಗ್ರಂಥಾಲಯವು ಅತಿಯಾದ ಶಬ್ದವಿರುವ ಕಲುಷಿತ ಪ್ರದೇಶದಲ್ಲಿ ಇರಬಾರದು. ಗ್ರಂಥಾಲಯ ಕಟ್ಟಡವು ಆಯತಾಕಾರದ ವಿನ್ಯಾಸವಿದ್ದು ಉತ್ತರ ಅಥವಾ ದಕ್ಷಿಣ ಮುಖವಾಗಿರಬೇಕು.

೩. ಗ್ರಂಥಾಲಯ ವಿಭಾಗಗಳಾದ ಗ್ರಂಥಗಳ ಆಯ್ಕೆ ಓದುವ, ಪಠ್ಯಪುಸ್ತಕ, ನಿಯತಕಾಲಿಕೆ, ಸಂದರ್ಭಸೇವೆ, ಪರಿಚಲನ ಈ ವಿಭಾಗಗಳಿಗನುಗುಣವಾಗಿ ಓದುಗರ ಸಂಖ್ಯೆಯನ್ನು ಪರಿಗಣಿಸಿ ಕಟ್ಟಡವನ್ನು ರೂಪಿಸಬೇಕಾಗುತ್ತದೆ.

ಗ್ರಂಥಾಲಯಗಳು ವಿವಿಧ ಆಯಾಮಗಳಲ್ಲಿ ಕಾರ್ಯ ನಿರ್ವಹಿಸುತ್ತವೆ. ಶೈಕ್ಷಣಿಕ ಗ್ರಂಥಾಲಯಗಳು, (ಶಾಲಾ, ಕಾಲೇಜು, ವಿಶ್ವವಿದ್ಯಾಲಯ) ಸಾರ್ವಜನಿಕ ಗ್ರಂಥಾಲಯಗಳು, (ರಾಷ್ಟ್ರೀಯ, ರಾಜ್ಯ, ಜಿಲ್ಲಾ, ನಗರ, ಗ್ರಾಮೀಣ) ವಿಶಿಷ್ಟ ಗ್ರಂಥಾಲಯಗಳು, ಸಂಪರ್ಕ ಗ್ರಂಥಾಲಯಗಳು, ವಾಣಿಜ್ಯ ಗ್ರಂಥಾಲಯಗಳು, ಕಾಪಿರೈಟ್ ಗ್ರಂಥಾಲಯಗಳು

**೧೦.೫. ಗ್ರಂಥಾಲಯ ವರ್ಗೀಕರಣ (Library Classification)**

ಗ್ರಂಥಾಲಯ ಉಪಯೋಗಕ್ಕಾಗಿ ಪುಸ್ತಕಗಳನ್ನು ಸಂಗ್ರಹಿಸುವ ಓದುಗರಿಗೆ ಉಪಯೋಗವಾಗುವ ರೀತಿಯಲ್ಲಿ ಅವು ಹೊಂದಿಸಲ್ಪಡುತ್ತವೆ. ಗ್ರಂಥಾಲಯದಲ್ಲಿ ವರ್ಗೀಕರಣವೆಂದರೆ ಗ್ರಂಥಗಳನ್ನು ಶಾಶ್ವತವಾಗಿ ಓದುಗರಿಗೆ ಅನುಕೂಲವಾಗುವಂತೆ ಹೊಂದಿಸಿಡಬೇಕಾದ ಪದ್ಧತಿಯಾಗಿದೆ. ಗ್ರಂಥಾಲಯದಲ್ಲಿರುವ ಮುದ್ರಿತ ಗ್ರಂಥಗಳು, ಓಲೆಗ್ರಂಥ, ಹಸ್ತಪ್ರತಿ, ಧ್ವನಿಮುದ್ರಿಕೆ ಚಲನಚಿತ್ರ ಸೂಕ್ಷ್ಮ ಪತ್ರಕದಂತಹ ಜ್ಞಾನವನ್ನು ಸಾಕ್ಷಾಧಾರಗಳನ್ನು ವ್ಯವಸ್ಥಿತವಾದ ರೂಪದಲ್ಲಿ ಹೊಂದಿಸಿಡುವ ಸಂರಕ್ಷಣಾ ವಿಧಾನವಾಗಿದೆ.

೧. ಗ್ರಂಥಾಲಯ ಪಂಚಸೂತ್ರಗಳು ಕಾರ್ಯರೂಪಕ್ಕೆ ಬರುವಂತೆ ಮಾಡುವುದು

೨. ಓದುಗರ ಅಮೂಲ್ಯವಾದ ವೇಳೆಯ ಉಳಿತಾಯ

೩. ಪ್ರತಿ ಗ್ರಂಥಕ್ಕೆ ಅದರದೇ ಆದ ವರ್ಗೀಕರಣದ ಸಾಂಕೇತಿಕ ರೂಪವನ್ನು ನೀಡುವುದು.

೪. ಕಪಾಟಿನಲ್ಲಿ ಈಗಿರುವ ಪುಸ್ತಕಗಳು ಓದುಗರಿಂದ ಅಥವಾ ಗ್ರಂಥಾಲಯ ಸಿಬ್ಬಂದಿಯಿಂದ ಉಪಯೋಗಿಸಿದ ನಂತರ ಅವುಗಳನ್ನು ಮೊದಲಿನ ಸ್ಥಾನದಲ್ಲಿ (ಪುನರ್ ಸ್ಥಾಪನೆ) ಸರಿಯಾಗಿ ಇಡಬೇಕು.

೫. ಪುಸ್ತಕ ದರ್ಶನ ಮತ್ತು ಪ್ರದರ್ಶನ; ಗ್ರಂಥಾಲಯ ವರ್ಗೀಕರಣ ವಿಷಯದ ಅನುಗುಣವಾಗಿ ಆಯಾ ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳ ದರ್ಶನ ಮತ್ತು ಪ್ರದರ್ಶನಕ್ಕೇ ಅನುವು ಮಾಡಿಕೊಡುವುದು.

೬. ಗ್ರಂಥಗಳ ಸಂಗ್ರಹದಿಂದ ಪುಸ್ತಕಗಳ ಹಿಂತೆಗತ ಕೆಲವು ಕಾರಣಾಂತರಗಳಿಂದ ಗ್ರಂಥಗಳ ಸಮಗ್ರದಿಂದ ಪುಸ್ತಕಗಳನ್ನು ತೆಗೆದು (missing books) ಹಾಕಬೇಕಾಗುತ್ತದೆ.

೭. ಹೊಸ ಗ್ರಂಥಗಳ ಸೇರ್ಪಡೆ: ಗ್ರಂಥಾಲಯ ಕಾಲಕಾಲಕ್ಕೆ ಗ್ರಂಥಗಳನ್ನು ಸಂಗ್ರಹಿಸುತ್ತಲೇ ಇರುತ್ತದೆ. ಗ್ರಂಥಾಲಯದಲ್ಲಿ ಈಗಾಗಲೇ ಇರುವ ಗ್ರಂಥಗಳ ಸಂಗ್ರಹದ ಮಧ್ಯದಲ್ಲಿ ವರ್ಗೀಕರಣ ಅವುಗಳಿಗೆ ಸೂಕ್ತ ಸ್ಥಾನವನ್ನು ಕಲ್ಪಿಸಬೇಕು.

೮. ಸಹಾಯಕ ಶ್ರೇಣಿ: ಗ್ರಂಥಗಳನ್ನು ವಿಷಯದ ಆಧಾರದ ಮೇಲೆ ಮತ್ತು ಒಂದಕ್ಕೊಂದು ಸಂಬಂಧವಿರುವ ವಿಷಯಗಳಿಗೆ ಅನುಗುಣವಾಗಿ ಹೊಂದಿಸಿಡಬೇಕು. ಉದಾ: ಕನ್ನಡ, ಇಂಗ್ಲಿಷ್, ಹಿಂದಿ ಮುಂತಾದ ಭಾಷೆಗಳ ಗ್ರಂಥಗಳನ್ನು ಒಟ್ಟಿಗೆ ಇಡಲ್ಪಡುತ್ತದೆ.

ಜ್ಞಾನದ ಮೂಲಭೂತ ವರ್ಗೀಕರಣವನ್ನೂ ೧. ಸಾಮಾನ್ಯ ವಿಜ್ಞಾನ ೨. ಮಾನವಿಕ ವಿಜ್ಞಾನ ೩. ಸಾಮಾಜಿಕ ವಿಜ್ಞಾನ ಈ ಮೂರು ನೆಲೆಯಲ್ಲಿ ಮಾಡಲಾಗುತ್ತದೆ.

### ೧೦.೫.೧. ಗ್ರಂಥಾಲಯ ವರ್ಗೀಕರಣದ ಪದ್ಧತಿಗಳು

(Library Classification Schemes of Types)

೧. ಡ್ಯೂಮಿ ದಾಶಮಿಕ ವರ್ಗೀಕರಣ ಪದ್ಧತಿ(Dewey Decimal classification 1876)

೨. ಕೋಲನ್ ವರ್ಗೀಕರಣ ಪದ್ಧತಿ (Colon Classification 1933)

೩. ಕಾಂಗ್ರೇಸ್ ಗ್ರಂಥಾಲಯ ವರ್ಗೀಕರಣ ಪದ್ಧತಿ(Library of congress classification 1904)

೪. ವಿಷಯ ವರ್ಗೀಕರಣ ಪದ್ಧತಿ(Subject classification)

೫. ಸಾರ್ವಜನಿಕ ದಾಶಮಿಕ ವರ್ಗೀಕರಣ ಪದ್ಧತಿ(Universal Decimal classification 1891)

೬. ಕಟರನ ವಿಸ್ತರಣಶೀಲ ವರ್ಗೀಕರಣ ಪದ್ಧತಿ(Expansive classification 1891)

೭. ವಾಜ್ಮಯ ದರ್ಶನಾತ್ಮಕವರ್ಗೀಕರಣ ಪದ್ಧತಿ(Bibliographicclassification 1935)

### ೧೦.೫.೨. ಡ್ಯೂಯಿ ದಾಶಮಿಕ ವರ್ಗೀಕರಣ ಪದ್ಧತಿ

೦೦೦ – ಸಾಮಾನ್ಯ ಶಬ್ದಕೋಶ ಜ್ಞಾನಕೋಶ

೧೦೦ – ತತ್ವಶಾಸ್ತ್ರ

೨೦೦ – ಧರ್ಮಶಾಸ್ತ್ರ

೩೦೦ – ಸಮಾಜಶಾಸ್ತ್ರ

೪೦೦ – ಭಾಷಾವಿಜ್ಞಾನ

೫೦೦ – ಶುದ್ಧ ವಿಜ್ಞಾನಗಳು

೬೦೦ – ಪ್ರಾಯೋಗಿಕ ವಿಜ್ಞಾನಗಳು

೭೦೦ – ಲಲಿತಕಲೆಗಳು

೮೦೦ – ಸಾಹಿತ್ಯ

೯೦೦ – ಭೂಗೋಳ, ಇತಿಹಾಸ, ಜೀವನಚರಿತ್ರೆ

### ೧೦.೫.೩. ದ್ವಿಬಿಂದು ವರ್ಗೀಕರಣ ಪದ್ಧತಿ

ೱ - ಗ್ರಂಥಾಲಯ ವಿಜ್ಞಾನ

A - ವಿಜ್ಞಾನ

B - ಗಣಿತಶಾಸ್ತ್ರ

C - ಭೌತಶಾಸ್ತ್ರ

D - ಸ್ಥಾಪತ್ಯ ವಿಜ್ಞಾನ

E - ರಸಾಯನಶಾಸ್ತ್ರ

F- ತಾಂತ್ರಿಕ ವಿಜ್ಞಾನ

G - ಜೀವಶಾಸ್ತ್ರ

H - ಭೂಗರ್ಭಶಾಸ್ತ್ರ

I - ಸಸ್ಯಶಾಸ್ತ್ರ

J - ವ್ಯವಸಾಯಶಾಸ್ತ್ರ

K - ಪ್ರಾಣಿಶಾಸ್ತ್ರ

L - ಔಷಧಿಶಾಸ್ತ್ರ

LA - ಆಯುರ್ವೇದ

Λ - ಅನುಭಾವ ಮತ್ತು ರಹಸ್ಯವಾದ

M - ಉಪಯುಕ್ತ ಕಲೆಗಳು

N - ಲಲಿತ ಕಲೆಗಳು

O - ಸಾಹಿತ್ಯ

P - ಭಾಷಾಶಾಸ್ತ್ರ

Q - ಧರ್ಮಶಾಸ್ತ್ರ

R - ತತ್ತ್ವಜ್ಞಾನ

S - ಮನಃಶಾಸ್ತ್ರ

T - ಶಿಕ್ಷಣ

U - ಭೂಗೋಳ

V - ಇತಿಹಾಸ

W - ರಾಜ್ಯಶಾಸ್ತ್ರ

Y - ಅರ್ಥಶಾಸ್ತ್ರ

Z - ಸಮಾಜಶಾಸ್ತ್ರ

ಗ್ರಂಥಾಲಯ ವಿಜ್ಞಾನದಲ್ಲಿ ಭಾರತೀಯರೊಬ್ಬರ ಅಪೂರ್ವಕೊಡುಗೆ ಈ ವರ್ಗೀಕರಣ ಪದ್ಧತಿಯಾಗಿದೆ. ಅಂತರಾಷ್ಟ್ರೀಯವಾಗಿ ಪ್ರಸಿದ್ಧವಾದ ಈ ವರ್ಗೀಕರಣದ ಕರ್ತೃ ಭಾರತ ಗ್ರಂಥಾಲಯ ವಿಜ್ಞಾನದ ಪಿತಾಮಹನು, ಪದ್ಮಶ್ರೀ ಡಾ. ಎಸ್.ಆರ್. ರಂಗನಾಥನ್‌ರು. ಗ್ರಂಥಾಲಯ ವಿಜ್ಞಾನದ ವಿಜ್ಞಾನದಲ್ಲಿ ಇಂಗ್ಲೆಂಡಿನಲ್ಲಿ ತರಬೇತಿ ಪಡೆದು ಮದ್ರಾಸ್ ವಿಶ್ವವಿದ್ಯಾಲಯದ ಗ್ರಂಥಪಾಲಕರಾಗಿದ್ದಾಗ ೧೯೩೩ ರಲ್ಲಿ ಈ ಕೃತಿಯ ರಚನೆ ಮಾಡಿದರು.

**೧೦.೬. ಗ್ರಂಥಸೂಚಿ (Cataloguing)**

ಗ್ರಂಥಾಲಯದಲ್ಲಿರುವ ವಿವಿಧ ಗ್ರಂಥಗಳ ಬಗ್ಗೆ ಓದುಗರಿಗೆ ಸಂಕ್ಷಿಪ್ತ ಮಾಹಿತಿಯನ್ನು ಕ್ರಮಬದ್ಧವಾಗಿ ಒಂದಡೆ ಕಲೆಹಾಕುವ ವಿಧಾನವೇ ಗ್ರಂಥಸೂಚಿಯಾಗಿದೆ. ಉತ್ತಮ ಸೂಚೀಕರಣ ಆಧುನಿಕ ಗ್ರಂಥಾಲಯಗಳ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ.

೧. ಗ್ರಂಥಸೂಚಿಯು ವಾಚಕರಿಗೆ

i) ಗ್ರಂಥಕರ್ತನ ಹೆಸರು ತಿಳಿಸುವ

ii) ಗ್ರಂಥದ ಹೆಸರು ತಿಳಿಸುವ

iii) ಗ್ರಂಥಲ್ಲಿರುವ ವಿಷಯ ತಿಳಿಸುವ ಓದುಗನಿಗೆ ಗ್ರಂಥವನ್ನು ದೊರೆಕಿಸಿಕೊಡುವಲ್ಲಿ ಸಹಾಯ ಮಾಡಬೇಕು.

೨. ಗ್ರಂಥಸೂಚಿಯು ಈ ಕೆಳಗಿನ ಸಂದರ್ಭಗಳಲ್ಲಿ ಗ್ರಂಥರಾಶಿಯನ್ನೆಲ್ಲ ತೋರಿಸಿ ಕೊಡಬೇಕು.

i) ಒಬ್ಬ ಗ್ರಂಥಕರ್ತನಿಂದ ಬರೆದ ಗ್ರಂಥಗಳು

ii) ಒಂದು ವಿಷಯದ ಮೇಲೆ ಇರುವ ಗ್ರಂಥಗಳು

iii) ಒಂದು ಸಾಹಿತ್ಯದ ಮೇಲೆ ಇರುವ ಗ್ರಂಥಗಳು

೩. ಗ್ರಂಥಸೂಚಿಯು ಓದುಗನ ಆಯ್ಕೆಗೆ ಸಹಾಯ ಮಾಡುವಂತಿರಬೇಕು.

i) ಗ್ರಂಥದ ಆವೃತ್ತಿ

ii) ಗ್ರಂಥದ ವೈಶಿಷ್ಟ್ಯ

ಡಾ. ಎಸ್.ಆರ್. ರಂಗನಾಥನ್‌ರವರು ಗ್ರಂಥಸೂಚಿ ಕುರಿತು ಹೀಗೆ ಹೇಳಿದ್ದಾರೆ.

೧. ಗ್ರಂಥಸೂಚಿಯು ಪ್ರತಿಯೊಬ್ಬ ಓದುಗನಿಗೆ ಅವನವನ ಗ್ರಂಥವನ್ನು ತೋರಿಸಿ ಕೊಡುತ್ತದೆ.

೨. ಗ್ರಂಥಾಲಯ ಪ್ರತಿಯೊಂದು ಗ್ರಂಥಕ್ಕೆ ಅದರ ಓದುಗನನ್ನು ದೊರಕಿಸಿ ಕೊಡುತ್ತದೆ.

೩. ಓದುಗರ ಮತ್ತು ಗ್ರಂಥಾಲಯ ಸಿಬ್ಬಂದಿಗಳ ವೇಳೆಯನ್ನು ಉಳಿತಾಯ ಮಾಡುತ್ತದೆ.

ಪ್ರಪಂಚದ ಗ್ರಂಥಾಲಯಗಳ ಗ್ರಂಥಸೂಚಿಯು ಮೂರು ಬಗೆಯ ಬಾಹ್ಯರೂಪದಲ್ಲಿ ಪ್ರಚಲಿತವಾಗಿದೆ.

೧. ಮುದ್ರಿತ ಗ್ರಂಥಸೂಚಿ (Printed Page Catalogue)

೨. ಪತ್ರಗುಚ್ಛ ಗ್ರಂಥಸೂಚಿ (Adjustable - Sheaf Catalogue)

೩. ಪತ್ರಕ ಗ್ರಂಥಸೂಚಿ (Card Catalogue)

ಮುದ್ರಿತ ಗ್ರಂಥಸೂಚಿಯಲ್ಲಿ ಪರಿಗ್ರಹಣ ರಿಜಿಸ್ಟರನ್ನೇ (Accession Register) ಗ್ರಂಥಸೂಚಿಯಂತೆ ಉಪಯೋಗಿಸಬಹುದು. ಮುದ್ರಿತ ಗ್ರಂಥಸೂಚಿಯ ಪ್ರತಿಯೊಂದು ಪುಟದಲ್ಲಿ ೧೫-೨೦ ಉಲ್ಲೇಖಗಳು ಒಮ್ಮಲೇ ಓದುಗನಿಗೆ ಕಾಣುವ ಅವಕಾಶವಿದೆ. ಪ್ರಪಂಚದ ನಾನಾ ಮೂಲೆಗಳಲ್ಲಿ ಅಭ್ಯಸಿಸುವ ವಿದ್ವಾಂಸರಿಗೆ ಇದರ ಅವಲೋಕನ ಸಾಧ್ಯವಿರುವುದರಿಂದ ಅಮೇರಿಕದ ರಾಷ್ಟ್ರೀಯ ಕಾಂಗ್ರೆಸ್ ಗ್ರಂಥಾಲಯ ಮತ್ತು ಬ್ರಿಟಿಷ್ ಮ್ಯೂಸಿಯಂ ಗ್ರಂಥಾಲಯಗಳ ಮುದ್ರಿತ ಗ್ರಂಥಸೂಚಿಯನ್ನು ಮುದ್ರಿಸಿ ಪ್ರಕಟಿಸಿವೆ.

ಪತ್ರಗುಚ್ಛ ಗ್ರಂಥಸೂಚಿಯಲ್ಲಿ ಪ್ರತಿಯೊಂದು ಗ್ರಂಥಕ್ಕೆ ಸಂಬಂಧಿಸಿದ ವಿವರಗಳನ್ನು ಒಳಗೊಂಡ ೬x೪ ಅಳತೆಯ ಕಾರ್ಡುಗಳಿರುತ್ತವೆ.ಇವನ್ನು ಬೇಕಾದ ಹಾಗೆ ಸ್ಥಾನಾಂತರಿಸಬಹುದು ಬೇಡವಾದಾಗ ತೆಗೆದು ಹೊಸವನ್ನು ಸೇರಿಸಲು ಅವಕಾಶವಿದೆ. ಅಕಾರಾದಿಯಾಗಿ ಕಾರ್ಡುಗಳನ್ನು ಪತ್ರಗುಚ್ಛ ಗ್ರಂಥಸೂಚಿಗಳು ಬ್ರಿಟನ್ನಿನ ಬರ್ಮಿಂಗ್‌ಹ್ಯಾಮ್ ಲಿವರ್‌ಪೂಲ್, ಷಫೀಲ್ಡ್ ವೆಸ್ಟ್‌ಮಿನಿಸ್ಟರ್‌ನಂತಹ ನಗರಗಳಲ್ಲಿನ ಗ್ರಂಥಾಲಯಗಳಲ್ಲಿ ಅಳವಡಿಸಲಾಗಿದೆ.

ಕಾರ್ಡುಸೂಚಿ ೫x೩ ಆಕಾರದ ಕಾರ್ಡುಗಳನ್ನು ಉಪಯೋಗಿಸಲಾಗುವುದು. ಮರದ ಇಲ್ಲವೇ ಕಬ್ಬಿಣದ ಕ್ಯಾಬಿನೆಟ್‌ಗಳಲ್ಲಿ ಕಾರ್ಡುಗಳನ್ನು ವರ್ಗಾನುಕ್ರಮದಲ್ಲಾಗಲಿ, ವರ್ಣಾನುಕ್ರಮವಾಗಿ ಸೂಕ್ತ ಕಂಡ ರೀತಿಯಲ್ಲಿ ಜೋಡಿಸಿಯಿಡಬಹುದು. ಕ್ಯಾಬಿನೆಟ್ಟುಗಳಲ್ಲಿನ ಪ್ರಾಯರ್ಸ್ ಒಂದೊಂದರಲ್ಲೂ ೧೦೦೦ ರಿಂದ ೧೫೦೦ ಕಾರ್ಡುಗಳನ್ನಿಡುವಷ್ಟು ಸ್ಥಳಾವಕಾಶವಿರುತ್ತದೆ. ಈ ಪೆಟ್ಟಿಗೆಗಳನ್ನು ನೆಲದಿಂದ ೩ ಅಥವಾ ೩-೬ ಎತ್ತರದಲ್ಲಿ ಇಡುವುದು ಹೆಚ್ಚು ಸುರಕ್ಷತೆಯಾಗಿದೆ. ಸಂಯುಕ್ತ ಗ್ರಂಥಸೂಚಿ ರಚನೆಯಲ್ಲೂ (Union Cataloguing) ಸಹಕಾರಿ ಗ್ರಂಥಸೂಚಿ ಕಾರ್ಯದಲ್ಲೂ ಕೇಂದ್ರೀಕೃತ ಗ್ರಂಥಸೂಚಿ ಕಾರ್ಯದಲ್ಲೂ ಈ ವಿಧಾನ ಉಪಯುಕ್ತವಾಗಿದ್ದು. ಈ ಗ್ರಂಥಸೂಚೀಕರಣ ಪದ್ಧತಿ ಪ್ರಪಂಚದ ಪ್ರಮುಖ ಗ್ರಂಥಾಲಯಗಳಲ್ಲಿ ಹೆಚ್ಚು ಬಳಕೆಯಲ್ಲಿದೆ.

೨. ಆಂತರಿಕ ರಚನೆ (Inner Forms of Catalogue)

i) ವರ್ಣಾನುಕ್ರಮ (Alphabetical order)

ii) ವರ್ಗಾನುಕ್ರಮ (Classified order)

iii) ವರ್ಗವರ್ಣಾನುಕ್ರಮ (Alphabetical Classed order)

ಗ್ರಂಥಸೂಚಿಯ ಪ್ರಕಾರಗಳು (Verieties of Catalogue) ಗ್ರಂಥಕಾರ ಸೂಚಿ (Author Catalogue), ನಾಮಸೂಚಿ (Name Catalogue), ಶಿರೋನಾಮ ಸೂಚಿ (Title Catalogue), ವಿಷಯಾನುವರ್ಣಸೂಚಿ (Alphabaetical Subject Catalogue), ಸರ್ವಾನುವರ್ಣಸೂಚಿ (Dictionary Catalogue)

ಗ್ರಂಥಾಲಯ ಪ್ರವೇಶಿಸಲು ೧) ಮುಕ್ತ ಪ್ರವೇಶವಿರುವ (Open access) ೨) ಮುಕ್ತ ಪ್ರವೇಶವಿಲ್ಲದ್ದು (Closed access) ಮುಕ್ತ ಪ್ರವೇಶವಿರುವ ಗ್ರಂಥಾಲಯದಲ್ಲಿ ಓದುಗರು ಗ್ರಂಥಾಲಯದ ಎಲ್ಲಾ ಭಾಗಗಳಿಗೆ ಸಂಚರಿಸಿ ಗ್ರಂಥಗಳನ್ನು ವೀಕ್ಷಿಸುವ ಮತ್ತು ತಮಗೆ ಬೇಕಾದ ಗ್ರಂಥಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿದೆ. "ಓದುಗರು ಮತ್ತು ಗ್ರಂಥಗಳ ನಡುವೆ ಸಾಧ್ಯವಿರುವ ಎಲ್ಲ ಅಡ್ಡಿ ಆತಂಕಗಳನ್ನು ನಿವಾರಿಸುವದು. ಡಾ.ಎಸ್. ರಂಗನಾಥನ್‌ರವರು ಪಂಚಸೂತ್ರ ಕಾರ್ಯರೂಪಕ್ಕೆ ಬರುತ್ತದೆ. ಮುಕ್ತಪ್ರವೇಶವಿಲ್ಲದ ಗ್ರಂಥಾಲಯಗಳಲ್ಲಿ ಓದುಗನು ಗ್ರಂಥಸೂಚಿಯನ್ನು ನೋಡಿ ತನಗೆ ಬೇಕಾದ ಗ್ರಂಥದ ಹೆಸರನ್ನು ಒಂದು ಚೀಟಿಯಲ್ಲಿ ಬರೆದು ಗ್ರಂಥಾಲಯ ಸಿಬ್ಬಂದಿಯ ಕೈಗೆ ಕೊಡುವ ಮೂಲಕ ಗ್ರಂಥಾಲಯದಿಂದ ಆ ಗ್ರಂಥಗಳನ್ನು ಎರವಲು ಪಡೆದು ಓದಲು ಒಯ್ಯುವ ಅವಕಾಶವಿರುತ್ತದೆ.

**೧೦.೭. ಗ್ರಂಥಗಳ ದುರಸ್ತಿ (Repair of books)**

ಗ್ರಂಥಗಳು ಗ್ರಂಥಾಲಯದ ಮಹತ್ವದ ಆಸ್ತಿಗಳು ಜ್ಞಾನದ ರಕ್ಷಣೆಗಾಗಿ ಜ್ಞಾನ ಅಭಿವೃದ್ಧಿಗಾಗಿ ಗ್ರಂಥಗಳನ್ನು ಬೇಗ ನಾಶವಾಗದಂತೆ ಕ್ರಿಮಿಕೀಟಗಳಿಂದ ತೇವಾಂಶದಿಂದ ಅತಿಯಾದ ಉಷ್ಣತೆ ಮತ್ತು ಶೀತಗಳಿಂದ ರಕ್ಷಿಸಲು ಗ್ರಂಥಗಳಿಗೆ ಸಂರಕ್ಷಣೆಯ ಕಾರ್ಯವನ್ನು ಕೈಗೊಳ್ಳಬೇಕು. ಗ್ರಂಥಗಳನ್ನು ರಿಪೇರಿಯ ಅವಶ್ಯಕತೆಗಳು.

೧. ಗ್ರಂಥ ಹಾಳಾಗುವುದನ್ನು ಹಾಗೂ ಹರಿಯುವುದನ್ನು ತಪ್ಪಿಸಲು ಗ್ರಂಥಕ್ಕೆ ಹೊಸ ಬೈಂಡಿಂಗ್ ಹಾಕಿ ಓದುಗರ ಲಕ್ಷ್ಯ ಪಡೆಯುವಂತೆ ಮಾಡಬೇಕು.

೨. ದುರ್ಬಲವಾದ ಮತ್ತು ನಾಶವಾಗುವ ದಾಖಲಾತಿಗಳನ್ನು ರಕ್ಷಿಸುವದು.

೩. ಓದುಗನಿಗೆ ಓದುವಲ್ಲಿ ಆಸಕ್ತಿ ಬರುವಂತೆ ಮಾಡುವುದು.

೪. ಗ್ರಂಥಗಳನ್ನು ತೊಗಲಿನ ಹೊದಿಕೆ, ಬಟ್ಟೆಯ ಹೊದಿಕೆ, ಕಾಗದದ ಬೈಂಡಿಂಗ್ ಹೀಗೆ ಗ್ರಂಥಗಳನ್ನು ಬಾಹ್ಯರೂಪದಲ್ಲಿ ಸಂರಕ್ಷಿಸಲು ಸಹಾಯಕವಾಗುತ್ತದೆ.

**೧೦.೮. ದಾಸ್ತಾನು ಪರಿಶೀಲನೆ (Stock Verfication)**

ಕೆಲವು ಗ್ರಂಥಗಳು ಕಳೆದು ಹೋಗಿದ್ದರೆ ಗ್ರಂಥಾಲಯದ ಸೇವೆಗೆ ಸಮಸ್ಯೆಯಾಗದಂತೆ ಅವುಗಳ ಸ್ಥಾನದಲ್ಲಿ ಹೊಸ ಗ್ರಂಥಗಳನ್ನು ಸೇರಿಸುವದು. ಗ್ರಂಥಾಲಯದ ದಾಖಲೆ ಗ್ರಂಥಗಳನ್ನು ನಿಯಮಿತವಾಗಿ

ಪರಿಶೀಲಿಸುವುದರಿಂದ ಸಾಧ್ಯವಾಗುತ್ತದೆ. ಕಾರ್ಯಸೇವೆಯಲ್ಲಿನ ತೊಂದರೆಗಳನ್ನು ನಿವಾರಿಸಿಕೊಂಡು ಹೊಸ ರೀತಿಯ ರಾಜಿಸೂತ್ರ ಕಂಡುಕೊಳ್ಳುವುದೇ ಗ್ರಂಥಾಲಯ ದಾಸ್ತನು ಗ್ರಂಥಗಳ ಸಂರಕ್ಷಣೆಯಲ್ಲಿ ಮಹತ್ವವನ್ನು ಪಡೆದುಕೊಂಡಿದೆ.

೧. ಕಳೆದು ಹೋದ ಗ್ರಂಥಗಳ ವಿವರ ತಿಳಿಯುತ್ತದೆ.

೨. ಗ್ರಂಥ ಸೂಚೀಕರಣವನ್ನು ನವೀಕರಿಸಲು ಸಹಾಯ ಮಾಡುತ್ತದೆ.

೩. ಕಳೆದು ಹೋದ ಗ್ರಂಥಗಳ ಸ್ಥಾನದಲ್ಲಿ ಹೊಸ ಗ್ರಂಥಗಳನ್ನಿಡಲು ಸಾಧ್ಯವಾಗುತ್ತದೆ.

೪. ಗ್ರಂಥಾಲಯದ ಗ್ರಂಥಗಳ ಸಂಖ್ಯೆ ತಿಳಿಯುವುದು ಕಳೆದು ಹೋದ ಗ್ರಂಥಗಳ ಕುರಿತು ವಿವರಣೆ

೫. ಗ್ರಂಥಾಲಯ ಅಧಿಕಾರಿಗಳಿಗೆ ಯಾವುದೇ ವಿಷಯದ ಜನಪ್ರಿಯತೆಯನ್ನು ಮನವರಿಕೆ ಮಾಡಿಕೊಡುತ್ತದೆ. ಏಕೆಂದರೆ ಬೇಡಿಕೆಯಲ್ಲಿರುವ ಗ್ರಂಥಗಳೆಲ್ಲ ಕಳೆದುಹೋಗುವದು ಹೆಚ್ಚು.

ಎರಡು ಮಹಾಯುದ್ಧಗಳ ಪರಿಣಾಮ ಪಾಶ್ಚಾತ್ಯ ರಾಷ್ಟ್ರಗಳ ಅನೇಕ ಗ್ರಂಥಾಲಯಗಳಲ್ಲಿನ ಗ್ರಂಥಗಳು ಆಪತ್ತಿಗೆ ಒಳಗಾದವು. ಈ ಆಪತ್ತಿನಿಂದ ಗ್ರಂಥಗಳ ಸಂರಕ್ಷಣೆಗಾಗಿ ಕಂಪ್ಯೂಟರ್ ಆವಿಷ್ಕಾರಗಳಾದ Micro film, Micro - fiche ಹಾಗೂ Micro - card ರೂಪಗೊಂಡವು. ಕೋಟಿಗಟ್ಟಲೆ ಗ್ರಂಥಗಳನ್ನು ಕಡಿಮೆ ಸ್ಥಳಾವಕಾಶದಲ್ಲಿ ಹೆಚ್ಚು ಸುರಕ್ಷಿತವಾಗಿ ಸಂಸ್ಕರಿಸಬಹುದಾಗಿದೆ. ಗ್ರಂಥಾಲಯದಲ್ಲಿರುವ ಗ್ರಂಥಗಳಲ್ಲಿ ಅಡಕವಾದ ಜ್ಞಾನದ ಸಂಗ್ರಹವನ್ನು ಮ್ಯಾಗ್‌ನೆಟಿಕ್ ಟೇಪುಗಳಲ್ಲಿ ಮತ್ತು ಚಕ್ರಗಳ ಮೂಲಕ ಕಂಪ್ಯೂಟರ್‌ಗಳಲ್ಲಿ ಸಂಗ್ರಹಿಸಿಟ್ಟು ಬೇಕಾಗುವ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಪಡೆಯಬಹುದು.

ನಿಮಗೆ ಬೇಕಾದ ಗ್ರಂಥ ನಿಮ್ಮ ಆ ಗ್ರಂಥಾಲಯದಲ್ಲಿ ಇಲ್ಲದಿದ್ದರೇ ಅದು ದೇಶದ ಅಥವಾ ವಿಶ್ವದ ಯಾವುದೇ ಮೂಲೆಯ ಗ್ರಂಥಾಲಯದಲ್ಲಿದ್ದರೂ ಅದನ್ನು ನಿಮ್ಮ ಸಲುವಾಗಿ ಎರವಲಾಗಿ ತಂದು ಒದಗಿಸಲಾಗುತ್ತದೆ. ಯಾವುದಾದರೊಂದು ಮಹತ್ವದ ಗ್ರಂಥದ ಕೆಲವು ಪುಟಗಳಾಗಲಿ, ಕೆಲವು ಅಧ್ಯಾಯಗಳಲ್ಲಿನ ಮಾಹಿತಿಯನ್ನು ಅಥವಾ ನಶಿಸುತ್ತಿರುವ (ಅಳಿವಿನಂಚಿನಲ್ಲಿರುವ) ಅತ್ಯಮೂಲ್ಯವಾದ ಹಸ್ತಪ್ರತಿಯ ಜ್ಞಾನವನ್ನು ಪಡೆಯಲು "Micro - film" ಮೂಲಕ ಫೋಟೋ ಪ್ರತಿಯ ಮೂಲಕವಾಗಿಯಾಗಲಿ ಇಲ್ಲವೆ ತಕ್ಷಣ ಯಥಾಪ್ರತಿ (facsimile) ದೂರ ಮುದ್ರಣ ಸೌಕರ್ಯದ ಮುಖಾಂತರವಾಗಲೀ ತರಿಸಿಕೊಳ್ಳಲಾಗುತ್ತದೆ. ಹೀಗಾಗಿ ಗ್ರಂಥಾಲಯಗಳು ಮನರಂಜನ ತಾಣವಾಗಿ ಪ್ರಯೋಗಾಲಯವಾಗಿ ಜ್ಞಾನಕೇಂದ್ರವಾಗಿ ಕೃಷಿಯಿಂದ ಹಿಡಿದು ವಿಜ್ಞಾನ ತಂತ್ರಜ್ಞಾನಗಳವರೆಗೂ ಜ್ಞಾನವನ್ನು ಪಸರಿಸುವ ಜ್ಞಾನವನ್ನು ಸಂರಕ್ಷಿಸುವ ಸಂವರ್ಧಿಸುವ ಮತ್ತು ಉತ್ಪಾದನೆ ಮರುಉತ್ಪಾದನೆಯಂತಹ ಕಾರ್ಯಗಳು ಜರುಗುತ್ತಿರುತ್ತವೆ.

### ೧೦.೯. ವಿದ್ಯುನ್ಮಾನ ಗ್ರಂಥಾಲಯ (Digital Library)

ಗ್ರಂಥಾಲಯ ಮಾಹಿತಿ ವ್ಯವಸ್ಥೆಯಲ್ಲಿ ವಿದ್ಯುನ್ಮಾನ ಗ್ರಂಥಾಲಯ ವ್ಯವಸ್ಥೆ ಆಧುನಿಕ ಆವಿಷ್ಕಾರದ ಪ್ರತೀಕವಾಗಿದೆ. ಗ್ವಾಲಿಯರ್‌ನ ವಿಶ್ವವಿದ್ಯಾಲಯದಲ್ಲಿ ಡಾ. ಎಸ್.ಕೆ. ವರ್ಮರವರು ತಂತ್ರಜ್ಞರ ಸಭೆಯಲ್ಲಿ

Digital Library ಎನ್ನುವುದು ಗೋಡೆ ಮತ್ತು ಕಾಗದ ರಹಿತ ಗ್ರಂಥಾಲಯ ಎಂದು ಕರೆದಿದ್ದಾರೆ. ಇಲ್ಲಿ ಗ್ರಂಥಗಳನ್ನು ಕಂಪ್ಯೂಟರೀಕರಣಗೊಳಿಸಿ ಅದಕ್ಕೆ ತನ್ನದೇ ಆದ ಒಂದು ಇಂಟರ್‌ನೆಟ್ ವಿಳಾಸವನ್ನು ನೀಡಲಾಗುತ್ತದೆ. ತಿಳಿಸಿದಂತಹ ವಿಳಾಸವನ್ನು ನಾವು ಇಂಟರ್‌ನೆಟ್ ಮೂಲಕ ಸಂಪರ್ಕಿಸುವುದರಿಂದ ಮೊದಲು ನಮಗೆ ಗ್ರಂಥಗಳ ಮೂಲಕ ಮಾಹಿತಿಯು ದೊರೆಯುತ್ತದೆ. ನಮಗೆ ಯಾವ ಗ್ರಂಥದ ಅವಶ್ಯಕತೆಯಿದೆಯೋ ಆ ಗ್ರಂಥವನ್ನು ಓದಬಹುದು ಅಲ್ಲದೇ ಆ ಗ್ರಂಥದ ಪ್ರತಿಗಳನ್ನು ತೆಗೆದುಕೊಳ್ಳಬಹುದಾಗಿದೆ. ಒಂದೇ ವಿಳಾಸಕ್ಕೆ ಲಕ್ಷಾಂತರ ಗ್ರಂಥಗಳನ್ನು ಪಡೆಯುವ ಅವಕಾಶವಿದೆ. ಉದಾ: The British library U.K, The national diet library Japan, The library of congress USA etc.

ಭಾರತದಲ್ಲಿ ವಿದ್ಯುನ್ಮಾನ ಗ್ರಂಥಾಲಯ (Digital Library in India) ಜನವರಿ ತಿಂಗಳು ೧೮, ೧೯, ೨೦ ೧೯೯೬ ನೇ ವರ್ಷದಲ್ಲಿ (Society for Information Science) ರವರು ಆ ಸಂಸ್ಥೆಯ ೧೫ನೇ ವಾರ್ಷಿಕ ಚರ್ಚೆಯಲ್ಲಿ ವಿದ್ಯುನ್ಮಾನ ಗ್ರಂಥಾಲಯ ಕುರಿತು ವಿಚಾರ ಸಂಕಿರಣದಲ್ಲಿ ವಿವಿಧ ೩೧ ಜನ ತಜ್ಞರು ಈ ವಿಷಯವಾಗಿ ಪತ್ರಿಕೆಗಳನ್ನು ಮಂಡಿಸಿದರು. ಇವರು ಭಾರತದಲ್ಲಿ ವಿದ್ಯುನ್ಮಾನ ಗ್ರಂಥಾಲಯದ (Digital Library) ಅವಶ್ಯಕತೆಯ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡಿದ್ದಾರೆ. Indian Institute of Science ಇವರು ಒಂದು ವಿದ್ಯುನ್ಮಾನ ಗ್ರಂಥಾಲಯವನ್ನು ಸ್ಥಾಪಿಸಿದರು. National Informatics Centre All India Institute of Medical Science - New Delhi, National Institute of Medical Health and neero Science - Bangalore.

**೧೦.೯.೧. ವಿದ್ಯುನ್ಮಾನ ಗ್ರಂಥಾಲಯದ ಉದ್ದೇಶಗಳು**(Objectives Digital Library)

೧. ಶೀಘ್ರ ಮಾಹಿತಿಯನ್ನು ಒದಗಿಸುತ್ತದೆ.

೨. ಹಣದ ಅಪವ್ಯಯವನ್ನು ತಡೆಯುವುದು.

೩. ಹೊಸ ಜ್ಞಾನವನ್ನು ನೇರವಾಗಿ ದರ್ಶನ ಮಾಡುತ್ತದೆ.

೪. ಗ್ರಂಥಗಳ ಮತ್ತು ಮಾಹಿತಿಯ ಹುಡುಕಾಟಕ್ಕೆ ಕಾಲಹರಣವಾಗುವುದನ್ನು ತಡೆಯುವುದು.

೫. ಏಕಕಾಲದಲ್ಲಿ ಒಂದೇ ಮಾಹಿತಿಯನ್ನು ಹಲವಾರು ಓದುಗರಿಗೆ ತಲುಪುವಂತೆ ಮಾಡುವುದು.

ಗ್ರಂಥಾಲಯದಲ್ಲಿ ವಿದ್ಯುನ್ಮಾನ ಅಳವಡಿಸುವುದರಿಂದ ಗ್ರಂಥಾಲಯ ಸಿಬ್ಬಂದಿಗಳ ವೆಚ್ಚವನ್ನು ತಡೆಯಬಹುದು. ಮಾಹಿತಿ ಹಂಚಿಕೆ, ಪ್ರಸ್ತುತ ಹಾಗೂ ಸಂಪೂರ್ಣ ದತ್ತಾಂಶದಿಂದ ಕೂಡಿದ ಮಾಹಿತಿಯನ್ನು ಒದಗಿಸುತ್ತದೆ. ಕಡಿಮೆ ವೆಚ್ಚ ಮತ್ತು ಹೆಚ್ಚು ದಕ್ಷತೆಯಿಂದ ಕೂಡಿದ ಮಾಹಿತಿಯನ್ನು ಒದಗಿಸುತ್ತದೆ. ದಾಖಲೆಗಳನ್ನು ವೇಗವಾಗಿ ಒದಗಿಸುತ್ತದೆ. ಹೊಸ ಹೊಸ ವಿಷಯಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಕಡಿಮೆ ವೆಚ್ಚ ಮತ್ತು ಹೆಚ್ಚು ದಕ್ಷತೆಯಿಂದ ಕೂಡಿದ ಸಂಪರ್ಕ ಮಾಧ್ಯಮವಾಗಿದೆ. ಇಲ್ಲಿ ಕಾಗದ ಬಳಕೆ ಕಡಿಮೆ ಇರುವುದರಿಂದ ಪರಿಸರವನ್ನು ಸಂರಕ್ಷಣೆ ಮಾಡಬಹುದು.

ವಿದ್ಯುನ್ಮಾನ ಗ್ರಂಥಾಲಯ ಅಳವಡಿಕೆಯಿಂದ ಅನೇಕ ಸಮಸ್ಯೆಗಳು ಎದುರಾಗುವ ಸಾಧ್ಯತೆಯಿದೆ. ಇದು ತುಂಬಾ ವೆಚ್ಚದಾಯಕವಾಗಿದ್ದು, ಒಂದು ಗ್ರಂಥವನ್ನು ವಿದ್ಯುನ್ಮಾನ ಗ್ರಂಥವನ್ನಾಗಿ ಮಾರ್ಪಡಿಸಲು ಒಂದು ಗ್ರಂಥದ ೬ ಪಟ್ಟು ವೆಚ್ಚ ಹೆಚ್ಚಾಗುತ್ತದೆ. ಗ್ರಂಥಕಾರ, ಕೃತಿಯ ಹಕ್ಕು: ಗ್ರಂಥಕಾರರು ತಮ್ಮ ಕೃತಿಯ ಹಕ್ಕನ್ನು ನೀಡದೇ ಇರಬಹುದು ಮತ್ತು ಕಾನೂನುಗಳು ನಿಯಮಗಳು ವಿದ್ಯುನ್ಮಾನ ಗ್ರಂಥಾಲಯದ ಅಳವಡಿಕೆಯಲ್ಲಿ ಸಮಸ್ಯೆಯನ್ನು ಉಂಟುಮಾಡುತ್ತವೆ. ತಂತ್ರಜ್ಞಾನದ ತೊಂದರೆ; ಗಣಕಯಂತ್ರವನ್ನು ಅತಿಯಾಗಿ ಬಳಸುವುದರಿಂದ ಕೆಲವೊಮ್ಮೆ ಅಂತರ್‌ಜಾಲದ ತೊಂದರೆಯಿಂದಾಗಿ ದೊರಕದೇ ಇರುವ ಸಾಧ್ಯತೆ ಇದೆ. ಅಲ್ಲದೇ ನಾವು ಸಂಸ್ಕರಿಸಿದ ವಿದ್ಯುನ್ಮಾನ ಮಾಹಿತಿಯನ್ನು ಹಾಳಾಗದಂತೆ ನೋಡಿಕೊಳ್ಳುವುದು ಅಷ್ಟೇ ಕಷ್ಟಕರ ಕೆಲಸ. ಅಂದರೆ ಹಾರ್ಡ್‌ಡಿಸ್ಕ್, ಫ್ಲಾಪಿ ಡಿಸ್ಕ್ ಇವುಗಳಲ್ಲಿ ಸಂಸ್ಕರಿಸಿದ ಮಾಹಿತಿಗಳು ಹೆಚ್ಚುಕಾಲ ಗುಣಮಟ್ಟವನ್ನು ಕಾಯ್ದುಕೊಳ್ಳಲಾರವು. ಕಾಲಮಾನದ ಅನುಗುಣವಾಗಿ ಜ್ಞಾನ ಸಂರಕ್ಷಣೆಯಲ್ಲಿ ಅನೇಕ ಆವಿಷ್ಕಾರವಾಗಿದ್ದು ಜಾಗತಿಕ ಸಂದರ್ಭದಲ್ಲಿ ಕ್ಷಣಾರ್ಧದಲ್ಲಿ ಮಾಹಿತಿಯನ್ನು ಪಡೆಯಬೇಕೆಂಬ ಮನಸ್ಥಿತಿ ಹೊಂದಿದ ಓದುಗರಿಗೆ ಕಂಪ್ಯೂಟರ್ ತಂತ್ರಜ್ಞಾನದ ಡಿಜಿಟಲ್ ಗ್ರಂಥಾಲಯಗಳ ಬಳಕೆ ಅತ್ಯವಶ್ಯಕವಾಗಿದೆ ಹೀಗಾಗಿ ಕಾಲಮಾನಕ್ಕನುಗುಣವಾಗಿ (ಜ್ಞಾನ) ಹಸ್ತಪ್ರತಿ ಗ್ರಂಥಗಳ ಸಂರಕ್ಷಣೆ ಸಂವರ್ಧನೆಯಲ್ಲಿ ತಂತ್ರಜ್ಞಾನ ಬಳಕೆ ಅತೀವೇಗವಾಗಿ ಕಾರ್ಯನಿರ್ವಹಿಸುತ್ತಿದೆ.

ಗ್ರಂಥಾಲಯ ಸೇವೆ ಜ್ಞಾನದ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿವೆ. ಗ್ರಂಥಾಲಯಗಳು ಪ್ರತಿಯೊಬ್ಬ ಓದುಗರಿಗೆ ಜೀವನ ಪರ್ಯಂತ ಜ್ಞಾನವನ್ನು ನೀಡುವಲ್ಲಿ ಸಹಕಾರಿಯಾಗುವುದು, ಅವರ ಅಭಿರುಚಿಗನುಗುಣವಾಗಿ ಮಾಹಿತಿ ಪೂರೈಸುವುದು, ಓದುಗರ ಕರ್ತವ್ಯ ಮತ್ತು ಹೊಣೆಗಾರಿಕೆಗಳ ನಿರ್ವಹಣೆಗೆ ಸಮಸ್ಯೆಗಳ ನಿವಾರಣೆಗಾಗಿ ನೆರವಾಗುವುದಲ್ಲದೇ ಸಂಶೋಧಕರಿಗೆ ಸಂಶೋಧನ ಕಾರ್ಯದಲ್ಲಿ ಸಹಾಯ ಮಾಡುವುದು. ಓದುಗನ ಜೀವನದಲ್ಲಿ ತನ್ನ ವಿರಾಮ ಸಮಯವನ್ನು ಸದುಪಯೋಗಗೊಳಿಸಲು ಆತ್ಮಾವಲೋಕನ ತನ್ನತನವನ್ನು ರೂಪಿಸಿಕೊಳ್ಳುವ ವಿಚಾರಗಳನ್ನು ರೂಪಿಸಿಕೊಳ್ಳಲು ನೆರವಾಗುವ ಗ್ರಂಥಾಲಯಗಳು ಶೈಕ್ಷಣಿಕ, ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಮನರಂಜನಾ ನೆಲೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿವೆ.

"ಪುಸ್ತಕ ಓದುವ ಹವ್ಯಾಸ ಉಳ್ಳವನು ಎಲ್ಲಿ ಹೋದರೂ ಸಂತೋಷವಾಗಿರಬಲ್ಲ" – ಗಾಂಧೀಜಿ, "ಗ್ರಂಥವಿಲ್ಲದ ಕೋಣೆ ಆತ್ಮವಿಲ್ಲದ ದೇಹದಂತೆ" ಸಿಸಿರೊ, "ಉತ್ತಮ ಗ್ರಂಥಗಳು ನಾಡಿನ ಸಂಸ್ಕೃತಿಗೊಂದು ಪ್ರತೀಕ"– ಜವಾಹರಲಾಲ್ ನೆಹರು ಅವರ ಈ ಮೇಲಿನ ಮಾತುಗಳು ಗ್ರಂಥಗಳ ಮಹತ್ವವನ್ನು ಕುರಿತು ಹೇಳುತ್ತವೆ. ಯರವಲು, ಪರಾಮರ್ಶನ, ಪ್ರಲೇಖನ, ನಕಲು, ಪ್ರಚಲಿತ ಮಾಹಿತಿ, ವೃತ್ತ ಪತ್ರಿಕಾ ಕ್ಲಿಪಿಂಗ್, ಆಯ್ದ ಮಾಹಿತಿಯ ಪ್ರಸರಣ, ನಿರ್ದೇಶಿ ಮತ್ತು ಸಾರಾಂಶಸೂಚಿ, ಭಾಷಾಂತರ, ವಾಙ್ಮಯ ದರ್ಶಕ, ವ್ಯಕ್ತಿತ್ವ ವಿಕಾಸ, ಗ್ರಂಥಗಳ ಅಚ್ಚುಕಟ್ಟಾಗಿ ನಿರ್ವಹಿಸುತ್ತಿವೆ. ಗ್ರಂಥಾಲಯಗಳು ಯುಗದಿಂದ ಯುಗಕ್ಕೆ ಕಾಲದಿಂದ ಕಾಲಕ್ಕೆ ಸಂಸ್ಕೃತಿಯನ್ನು ಕೊಂಡೊಯ್ಯುವಂತಹ ಸಂಸ್ಥೆಯಾಗಿದ್ದು ಪ್ರಾಚೀನ ಕಾಲದಿಂದಲೂ ಸಂಸ್ಕೃತಿಯನ್ನು ಸಾರುವಂತಹ ಎಲ್ಲಾ ಪರಿಕರಗಳನ್ನು ಇಲ್ಲಿ ಸಂಗ್ರಹಿಸಿ ಸಂರಕ್ಷಿಸಿ ಸಂವರ್ಧಿಸಿ ಉತ್ಪಾದಿಸುವಲ್ಲಿ ಪ್ರಮುಖವಾಗಿದೆ.

**ಅಡಿಟಿಪ್ಪಣಿಗಳು**

೧. ಎನ್. ಕೊಟ್ರೇಶ ಉತ್ತಂಗಿ ಸಾಮಾಜಿಕ ಸ್ವಾಸ್ಥ್ಯ ಗ್ರಂಥಾಲಯ ಮತ್ತು ಮಠ ಮಂದಿರಗಳು, ಪುಟ.೧೩, ೧೯೯೮

೨. ಮಂಜುನಾಥ ನಿಂಗೋಜಿ ಗ್ರಂಥಾಲಯ ವಿಜ್ಞಾನ ಪುಟ.೦೨. ೨೦೦೪

೩. ಗ್ರಂಥಾಲಯ ನಡೆದು ಬಂದ ದಾರಿ ಪುಟ.೧೫, ೧೯೯೫

೪. ಬಿ.ಎಸ್. ಸಣ್ಣಯ್ಯ ಗ್ರಂಥ ಸಂರಕ್ಷಣೆ ಪುಟ.೪೬, ೧೯೭೧

೫. ಬಿ.ಎಸ್. ಸಣ್ಣಯ್ಯ ಗ್ರಂಥ ಸಂರಕ್ಷಣೆ ಪುಟ.೫೦, ೫೧, ೧೯೭೧

೬. ಬಿ.ಎಸ್. ಸಣ್ಣಯ್ಯ ಗ್ರಂಥ ಸಂರಕ್ಷಣೆ ಪುಟ.೬೭, ೧೯೭೧

೭. ಎಸ್.ಬಿ. ಯಾದವಾಡ ಕಂಪ್ಯೂಟರ್ ಶಿಕ್ಷಣ ಪೂರಕವಾಗಿ ಬಳಸಲಾಗಿದೆ.



ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ ಸಂಗ್ರಹ, ಸಂರಕ್ಷಣೆ ಮತ್ತು ಸಂವರ್ಧನೆ ಎನ್ನುವ ಪರಿಕಲ್ಪನೆಗಳು ಸಾವಯವ ಹಾಗೂ ಸಮಗ್ರತೆಯ ಅರ್ಥದಲ್ಲಿ ಬಳಕೆಯಾಗಿವೆ. ಅದೊಂದು ಬದುಕಿನ ತತ್ವವಾಗಿ ಹಾಸುಹೊಕ್ಕಾಗಿದೆ. ದಿನಬಳಕೆಯ ವಸ್ತುವಿನಿಂದ ಹಿಡಿದು ದೀರ್ಘಕಾಲಿಕ ಬಳಕೆಯ ವಸ್ತುಗಳ ಕಾಪಾಡುವಿಕೆಯ ಹಿಂದೆ ಒಂದು ಜೀವಪೋಷಕ ನೀತಿ ಇರುವುದು ಗಮನಾರ್ಹವಾದುದು.

ಗ್ರಂಥ ಎನ್ನುವ ಪರಿಕಲ್ಪನೆ ಕನ್ನಡದಲ್ಲಿ ಬಹಳ ಪ್ರಾಚೀನವಾದುದು. ಪುಸ್ತಕ, ಹೊತ್ತಿಗೆ, ಕವಳಿಗೆ, ಕಟ್ಟು, ಲೇಖನ ಹೀಗೆ ಅನೇಕಾರ್ಥಗಳಲ್ಲಿ ಬರಹದ ನೆಲೆಗಳನ್ನು ಗುರುತಿಸಲಾಗಿದೆ. ಆದರೆ ಮುದ್ರಣ ಮಾಧ್ಯಮದ ಮೂಲಕ ಗುರುತಿಸುವ ಗ್ರಂಥ/ ಪುಸ್ತಕ ಎನ್ನುವ ಪದಕ್ಕೆ ಮುದ್ರಿತವಾದುದು ಎನ್ನುವ ಸೀಮಿತಾರ್ಥವಿರುವುದು ಗಮನಾರ್ಹ. ಇದನ್ನು ಹೊರತುಪಡಿಸಿ ಗ್ರಂಥಸಂರಕ್ಷಣೆ ಎನ್ನುವುದನ್ನು ಇಲ್ಲಿ ಒಂದು ಅಖಂಡ ಜ್ಞಾನ ಸಂಸ್ಕೃತಿಯನ್ನಾಗಿ ಅರಿವಿನ ಸಂಸ್ಕೃತಿಯನ್ನಾಗಿ ಅರ್ಥಮಾಡಿಕೊಳ್ಳಲಾಗಿದೆ. ಆ ಮೂಲಕ ಪ್ರಾಚೀನ ಜ್ಞಾನ ಸಾಮಗ್ರಿಗಳಾದ ತಾಳೆಗರಿ, ಕಾಗದ, ಕೋರಿಕಾಗದ, ಭೂರ್ಜ್ವಪತ್ರ, ಮಸಿ, ಲಿಪಿಕಾರ ಇವೆಲ್ಲವುಗಳನ್ನು ಒಂದು ಸಂಸ್ಕೃತಿ ಸಂವರ್ಧನಾ ನೆಲೆಗಳ್ನಾಗಿ ಪರಿಭಾವಿಸಲಾಗಿದೆ. ಇದರಿಂದ ಒಟ್ಟು ಅಧ್ಯಯನದಲ್ಲಿ ಈ ಕೆಳಕಂಡ ಫಲಿತಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ.

೧. ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆ ಎನ್ನುವ ಚಟುವಟಿಕೆಗಳು ಹೆಚ್ಚಾಗಿ ಬರಹದ ನಂತರದ ಅಥವಾ ಬರಹಗೊಂಡ ಪಠ್ಯಗಳ ಅಥವಾ ಮಾಧ್ಯಮದ ಸಂರಕ್ಷಣೆ ಎನ್ನುವ ಸೀಮಿತಾರ್ಥದಲ್ಲಿ ಬಳಕೆಗೊಂಡಿದ್ದು ಕನ್ನಡದ ಸಂದರ್ಭದಲ್ಲಿ ಕಾಣುತ್ತದೆ. 'ಕಂಜರ್‌ವೇಷನ್' ಎನ್ನುವ ಆಂಗ್ಲಪದದ ಮೂಲಕ ಹುಟ್ಟಿಕೊಂಡ ವಸ್ತು ಸಂಗ್ರಹಾಲಯ, ಅಥವಾ ಲೈಬ್ರರಿ ಕಲ್ಪನೆಗಳು ಗತದ ಪಳಿಯುಳಿಕೆಗಳನ್ನು ವಸ್ತುರೂಪಿಯಾಗಿ ನಾಲ್ಕು ಗೋಡೆಗಳ ಮಧ್ಯದಲ್ಲಿ ತಕ್ಕ ತಾಂತ್ರಿಕ ಹಾಗೂ ರಾಸಾಯನಿಕಗಳ ಬಲದಿಂದ ಭೌತಿಕವಾಗಿ ಹಾಗೂ ನಿರ್ಭಾವುಕವಾಗಿ ಸಂಗ್ರಹಿಸಿಡುವ ಜಾಗಗಳಾಗಿವೆ.

ಆದರೆ ಕನ್ನಡ ಸಾಂಸ್ಕೃತಿಕ ಮನಸ್ಸು ಇದಕ್ಕಿಂತ ಭಿನ್ನವಾದ ಹಾಗೂ ಜೀವಂತವಾದ ಸಂಗ್ರಹ, ಸಂರಕ್ಷಣೆಯ ಕ್ರಮಗಳನ್ನು ಕಾಪಿಟ್ಟುಕೊಂಡು ಬಂದಿರುವುದು ವಿಶೇಷ. ಸಂಗ್ರಹ ಸಂರಕ್ಷಣೆ ಎನ್ನುವುದು

ಇಲ್ಲಿ ಬರೀ ಕಾಯ್ದಿಟ್ಟುಕೊಳ್ಳುವ ನಿರ್ಜೀಯ ಸ್ಥಿತಿಯಲ್ಲ. ಅದೊಂದು ಸೃಷ್ಟಿಶೀಲ ಪ್ರಕ್ರಿಯೆಯಾಗಿತ್ತು ಎನ್ನುವ ವಿಶೇಷತೆಯನ್ನು ಈ ಅಧ್ಯಯನವು ಕಂಡುಕೊಂಡಿದೆ.

೨. ಬ್ರಿಟಿಷ್ ಪ್ರಣೀತ ಈ ಸಂರಕ್ಷಣೆ ಎನ್ನುವ ಪದ್ಧತಿ ಮೊದಲು ಅರಣ್ಯ ಸಂರಕ್ಷಣೆಯ ಕಾಯ್ದೆ ರೂಪದಲ್ಲಿ ೧೮೦೬ರಲ್ಲಿ ಬಂದಿದ್ದು ಎನ್ನುವುದು ಕುತೂಹಲಕರವಾದುದು. ವಸಾಹತುಶಾಹಿಯ ಈ ಅರಣ್ಯ ನೀತಿಯ ಹಿಂದೆ ಕಾಡುಗಳ ಸಂರಕ್ಷಣೆ ಮಾಡಬೇಕೆನ್ನುವ ಉದ್ದೇಶಕ್ಕಿಂತ ಅದರ ವ್ಯಾಪಾರಿ ನೀತಿ ಪ್ರಧಾನವಾಗಿತ್ತು.

೩. ಕಾಡಿನ ಜೀವಜಾಲದ ಸಂವರ್ಧನಶೀಲತೆಯ ವೈಶಿಷ್ಟ್ಯವನ್ನು ಇದು ಮರಮುಟ್ಟುಗಳನ್ನಾಗಿ ವ್ಯಾಪಾರಿ ಪ್ರಯೋಜನಕ್ಕೆ ಸೀಮಿತಗೊಳಿಸಿತು. ಜೀವಜಾಲದಲ್ಲಿ ಅಸ್ಥಿರತೆಯನ್ನು ತಂದುಹಾಕಿದ್ದಲ್ಲದೆ ಸ್ವಾವಲಂಬಿಯೂ ತನ್ನನ್ನು ತಾನು ಪುನರುತ್ಪಾದನೆ ಗೊಳಿಸಿಕೊಳ್ಳುವ ಪ್ರಕೃತಿಯನ್ನು ಅದರ ಸ್ಥಳೀಯ ಅರಿವನ್ನು ವಿನಾಶದ ಅಂಚಿಗೆ ದೂಡಿತು. ಇಂಥ ವಸಾಹತು ಮಾದರಿಗಳು ಸ್ಥಳೀಯ ಜ್ಞಾನದ ನೆಲೆಗಳನ್ನು ಹೇಗೆ ನಿರ್ಬಲಗೊಳಿಸಿದವು ಎನ್ನುವುದು ಅಧ್ಯಯನದಲ್ಲಿ ಗುರುತಿಸಲಾಗಿದೆ.

೪. ಪಾರಂಪರಿಕ ಸಂಗ್ರಹ, ನಿರ್ವಹಣೆ ಹಾಗೂ ಉತ್ಪಾದಿತ ಮೌಲ್ಯಗಳಲ್ಲಿ ಹೆಣ್ಣಿಗೆ ಪ್ರಧಾನ ಪಾತ್ರವಿತ್ತು. ಅವು ಪ್ರಕೃತಿಯ ಪರವಾಗಿದ್ದವು. ಹೆಣ್ಣೆ ಅಲ್ಲಿ ಸಂಗ್ರಹ, ಸಂರಕ್ಷಣೆ, ನಿರ್ವಹಣೆ ಹಾಗೂ ಸಂವರ್ಧನೆಗೆ ಕಾರಣಳಾಗಿದ್ದಳು. ಇದಕ್ಕೆ ಜ್ಞಾನವನ್ನು ದೈವೀಕರಿಸಿ ಸರಸ್ವತಿ ರೂಪದಲ್ಲಿ ಮೂರ್ತಿಕರಿಸಿಕೊಂಡಿದ್ದು ಉತ್ತಮ ಉದಾಹರಣೆಯಾಗಿದೆ. ಬಹುಮುಖಿ ಪ್ರಯೋಜನಗಳಿಗೆ ಒದಗುವಂತೆ ಅರಿವಿನ ಸಮಗ್ರತೆಯನ್ನು ಉತ್ಪಾದಿಸುವ, ನಿರ್ವಹಿಸುವ ಹಾಗೂ ಮೂಲಭೂತ ಅಗತ್ಯಗಳನ್ನು ಈಡೇರಿಸುವ ಒಂದು ಸೃಜನಶೀಲ ಗುಣ ಸರಸ್ವತಿಯ ಪರಿಕಲ್ಪನೆಯಲ್ಲಿದೆ. ಗಂಡಸರು ಯಜಮಾನಿಕೆಯ ಅರಣ್ಯನೀತಿಯ ಅರ್ಥ ಹಾಗೂ ಅಳತೆಗಿಂತ ಭಿನ್ನವಾದ ಪರಿಕಲ್ಪನೆಯಿದು. ಇಂಥ ಜೀವಜಾಲದ, ವಿಕಾಸಮುಖಿಯಾದ ಸಂಸ್ಕೃತಿಯೊಂದು ನಿಕೃಷ್ಟಗೊಂಡು ವ್ಯಾಪಾರಿ ಅರಣ್ಯ ನೀತಿಗೆ ಮುಟ್ಟಿದಾಗ ಅದು ತನ್ನ ಸಾವಯವ ಸಂಬಂಧದಿಂದ ಹೇಗೆ ದೂರವಾಗುತ್ತದೆ ಎನ್ನುವ ತತ್ವವನ್ನು ಇಲ್ಲಿ ಗ್ರಹಿಸಲಾಗಿದೆ.

೫. ಸಾಂಪ್ರದಾಯಿಕ ಸಮುದಾಯಗಳ ಬುಡಕಟ್ಟು, ಸಮೂಹಗಳಿಗೆ ಹೆಂಗಸರಿಗೆ ಕಾಡುಗಳೆಂದರೆ ನೀರು, ಔಷಧಿ ಸಸ್ಯ, ಮೇವು, ಉರುವಲು, ನಾರುಬೇರು ಇವೆಲ್ಲ ಜೀವವಿಕಸನ ಪ್ರವೃತ್ತಿಯುಳ್ಳವಾಗಿರುತ್ತವೆ. ವೈಜ್ಞಾನಿಕ ಎನಿಸುವ ವ್ಯವಹಾರದ ಭಾಗವಾದ ಸಂರಕ್ಷಣಾ ನಿಯಮಗಳಿಗೆ ಇಂಥ ಜೈವಿಕ ಸಂಗತಿಗಳೆಲ್ಲವೂ ನಿರುಪಯುಕ್ತವಾದಂಥವು. ಈ ನಿರುಪಯುಕ್ತ ನೆಲೆಗಳೇ ಇಂದಿನ ವೈಜ್ಞಾನಿಕ ಸಂರಕ್ಷಣಾ ಮಾದರಿಗಳಾಗಿರುವುದು ಗಮನಾರ್ಹ.

೬. ಕನ್ನಡ ಸಂಸ್ಕೃತಿಯಲ್ಲಿ ಸಂರಕ್ಷಣೆ ಎನ್ನುವುದು ವಸ್ತು ಅಥವಾ ಲೇಖನದ ಸ್ವರೂಪ ನಿರ್ಧಾರವಾದ ಮೇಲೆ ನಡೆಯುವ ಪ್ರತ್ಯೇಕ ಚಟುವಟಿಕೆಯಾಗಿಲ್ಲ. ಅದು ವಸ್ತುವಿನ ಅಥವಾ ಅರಿವಿನ ರೂಪದೊಳಗಡೆಯೇ ಅಂತರ್ವಾಹಿನಿಯಾದ ಸೃಜನಶೀಲನೆಲೆ ಎನ್ನುವುದನ್ನು ಬಹುಮುಖ್ಯವಾಗಿ ಕಂಡುಕೊಳ್ಳಲಾಗಿದೆ. ಉದಾ:

ಒಂದು ತಾಳೆಗರಿ ಅಥವಾ ಕಾಗದ ಉತ್ಪಾದನೆಯಾಗುವ ಹೊತ್ತಿನಲ್ಲಿಯೇ ಅದರ ದೀರ್ಘಾಯುಷ್ಯದ ಗುಣಾತ್ಮಕ ಗುಣಲಕ್ಷಣಗಳೂ ಉತ್ಪಾದಿತವಾಗಿರುತ್ತವೆ. ತಾಳೆಗರಿಯನ್ನು ಮರದಿಂದ ಬೇರ್ಪಡಿಸುವ ಹಂತದಿಂದ ಅದನ್ನು ಬರವಣಿಗೆಗೆ ಒಪ್ಪ ವಾಗಿಸುವವರೆಗೂ ಅನೇಕ ಹಂತಗಳಲ್ಲಿ ಅದರ ಸಂರಕ್ಷಣೆ ನಡೆಯುತ್ತಿರುತ್ತದೆ ಎನ್ನುವುದು ಬಹುಮುಖ್ಯ ವಿಚಾರ.

೬. ಇನ್ನು ಪಠ್ಯದ ಸಂರಕ್ಷಣಾ ವಿಚಾರದಲ್ಲಿ ಹಲವು ರೀತಿಯ ಪ್ರಯೋಗಗಳು ಕನ್ನಡ ಸಂಸ್ಕೃತಿಯಲ್ಲಿ ನಡೆದಿದ್ದನ್ನು ಕಾಣಬಹುದಾಗಿದೆ. ಕನ್ನಡ ಪಠ್ಯಗಳನ್ನು ಪ್ರಭುತ್ವ ಹಾಗೂ ಧರ್ಮದ ನೆಲೆಗಳಿಂದ ಹೊರತಾಗಿ ನೋಡುವ ಬಹುದೊಡ್ಡ ಮಾನಸಿಕ ಸ್ಥೈರ್ಯವನ್ನು ವಿಭಿನ್ನ ದೃಷ್ಟಿಕೋನಗಳನ್ನು ಈ ಸಂರಕ್ಷಣಾ ನೆಲೆಗಳು ಬೆಳೆಸಬಲ್ಲವು ಎನ್ನುವುದನ್ನು ಈ ಅಧ್ಯಯನ ಕಂಡುಕೊಂಡಿದೆ.

೭. ಕನ್ನಡದ ಪಠ್ಯಗಳು ಮೌಖಿಕವಾಗಿ ಹಾಗೂ ಲಿಖಿತವಾಗಿ ಪುನರುತ್ಪಾದನೆಯಾಗುತ್ತಲೇ ಬಂದಿರುವುದು ಇತಿಹಾಸ. ಈ ಪುನರುತ್ಪತ್ತಿ ಎನ್ನುವುದು ಕನ್ನಡ ಸಂಸ್ಕೃತಿಯ ವೈಶಿಷ್ಟ್ಯಗಳಲ್ಲೊಂದು. ಒಂದು ಪುಸ್ತಕ ಅಥವಾ ಪಠ್ಯ ಎನ್ನುವುದು ಇಲ್ಲಿ ತುಂಬ ಅಳ್ಳಕವಾಗಿರುವಂಥದ್ದು. ಕನ್ನಡದ ಪಠ್ಯಗಳೆಲ್ಲವೂ ಸ್ಥಿರಸಮಾಜದ ಉತ್ಪನ್ನಗಳಲ್ಲ. ಸ್ಥಿತ್ಯಂತರ ಸಮಾಜದ ಫಲಿತಗಳು. ಈ ಚಲನಶೀಲತೆಯೇ ನೂರಾರು ಲೌಕಿಕ ಕಾರಣಗಳಿಗಾಗಿ ಮರುಹುಟ್ಟು ಪಡೆಯಲು ಹಸ್ತಪ್ರತಿಗಳಿಗೆ ದಾರಿ ಮಾಡಿಕೊಟ್ಟಿತು. ಒಂದು ಬರಹದ ಸಂರಕ್ಷಣೆ ಒಂದು ಪರಂಪರೆಯ ಸಂರಕ್ಷಣೆ ಹಾಗೂ ವಿಕಾಸವಾಗಿ ಬೆಳೆದು ಬಂದ ಬಗೆಯನ್ನಿಲ್ಲಿ ದಟ್ಟವಾಗಿ ಗುರುತಿಸಲಾಗಿದೆ.

೮. ಒಂದು ಹಸ್ತಪ್ರತಿ ಅಥವಾ ಗ್ರಂಥ ಎನ್ನುವುದು ಭೌತಿಕವಾಗಿ ಹಾಗೂ ಬೌದ್ಧಿಕವಾಗಿ ನಿರ್ವಚನಗೊಂಡ ನೆಲೆಗಳನ್ನು ಅಕ್ಷರ ಜಗತ್ತಿನಿಂದ ಹೊರತಾದ ಅನುಭಾವಿಕ ನೆಲೆಗಳಿಂದ ಅರ್ಥಮಾಡಿಕೊಳ್ಳುವ ಮೂಲಕ ಪಠ್ಯದ ನಿರ್ಭಾವುಕ ಗುಣವನ್ನು ಮೀರುವ ಪ್ರಯತ್ನ ಮಾಡಲಾಗಿದೆ. ಒಂದು ಗ್ರಂಥದ ಮರುಬರಹ ಅಥವಾ ದಾನದ ಕ್ರಿಯೆ ಕೇವಲ ನಿಯಮವಾಗಿರದೆ ಅದೊಂದು ಸಂವರ್ಧನೆಮುಖಿ ಸಂಸ್ಕೃತಿ ಚಟುವಟಿಕೆಯಾಗಿತ್ತೆನ್ನುವುದನ್ನು ಸಾದರಪೂರ್ವಕವಾಗಿ ಕಂಡುಕೊಳ್ಳಲಾಗಿದೆ.

೯. ಸಾಂಪ್ರದಾಯಿಕ ನೆಲೆಗಳಿಂದ ಹಿಡಿದು ಇಂದಿನ ಡಿಜಿಟಲ್ ತಂತ್ರಜ್ಞಾನದ ಆವಿಷ್ಕಾರಗಳವರೆಗೂ ವಿವಿಧ ಹಂತಗಳಲ್ಲಿ ಈ ಗ್ರಂಥ ಸಂರಕ್ಷಣಾ ನೆಲೆಗಳ ವೈಚಾರಿಕ ವಿಶ್ಲೇಷಣೆಗಳನ್ನು ಮಾಡಲಾಗಿದೆ. ಆ ಮೂಲಕ ಎರಡೂ ಪದ್ಧತಿಗಳಲ್ಲಿರುವ ಇತಿ–ಮಿತಿಗಳನ್ನು ಕಂಡುಕೊಳ್ಳಲಾಗಿದೆ.

ಒಟ್ಟು ಮೇಲಿನ ಚರ್ಚೆಯ ಗ್ರಹಿಕೆ ಇಷ್ಟೇ. ಸಾವಯವ ಶೀಲವಾದ ಗ್ರಂಥ ಸಂಗ್ರಹ, ಸಂರಕ್ಷಣೆ ಹಾಗೂ ಸಂವರ್ಧನೆಯ ಸಾಂಪ್ರದಾಯಿಕ ಕ್ರಮಗಳಿಗೂ ವ್ಯವಹಾರ ಮತ್ತು ವಸ್ತು ರೂಪಿಯಾದ ವೈಜ್ಞಾನಿಕ ನಿರ್ವಹಣಾ ಶಾಸ್ತ್ರಗಳಿಗೂ ಇರುವ ವ್ಯತ್ಯಾಸಗಳನ್ನು ಪತ್ತೆ ಮಾಡಲಾಗಿದೆ. ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳಲ್ಲಿ ಹೆಣ್ಣಿಗೆ ಪ್ರಥಮಾದ್ಯತೆ ಇದ್ದರೆ ಆಧುನಿಕ ವಸ್ತುರೂಪಿಯಾದ ಸಂರಕ್ಷಣಾ ಕ್ರಮಗಳಲ್ಲಿ ಗಂಡು ಪ್ರಧಾನವಾಗಿರುತ್ತದೆ. ಇಂದು ಬಳಕೆಯಲ್ಲಿರುವ ವಸಾಹತು ಪ್ರಣೀತ ಹೆಚ್ಚಿನ ಸಂಗ್ರಹ ಸಂರಕ್ಷಣೆ

ಸಂವರ್ಧನೆಯಂಥ ತಿಳುವಳಿಕೆಗಳು ವ್ಯವಹಾರ ರೂಪಿಯಾದ ಜಡಪರಿಕಲ್ಪನೆಗಳೇ ಆಗಿವೆ. ಇಲ್ಲಿನ ಸಂಗ್ರಹಿತ ವಸ್ತುಗಳಿಗೂ ಸಂಗ್ರಹ ವಿಧಾನಗಳಿಗೂ ಯಾವುದೇ ಜೈವಿಕ ಸಂಬಂಧಗಳಿರುವುದಿಲ್ಲ. ಆದರೆ ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳಲ್ಲಿ ಒಂದಕ್ಕೊಂದು ಕರುಳ ಬಳ್ಳಿ ಸಂಬಂಧ ಹೊಂದಿರುವಂಥವು. ಅಲ್ಲಿ ಸಂರಕ್ಷಣೆ ಸಂವರ್ಧನೆ ಚಟುವಟಿಕೆಗಳು ಪ್ರತ್ಯೇಕವಲ್ಲ. ಜೀವಜಾಲದ ಸಹಜ ಗುಣಕ್ಕೂ ರಾಸಾಯನಿಕ ಮೂಲದ ಆಧುನಿಕ ಕ್ರಮಕ್ಕೂ ಪರಸ್ಪರ ಸಾಮ್ಯವೇ ಇಲ್ಲ. ಈ ಆಧುನಿಕ ರಾಸಾಯನಿಕಗಳು ಸಂಗ್ರಹಿತ ವಸ್ತುವಿನ ಅಸ್ಥಿಪಂಜರವನ್ನು ಒಂದು ತೋರಿಕೆಯ ವಸ್ತುಸಂಗ್ರಹಾಲಯದ ಪಳಿಯುಳಿಕೆ ರೂಪವಾಗಿ ಪ್ರಾಚೀನ ಅವಶೇಷಗಳಾಗಿ ಪರಿಗಣಿಸುತ್ತದೆ. ಜೀವಜಾಲದ ಹಂಗಿರುವ ಸಾಂಪ್ರದಾಯಿಕ ಕ್ರಮಗಳು ವಸ್ತು ಮತ್ತು ವ್ಯಕ್ತಿಯ ಬಳಕೆ ಸಾಮಗ್ರಿಗಳಲ್ಲಿ ಇಂಥ ಗ್ರಂಥ ಭಂಡಾರಗಳ ಪುಸ್ತಕ ಸಂಸ್ಕೃತಿ ಕೂಡ ಇಂದು ವಿದ್ಯಾರ್ಥಿಗಳಲ್ಲಿ ಶುಷ್ಕ ಓದಿನ ಚಟಬೆಳೆಸುತ್ತಿದೆಯೇ ಹೊರತು ಅರಿವಿನ ಚಟಬೆಳೆಸುತ್ತಿಲ್ಲ. ಇಂಥ ಜ್ಞಾನದ ಸಂಗ್ರಹ ಸಂರಕ್ಷಣೆ ಎನ್ನುವುದು ಮನುಷ್ಯನ ಜೀವಂತಿಕೆಗೆ ಆತನ ಅರಿವಿನ ವಿಸ್ತಾರಕ್ಕೆ ಹೃದಯ ಸಂಸ್ಕಾರಕ್ಕೆ ಕಾರಣವಾಗಬೇಕೆನ್ನುವುದೇ ಕನ್ನಡ ಸಂಸ್ಕೃತಿಯ ಬಹುಮುಖ್ಯ ವಿಚಾರವೆನ್ನುವುದನ್ನು ಈ ಅಧ್ಯಯನ ಸಾಬೀತ ಮಾಡಿದೆ.



# ಅನುಬಂಧಗಳು

## ಗ್ರಂಥಗಳು


೧. ಅಲ್ಬರ್ಟನ್‌ಗೌರ್ (ಮೂಲ) ಶ್ರೀನಿವಾಸ ಹಾವನೂರು ಮತ್ತು ಲಕ್ಷ್ಮೀನಾರಾಯಣ ಆರೋರಾ(ಅನು), ೨೦೦೩ ಪ್ರಾಚೀನ ಲೇಖನ ಸಾಮಗ್ರಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಕಲಬುರ್ಗಿ ಎಂ.ಎಂ, ೧೯೯೩, ಕನ್ನಡ ಹಸ್ತಪ್ರತಿಶಾಸ್ತ್ರ, ಸ್ನೇಹ ಪ್ರಕಾಶನ, ಬೆಂಗಳೂರು

೩. ಕಲಬುರ್ಗಿ ಎಂ.ಎಂ., ೧೯೭೩ ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಕಲಬುರ್ಗಿ ಎಂ.ಎಂ., ೨೦೦೬, ಸಂಸ್ಕೃತಿ– ವಿಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೫. ಕೃಷ್ಣರಾಯ ಅ.ನ., ೧೯೮೧, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ಪ್ರದೀಪ ಪ್ರಕಾಶನ, ನಂ.೫೦, ಕರ್ನಾಟಕ ಗೌ॥ ಸೆಕ್ರೆಟರಿಯೇಟ್ ಕಾಲೋನಿ, ವಿಜಯನಗರ, ಬೆಂಗಳೂರು.

೬ ಕೊಟ್ರೇಶ್ ಎನ್. ೧೯೯೮ ಸಾಮಾಜಿಕ ಸ್ವಾಸ್ಥ್ಯ ಗ್ರಂಥಾಲಯ ಮತ್ತು ಮಠಮಾನ್ಯಗಳು, ಚೆನ್ನ ಚೇತನ ಪ್ರಕಾಶನ, ಹಿರೇಕಲ್ಮಠ, ಹೊನ್ನಾಳಿ

೭ ಗೀತಾ ಬಿ.ಎಸ್., ೨೦೦೮, ಕರ್ನಾಟಕ ಸಾಂಸ್ಕೃತಿಕ ಸಂಘರ್ಷ ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೮. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್‌ಹೌಸ್, ಬೆಂಗಳೂರು

೯. ತಿಪ್ಪೇರುದ್ರಸ್ವಾಮಿ ಎಚ್., ೨೦೦೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಪ್ರಕಾಶನ, ಮೈಸೂರು

೧೦. ದೇವಿರಪ್ಪ ಎಚ್., ೧೯೭೭, ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೧. ದೇವುಡು, ೨೦೦೮, ಕರ್ನಾಟಕ ಸಂಸ್ಕೃತಿ, ದೇವುಡು ಪ್ರತಿಷ್ಠಾನ, ಬೆಂಗಳೂರು

೧೨. ನರಸಿಂಹಚಾರ್ಯ ಆರ್., ೨೦೦೫, ಸಂ.೨, ಕರ್ಣಾಟಕ ಕವಿಚರಿತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೩. ನಾಗರಾಜ್ ಡಿ.ಆರ್.,೨೦೦೨, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೪. ಡಿ.ವಿ.ಜಿ, ೧೯೬೯, ಸಂಸ್ಕೃತಿ, ಕಾವ್ಯಾಲಯ ಪ್ರಕಾಶನ, ಮೈಸೂರು

೧೫. ಪಾಟೀಲ ಬಿ.ಎಸ್., ೧೯೯೪ ವೀರಶೈವ ದರ್ಶನ ಸಾರ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ

೧೬. ಪೂಜಾರ ವ್ಹಿ.ಜಿ., ೧೯೯೧, ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು, ಪುಸ್ತಕ ಅಕಾಡೆಮಿ, ಕಲಬುರಗಿ

೧೭. ಬರಗೂರು ರಾಮಚಂದ್ರಪ್ಪ, ೧೯೮೯, ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ (ಉಪಸಂಸ್ಕೃತಿ ಮಾಲೆ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೮. ಬಗರಿ ಎನ್.ಡಿ, ೧೯೬೯, ಗ್ರಂಥಾಲಯ ನಡೆದು ಬಂದ ದಾರಿ, ಪುರೋಗಾಮಿ ಸಾಹಿತ್ಯ ಸಂಘ ಮಲ್ಲೇಶ್ವರಂ ೧೧ನೇ ಕ್ರಾಸ್, ಬೆಂಗಳೂರು

೧೯. ಬಸವರಾಜ ಕಲ್ಗುಡಿ ೧೯೮೮, ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೦. ಭಾನುಮತಿ ವೈ.ಸಿ.(ಸಂ), ೧೯೮೪, ಸಹ್ಯಾದ್ರಿಖಂಡ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೧. ಮಂಜುನಾಥ ನಿಂಗೋಜಿ, ೨೦೦೪, ಗ್ರಂಥಾಲಯ ವಿಜ್ಞಾನ, ವಿದ್ಯಾನಿಧಿ ಪ್ರಕಾಶನ, ಗದಗ

೨೨. ರಹಮತ್ ತರೀಕೆರೆ, ೨೦೦೯, ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ರಹಮತ್ ತರೀಕೆರೆ, ೨೦೦೮, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು

೨೪. ರವೀಂದ್ರನಾಥ ಕೆ., ೨೦೦೦, ಕನ್ನಡ ದಾಖಲು ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ರಾಜಪ್ಪ ದಳವಾಯಿ(ಸಂ), ೨೦೦೩, ಕನ್ನಡ ಸಾಹಿತ್ಯ ಕೋಶ, ಕದಿರು ಪ್ರಕಾಶನ, ಮೈಸೂರು

೨೬. ಲಿಂಗಣ್ಣ ಚಿ.ಸಿ(ಸಂ), ೨೦೦೮, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ

೨೭. ಲಕ್ಷ್ಮೀಪತಿ ಕೋಲಾರ, ೨೦೦೮, ಅಲ್ಲಮನ ಬಯಲಾಟ, ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು

೨೮. ವೀರಣ್ಣ ಸಿ., ೨೦೧೧, ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ ೨ ಮಧ್ಯಕಾಲೀನ ಸಾಹಿತ್ಯ ರಾಜಸತ್ತೆಯ ವಿಘಟನೆಯ ಕಾಲನವ ಕರ್ನಾಟಕ ಪ್ರಕಾಶನ, ಬೆಂಗಳೂರು

೨೯. ವೀರೇಶ ಬಡಿಗೇರ, ೨೦೦೮, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ವೀರೇಶ ಬಡಿಗೇರ, ೨೦೦೦, ಕನ್ನಡ ಹಸ್ತಪ್ರತಿಗಳು ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ವೀರೇಶ ಬಡಿಗೇರ, ೨೦೦೫, ಹಲಗೆ ಬಳಪ, ಮಯ ಪ್ರಕಾಶನ, ಕಮಲಾಪುರ

೩೨. ವೆಂಕಟೇಶ ಇಂದ್ವಾಡಿ(ಸಂ), ೨೦೦೩, ದೇವಚಂದ್ರನ ರಾಜಾವಳಿ ಕಥೆ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೩. ಶಿವಾನಂದ ವಿರಕ್ತಮಠ, ೧೯೭೮, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೪. ಶಿವಣ್ಣ ಎಸ್., ೧೯೯೪, ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು, ಲಿಂಗಾಯತ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

೩೫. ಶ್ರೀಮತಿ ಉಷಾ ಸುರೇಶ್, ತಾಳೆಗರಿಗಳು ಮತ್ತು ಕಾಗದ ದಾಖಲೆಗಳ ಸಂರಕ್ಷಣೆ ಏಕೆ? ಮತ್ತು ಹೇಗೆ? ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ವಿಧಾನಸೌಧ, ಬೆಂಗಳೂರು

೩೬. ಸಣ್ಣಯ್ಯ ಬಿ.ಎಸ್.,೧೯೭೧, ಗ್ರಂಥ ಸಂರಕ್ಷಣೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೩೭. ಸೀತಾರಾಮಯ್ಯ ಎಂ.ವಿ.(ಸಂ), ೨೦೧೧, ಶ್ರೀವಿಜಯ ಕೃತ ಕವಿರಾಜಮಾರ್ಗಂ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

೩೮. ಸಿದ್ಧಲಿಂಗಯ್ಯ, ೨೦೦೭, ಜನಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೯. ಹಳ್ಳಿಕೇರಿ ಎಫ್.ಟಿ. ಮತ್ತು ರವೀಂದ್ರನಾಥ ಕೆ., ೨೦೦೨, ದಶಕದ ಕನ್ನಡ ಸಾಹಿತ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೦. ಹಿರೇಮಠ ಬಿ.ಕೆ. ೧೯೯೨, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ, ಶ್ರೀ ಹಿರೇಮಠ ಕಸಬಾ ಜಂಬಗಿ, ತಾ.ಮುಧೋಳ ಜಿ. ಬಾಗಲಕೋಟ

## ಲೇಖನಗಳು


೧. ಅಮರೇಶ ನುಗಡೋಣಿ, ಲೇ: ಸಂಪಾದಕೀಯ ಮಾತು(ಕನ್ನಡ ಅಧ್ಯಯನ, ಸಂ. ಡಾ.ಅಮರೇಶ ನುಗಡೋಣಿ, ಸಂ.೧೪, ಸಂ.೧, ಜನವರಿ–ಜೂನ್ ೨೦೦೮) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಉಮೇಶ ಹಡಗಲಿ, ಲೇ: ತಾಳೆಗರಿ ಹಸ್ತಪ್ರತಿಗಳ ಆಪತ್ತು ಮತ್ತು ನಿವಾರಣಾ ಕ್ರಮಗಳು(ಹಸ್ತಪ್ರತಿ ಅಧ್ಯಯನ ಸಂ. ಡಾ. ವೀರೇಶ ಬಡಿಗೇರ ಸಂ.೬, ಸಂ.೧, ಜುಲೈ–ಡಿಸೆಂಬರ್ ೨೦೦೮ ಸಂ.೬, ಸಂ.೨, ಜನವರಿ–ಜೂನ್ ೨೦೦೯) ಪು.೪೬ ರಿಂದ ೫೪, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಖರಬಡೆ ಬಿ.ಎ(ಮೂಲ) ವಾಸುದೇವನ್ ಸಿ.ಎಸ್(ಅನು) ಲೇ: ಹಸ್ತಪ್ರತಿಗಳ ಹದಗೆಡುವಿಕೆಯ ಕಾರಣಗಳು ಮತ್ತು ಅದರ ನಿಯಂತ್ರಣ(ಹಸ್ತಪ್ರತಿ ಅಧ್ಯಯನ ಸಂ.ಡಾ.ವೀರೇಶ ಬಡಿಗೇರ ಸಂ.೬, ಸಂ.೨ ಜನವರಿ–ಜುಲೈ ೨೦೦೫) ಪು.೮೩ ರಿಂದ ೯೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಖರಬಡೆ ಬಿ.ಎ(ಮೂಲ) ರಮೇಶ್ ನಾಯಕ(ಅನು) ಲೇ: ಕಾಗದ ತಯಾರಿಕೆ ಹಾಗೂ ತಾಂತ್ರಿಕತೆ (ಹಸ್ತಪ್ರತಿ ಅಧ್ಯಯನ ಸಂ.ಡಾ.ವೀರೇಶ ಬಡಿಗೇರ ಸಂ.೨, ಸಂ.೨ ಜನವರಿ–ಜುಲೈ ೨೦೦೫) ಪು.೧೦೧ ರಿಂದ ೧೦೮ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಡಿಸೋಜ ಜೆರೆಮ್ ಮಾರ್ಸೆಲ್ ಲೇ: ಓದಿನ ಕ್ರಮಗಳು ಒಂದು ಸೈದ್ಧಾಂತಿಕ ಚರ್ಚೆ(ಕನ್ನಡ ಅಧ್ಯಯನ, ಸಂ. ಡಾ.ಅಮರೇಶ ನುಗಡೋಣಿ ಸಂ.೧೪, ಸಂ.೧, ಜನವರಿ–ಜೂನ್ ೨೦೦೮) ಪು.೧೧೩ ರಿಂದ ೧೨೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬ ಪೆರುಮಾಳ್ ಪಿ(ಮೂಲ) ಮೋಹನಕೃಷ್ಣ(ಅನು) ಲೇ: ತಾಳೆಗರಿ ಹಸ್ತಪ್ರತಿ ಸಂರಕ್ಷಣೆ (ಹಸ್ತಪ್ರತಿ ಅಧ್ಯಯನ ಸಂ.ಡಾ.ವೀರೇಶ ಬಡಿಗೇರ ಸಂ.೨, ಸಂ.೨ ಜನವರಿ–ಜುಲೈ ೨೦೦೫) ಪು.೭೫ ರಿಂದ ೮೨ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಬಿಸೋಯಿ ಕೆ.ಕೆ.(ಮೂಲ) ಕಲವೀರ ಮನ್ವಾಚಾರ್ (ಅನು) ಲೇ: ಒರಿಸ್ಸಾದ ತಾಳೆಗರಿ ಹಸ್ತಪ್ರತಿಗಳು (ಹಸ್ತಪ್ರತಿ ಅಧ್ಯಯನ ಸಂ.ಡಾ.ವೀರೇಶ ಬಡಿಗೇರ ಸಂ.೨, ಸಂ.೨ ಜನವರಿ-ಜುಲೈ ೨೦೦೫) ಪು.೧ ರಿಂದ ೧೩ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಬೋರಲಿಂಗಯ್ಯ ಹಿ.ಚಿ. ಲೇ: ವಿಸ್ಮೃತಿತತ್ವ ಮತ್ತು ದೇಸಿ ತತ್ವ (ಕನ್ನಡ ಅಧ್ಯಯನ ಸಂ.ರಹಮತ್ ತರೀಕೆರೆ, ಚಳಿ ಸಂಚಿಕೆ, ಸಂ.೭, ಸಂ.೨, ತ್ರೈಮಾಸಿಕ ಪತ್ರಿಕೆ, ಅಕ್ಟೋಬರ್-ನವೆಂಬರ್-ಡಿಸೆಂಬರ್ ೨೦೦೧) ಪು.೧ ರಿಂದ ೧೩ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಭಾನುಮತಿ ವೈ.ಸಿ. ಲೇ: ಹಸ್ತಪ್ರತಿ ಸಂಗ್ರಹ, ಸಂಪಾದನೆ ವ್ಯಾಖ್ಯಾನದ ಮಾದರಿಗಳು: ಒಂದು ಟಿಪ್ಪಣಿ(ಹಸ್ತಪ್ರತಿ ವ್ಯಾಸಂಗ ೪ ಸಂ.ಡಾ. ವೀರೇಶ ಬಡಿಗೇರ ಎಸ್.ಆರ್.ಚನ್ನವೀರಪ್ಪ) ಪು.೫೯ ರಿಂದ ೭೦ ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಭಾನುಮತಿ ವೈ.ಸಿ. ಲೇ: ಸಂಸ್ಕೃತ ಹಸ್ತಪ್ರತಿಗಳು ಮತ್ತು ಕನ್ನಡ ಲಿಪಿಕಾರರು(ಹಸ್ತಪ್ರತಿ ಅಧ್ಯಯನ ಸಂ.ಡಾ. ವೀರೇಶ ಬಡಿಗೇರ ಸಂ.೨, ಸಂ.೧ ಜುಲೈ-ಡಿಸೆಂಬರ್ ೨೦೦೪) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಮಲ್ಲಿಕಾರ್ಜುನ ಸಿ. ಬಾಗೋಡಿ ಲೇ: ಸುರಪುರ ಚಿತ್ರಕಲೆ: ಆಪತ್ತು ಮತ್ತು ಸಂರಕ್ಷಣೆ(ಹಸ್ತಪ್ರತಿ ಅಧ್ಯಯನ, ಸಂ. ಡಾ. ವೀರೇಶ ಬಡಿಗೇರ ಸಂ.೬, ಸಂ.೧, ಜುಲೈ-ಡಿಸೆಂಬರ್ ೨೦೦೮, ಸಂ.೬, ಸಂ.೨, ಜನವರಿ-ಜೂನ್ ೨೦೦೯) ಪು.೫೫ ರಿಂದ ೬೧, ೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಮೊಗಳ್ಳಿ ಗಣೇಶ್ ಲೇ: ಮೌಖಿಕ ಪಠ್ಯಗಳ ಭಾಷಿಕ ರೂಪಾಂತರ ಮತ್ತು ಸೃಜನಶೀಲತೆ (ಹಸ್ತಪ್ರತಿ ಅಧ್ಯಯನ ಸಂ. ಡಾ.ವೀರೇಶ ಬಡಿಗೇರ ಸಂ.೨, ಸಂ.೧ ಜುಲೈ-ಡಿಸೆಂಬರ್ ೨೦೦೪) ಪು.೫೦ ರಿಂದ ೬೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪. ರಹಮತ್ ತರೀಕೆರೆ ಲೇ: ಚರಿತ್ರೆಯ ಋಣಭಾರದಿಂದ ಬಿಡುಗಡೆ (ಹಸ್ತಪ್ರತಿ ವ್ಯಾಸಂಗ.೪ ಸಂ. ಡಾ.ವೀರೇಶ ಬಡಿಗೇರ ಎಸ್.ಆರ್.ಚನ್ನವೀರಪ್ಪ) ಪು.೩೩ ರಿಂದ ೪೨ ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ರಹಮತ್ ತರೀಕೆರೆ ಲೇ: ಪ್ರಾಚೀನ ಕೃತಿಗಳ ಸಾಂಸ್ಕೃತಿಕ ಮುಖಾಮುಖಿ ಹೇಗೆ ಮತ್ತು ಏಕೆ?(ಹಸ್ತಪ್ರತಿ ಅಧ್ಯಯನ ಸಂ.ಡಾ. ವೀರೇಶ ಬಡಿಗೇರ, ಸಂ.೧, ಸಂ.೧ ಜುಲೈ-ಡಿಸೆಂಬರ್ ೨೦೦೩) ಪು.೪೪ ರಿಂದ ೬೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ರಾಮಚಂದ್ರೇಗೌಡ ಹಿ.ಶಿ. ಲೇ: ಶಿಷ್ಟ ಕರ್ನಾಟಕದಿಂದ ಜನಪದ ಕರ್ನಾಟಕದ ಕಡೆಗೆ (ಕನ್ನಡ ಅಧ್ಯಯನ ಬಿಸಿಲು ಸಂಚಿಕೆ, ಸಂ.ರಹಮತ್ ತರೀಕೆರೆ, ತ್ರೈಮಾಸಿಕ ಪತ್ರಿಕೆ, ಸಂ.೬, ಸಂ.೪

ಏಪ್ರಿಲ್ ಮೇ ಜೂನ್ ೨೦೦೦) ಪು.೧ ರಿಂದ ೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ

೧೭. ರಾಮಾನುಜನ್ ಎ.ಕೆ.(ಮೂಲ) ಮಹಾಬಲೇಶ್ವರ(ಅನು) ಲೇ: ಮುನ್ನೂರು ರಾಮಾಯಣಗಳು (ಕನ್ನಡ ಅಧ್ಯಯನ, ಸಂ. ಡಾ. ಅಮರೇಶ ನುಗಡೋಣಿ, ಸಂ.೧೪, ಸಂ.೧ ಜನವರಿ-ಜೂನ್ ೨೦೦೮ ಪು.೬, ರಿಂದ ೨೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ವಿಜಯನ್ ಕೆ.(ಮೂಲ) ಮೋಹನ್ ಕುಂಟಾರ್(ಅನು) ಲೇ: ಮಲೆಯಾಳಂ ತಾಳೆಓಲೆ ಹಸ್ತಪ್ರತಿಗಳು(ಹಸ್ತಪ್ರತಿ ಅಧ್ಯಯನ ಸಂ.೨ ಸಂ.೨ ಜನವರಿ-ಜುಲೈ ೨೦೦೫) ಪು.೧೪ ರಿಂದ ೧೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ವೀರೇಶ ಬಡಿಗೇರ ಲೇ: ಗ್ರಂಥಸಂಪಾದನೆಯ ಹಿಂದಿನ ಮನೋಧರ್ಮಗಳು(ಹಸ್ತಪ್ರತಿ ವ್ಯಾಸಂಗ.೫, ಸಂ. ಡಾ. ವೀರೇಶ ಬಡಿಗೇರ) ಪು.೧೪೧ ರಿಂದ ೧೪೭, ೨೦೦೬ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ವೀರೇಶ ಬಡಿಗೇರ ಲೇ: ವಿಷ್ಣುಶರ್ಮನ ಸಂಪ್ರದಾಯದ ಕನ್ನಡ ಪಂಚತಂತ್ರಗಳಲ್ಲಿ ಜನಮುಖಿ ಸಂಸ್ಕೃತಿಯ ಪುನಾರಚನೆಯ ನೆಲೆಗಳು(ಹಲಗೆ ಬಳಪ ಡಾ. ವೀರೇಶ ಬಡಿಗೇರ ೨೦೦೫) ಪು.೪೧ ರಿಂದ ೫೬, ಮಯ ಪ್ರಕಾಶನ, ಕಮಲಾಪುರ

೨೧. ವೀರೇಶ ಬಡಿಗೇರ ಲೇ: ಪಂಡಿತ ಪಾಮರ ಎನ್ನುವ ನಾಜೂಕತನಗಳು(ಹಲಗೆ ಬಳಪ ಡಾ.ವೀರೇಶ ಬಡಿಗೇರ ೨೦೦೫) ಪು.೭೦ ರಿಂದ ೭೭, ಮಯ ಪ್ರಕಾಶನ, ಕಮಲಾಪುರ

೨೨. ವೀರೇಶ ಬಡಿಗೇರ ಲೇ: ಕನ್ನಡ ಗ್ರಂಥಸಂಪಾದನೆ: ಅನುಸಂಧಾನದ ಭಿನ್ನ ದಾರಿಗಳು(ಹಲಗೆ ಬಳಪ ಡಾ. ವೀರೇಶ ಬಡಿಗೇರ ೨೦೦೫) ಪು.೮೩ ರಿಂದ ೮೯, ಮಯ ಪ್ರಕಾಶನ, ಕಮಲಾಪುರ

೨೩. ವೀರೇಶ ಬಡಿಗೇರ ಲೇ: ಸಾಮ್ರಾಜ್ಯಶಾಹಿ ಧೋರಣೆಗಳಾಗಿ ಪಠ್ಯ ಮತ್ತು ಪಾಠಾಂತರಗಳು (ಹಸ್ತಪ್ರತಿ ಅಧ್ಯಯನ, ಸಂ.ಡಾ. ವೀರೇಶ ಬಡಿಗೇರ, ಸಂ.೬, ಸಂ.೧, ಜುಲೈ-ಡಿಸೆಂಬರ್ ೨೦೦೮ ಸಂ.೬, ಸಂ.೨, ಜನವರಿ-ಜೂನ್ ೨೦೦೯) ಪು.೮೬ ರಿಂದ ೯೧, ೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ವೀರೇಶ ಬಡಿಗೇರ ಲೇ: ಭಾಷಿಕ ಸಂಕಥನಕಾರರು(ಹಲಗೆ ಬಳಪ ಡಾ. ವೀರೇಶ ಬಡಿಗೇರ ೨೦೦೫) ಪು.೫೭ ರಿಂದ ೬೯, ಮಯ ಪ್ರಕಾಶನ, ಕಮಲಾಪುರ

೨೫. ವೀರೇಶ ಬಡಿಗೇರ ಲೇ: ಭಾರತೀಯ ಗ್ರಂಥಸಂಪಾದನೆ: ಅನುಸಂಧಾನ ಭಿನ್ನ ನೆಲೆಗಳು (ಹಸ್ತಪ್ರತಿ ಅಧ್ಯಯನ, ಸಂ.ಡಾ.ಕೆ. ರವೀಂದ್ರನಾಥ, ಸಂ.೫, ಸಂ.೧, ಜುಲೈ-ಡಿಸೆಂಬರ್ ೨೦೦೭ ಸಂ.೫, ಸಂ.೨, ಜನವರಿ-ಜೂನ್ ೨೦೦೮) ಪು.೧೦ ರಿಂದ ೨೨, ೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

